# ಗದ್ಯ ಮಣಿಮಾಲೆ





ಸಂಪಾದಕರು:

ದೇ. ಜವರೇಗೌಡ, ಎಂ.ಎ.,
ಸೋ. ಕೆಂ. ರಾಮಣ್ಣ, ಎಂ.ಎ.,



ಕೆ. ಅಂಡ್ ಬ್ರದರ್ಸ್
ವನಗುಡಿ, ಬೆಂಗಳೂರು ೪

# ಗದ್ಯ ಮಣಿ ಮಾಲೆ



ಸಂಪಾದಕರು:
ದೇ. ಜವರೇಗೌಡ, ಎಂ.ಎ.,
ಸೋ. ಕೆಂ. ರಾಮಣ್ಣ, ಎಂ.ಎ.,




ಜಿ. ಕೆ. ಅಂಡ್ ಬ್ರದರ್ಸ್
ಬಸವನಗುಡಿ, ಬೆಂಗಳೂರು ೪

ಮೊದಲ ಮುದ್ರಣ ಜುಲೈ ೧೯೫೬
ಎರಡನೆಯ ಮುದ್ರಣ ಮೇ ೧೯೫೭


ಮುದ್ರಣ :
**ಕಲ್ಯಾಣ್ ಪ್ರಿಂಟರ್ಸ್ (ಪ್ರೈವೇಟ್) ಲಿಮಿಟೆಡ್**
೧೨, ಜಯಚಾಮರಾಜ ರಸ್ತೆ – ಬೆಂಗಳೂರು ೨

**ಬೆಲೆ :**

## ವಿಷಯಾನುಕ್ರಮಣಿಕೆ

# ಗದ್ಯದ ರೂಪರೇಷೆಗಳು

ಅತಿ ಪುರಾತನ ಕಾಲದಿಂದ ಮಾನವ ತನ್ನ ಭಾವ ಅನುಭವ ಆಲೋಚನೆ ಅಭಿಪ್ರಾಯಗಳನ್ನು ಇತರರಿಗೆ ತಿಳಿಸಲು ಒಂದಿಲ್ಲೊಂದು ಸಾಧನವನ್ನು ಬಳಸುತ್ತಿದ್ದಾನೆ. ಆ ಸಾಧನ ವಿಶೇಷಗಳಲ್ಲಿ ಭಾಷೆಯೂ ಒಂದು. ಇತರ ಸಾಧನಗಳಿಗಿರುವಂತೆಯೇ ಭಾಷೆಗೂ ಒಂದು ಮಿತಿಯುಂಟು. ಅದರ ವ್ಯಾಪ್ತಿ ಸಂಕುಚಿತವಾದುದು. ಅತ್ಯಂತ ಸೂಕ್ಷ್ಮವೂ ಗಹನವೂ ಆದ ಭಾವಾನುಭವ ಆಲೋಚನೆಗಳನ್ನೂ, ಅಸಂಖ್ಯಾತ ಮಾನಸಿಕ ವ್ಯಾಪಾರಗಳನ್ನೂ 'ಸ್ಥೂಲ ರೂಪಿ' ಯಾದ ಭಾಷೆ ಸಮಗ್ರವಾಗಿ ಸಮರ್ಪಕವಾಗಿ ಗ್ರಹಿಸಿ ಪ್ರತಿಬಿಂಬಿಸಲಾರದು. ಅದು ಕೇವಲ ಸಂಕೇತ. ಅನೂಚಾನವಾದ ಬಳಕೆಯಿಂದ ಅವಿಚ್ಛಿನ್ನವಾದ ಪರಿಷ್ಕಾರದಿಂದ ಶಬ್ದಕ್ಕೂ ಅರ್ಥಕ್ಕೂ ನಂಟು ಅಂಟಿಕೊಂಡು ಬಂದಿದೆ. ಆದರೂ ನೂತನಾಲೋಚನೆ ತಲೆದೋರಿದಾಗ ಅದನ್ನು ವ್ಯಕ್ತಪಡಿಸಲು ಕವಿಕುಲಗುರುವೂ ಶಬ್ದಾನ್ವೇಷಣೆಗಾಗಿ, ನವೀನ ಶಬ್ದ ನಿರ್ಮಾಣಕ್ಕಾಗಿ ತನ್ನ ಶಕ್ತಿ ಸಾಮರ್ಥ್ಯವನ್ನೆಲ್ಲ ವಿನಿಯೋಗಿಸಬೇಕಾಗುತ್ತದೆ. ಇರುವ ಪದಗಳಿಗೆ ಹೊಸ ಅರ್ಥ ತುಂಬಿ ಅಥವಾ ಹೊಸ ಪದಗಳನ್ನು ಸೃಷ್ಟಿಸಿ ತನ್ನ ಇಷ್ಟಾರ್ಥವನ್ನು ಈಡೇರಿಸಿಕೊಳ್ಳಲು ಅವನು ಪ್ರಯತ್ನಿಸುತ್ತಾನೆ. ದಿನೇ ದಿನೇ ಮೂಡುವ ಹೊಸ ಹೊಸ ವಿಚಾರಗಳು ಮೂರ್ತಸ್ವರೂಪವನ್ನು ತಾಳುವ ಅವಸರದಲ್ಲಿ ಭಾಷೆ ಸಹಜವಾಗಿಯೆ ಅನೇಕ ರೂಪಾಂತರ ಅರ್ಥಾಂತರಗಳನ್ನು ಪಡೆಯುತ್ತದೆ. ಒಟ್ಟಿನಲ್ಲಿ ಮಾನವನ ಮಾನಸಿಕ ವಿಕಾಸಕ್ಕನುಗುಣವಾಗಿ, ಅವನ ಆಶೆ ಆಕಾಂಕ್ಷೆ ಅಭೀಪ್ಸೆಗಳ ಪೂರೈಕೆಗಾಗಿ ಭಾಷೆಯೂ ನಿರಂತರವಾಗಿ, ವಿರಾಡ್ರೂಪಿಯಾಗಿ ಬೆಳೆಯುತ್ತಿರುತ್ತದೆ. ಒಂದು ದೃಷ್ಟಿಯಿಂದ ಭಾಷೆಯ ಇತಿಹಾಸವೆ ಮಾನವಜನಾಂಗದ ಮತ್ತು ಸಂಸ್ಕೃತಿ ಪರಂಪರೆಯ ಇತಿಹಾಸವೆನ್ನಬಹುದು.

ಸಾಮಾನ್ಯವಾಗಿ ವ್ಯಾವಹಾರಿಕ ಭಾಷೆಯ ರೂಪಗಳು ಎರಡು: ಪದ್ಯ ಮತ್ತು ಗದ್ಯ. ಎರಡಕ್ಕೂ ಮಾನವನ ಮಾನಸಿಕ ಕ್ಷೇತ್ರವೇ ಉಗಮಸ್ಥಾನ. ಆದರೆ ಒಂದು ಭಾವಪ್ರಧಾನವಾದುದು, ಮತ್ತೊಂದು ಆಲೋಚನಾಪ್ರಧಾನವಾದುದು. ಯಾವಾಗಲೂ ಭಾವದ ಗತಿ ತೀವ್ರ, ಆಲೋಚನೆಯ ಗತಿ ಮಂದ. ತುಂಬಿ ತುಳುಕಾಡುವ ಕೃಷ್ಣರಾಜ ಸಾಗರದ ಬಾಗಿಲುಗಳನ್ನು ತೆಗೆ

ದಾಗ ಹೊರನುಗ್ಗುವ ನೀರಿನ ವೇಗದಂತೆ ಆವೇಶಪೂರ್ಣವಾದ ಭಾವದ ವೇಗ; ಮಟ್ಟವಾದ ನೆಲದಲ್ಲಿ ಹರಿಯುವ ನದಿಯ ನೀರಿನ ಚಲನೆಯಂತೆ ಆಲೋಚನೆಯ ಚಲನೆ. ಈ ದ್ರುತ ಮತ್ತು ವಿಲಂಬಗತಿಗೆ ತಕ್ಕಂತೆ ಭಾಷೆಯ ರೂಪಸ್ವರೂಪಗಳೂ ಮಾರ್ಪಾಡಾಗುತ್ತವೆ. ಕೋಪ, ದುಃಖ, ಭಯ, ಆಶ್ಚರ್ಯಗಳಿಂದ ಉದ್ರೇಕಗೊಂಡಾಗ ಹೊರಹೊಮ್ಮುವ ಮಾತಿನ ಸರಣಿಯನ್ನೆಲ್ಲರೂ ಬಲ್ಲರು. ಭಾವಾಗ್ನಿಗೆ ಕಲ್ಪನಾಮಾರುತನ ಸಂಪರ್ಕ ದೊರೆತಾಗ ಭಾಷೆ ತನ್ನೆಲ್ಲ ಭಂಗಿಭಣಿತೆಗಳನ್ನು ಪ್ರದರ್ಶಿಸುತ್ತದೆ; ವಿಲಾಸವೈಭವಗಳನ್ನು ಮೆರೆಯುತ್ತದೆ; ಇಡೀ ವಿಶ್ವವನ್ನೇ ಪ್ರತಿಬಿಂಬಿಸುವ ಅಲೌಕಿಕ ಸಾಮರ್ಥ್ಯವನ್ನು ಪಡೆಯಲು ಹಂಬಲಿಸುತ್ತದೆ; ಸಕಲ ಚರಾಚರ ವಸ್ತುಗಳಲ್ಲಿಯೂ ನರ್ತಿಸುತ್ತಿರುವ ನಟರಾಜನ ಲಾಸ್ಯವಿಭ್ರಮವನ್ನು ಸೂರೆಗೊಳ್ಳಲು ಹವಣಿಸುತ್ತದೆ. ಆಗ ಅದು ಸಹಜವಾಗಿಯೇ ತಾಳಲಯಯತಿಪ್ರಾಸನಿಬದ್ಧವಾದ ಛಂದೋರೂಪವನ್ನು ತಾಳುತ್ತದೆ; ಛಂದೋರೂಪವನ್ನು ತಾಳುತ್ತದೆನ್ನುವುದಕ್ಕಿಂತ ಛಂದೋರೂಪಿಯಾಗಿ ಹೊರಹೊಮ್ಮುತ್ತದೆನ್ನುವುದೇ ಮೇಲು. ಪದ್ಯದಲ್ಲಿ ಅಂತಃಸ್ಫೂರ್ತಿಯ ಅಥವಾ ಅಂತರ್ಬೋಧೆಯ ಕಾರ್ಯವೆ ಪ್ರಧಾನ; ಗದ್ಯದಲ್ಲಿ ವಿಚಾರದ ತರ್ಕದ ಜಿಜ್ಞಾಸೆಯ ಕಾರ್ಯವೆ ಪ್ರಧಾನ. ಆದುದರಿಂದ ಪದ್ಯದ ಒಲವು ರಹಸ್ಯಾತ್ಮಕತೆಯ ಕಡೆಗೆ; ಗದ್ಯದ ಒಲವು ವಿಶದತೆಯ ಕಡೆಗೆ. ಪದ್ಯ ಸಂಕ್ಷಿಪ್ತವಾಗಿ ಮುಚ್ಚಿ ಹೇಳುವುದನ್ನು ಗದ್ಯ ಸುರುಳಿ ಸುರುಳಿಯಾಗಿ ಬಿಚ್ಚಿ ತೋರಿಸುತ್ತದೆ. ಪದ್ಯದ ಕುಣಿತಕ್ಕೆ ಅಲಂಕಾರ ಪರಿಕರಗಳು ಬೇಕು; ಗದ್ಯದ ನಡಗೆಗೆ ಅಲಂಕಾರ ಹೊರೆಯಾಗಬಹುದು. ಗದ್ಯದ ಭಾಷೆಯನ್ನು ನದಿಯ ನೀರಿಗೆ ಹೋಲಿಸಬಹುದಾದರೆ, ಪದ್ಯದ ಭಾಷೆಯನ್ನು ಬಾನಿನ ಮುಗಿಲಿಗೆ ಹೋಲಿಸಬಹುದು. ಪದ್ಯದ ಭಾಷೆ ಮೂಡಿದ್ದು; ಗದ್ಯದ ಭಾಷೆ ಕಟ್ಟಿದ್ದು.

ಪದ್ಯಗದ್ಯಗಳ ಭಾಷಾವ್ಯತ್ಯಾಸಕ್ಕೆ ಮಾನಸಿಕ ವ್ಯಾಪಾರವೇ—ಅಂದರೆ ಭಾವ ಆಲೋಚನೆಗಳ ಸ್ವರೂಪ ವ್ಯತ್ಯಾಸವೇ—ಮುಖ್ಯ ಕಾರಣವೆಂದು ಮೇಲೆ ವಿಚಾರಿಸಿದೆ. ಇದರಿಂದ ಪದ್ಯದಲ್ಲಿ ಆಲೋಚನೆಗೆ ಸ್ಥಾನವಿಲ್ಲ, ಗದ್ಯದಲ್ಲಿ ಭಾವಕ್ಕೆ ಅವಕಾಶವಿಲ್ಲ ಎಂದು ಭಾವಿಸಬಾರದು. ಎರಡರಲ್ಲಿಯೂ ಭಾವನಾಂಶ ಕಲ್ಪನಾಂಶ ಚಿಂತನಾಂಶಗಳು ಸಮಪ್ರಮಾಣದಲ್ಲಲ್ಲದಿದ್ದರೂ, ಭಿನ್ನಪ್ರಮಾಣದಲ್ಲಿ ಇದ್ದೇ ಇರುತ್ತವೆ. ಒಂದು ಕಡೆ ಆಲೋಚನೆ ಅಂತರ್ನಿಹಿತವಾಗಿದ್ದರೆ ಮತ್ತೊಂದು ಕಡೆ ಭಾವ ಅಂತರ್ನಿಹಿತವಾಗಿರುತ್ತದೆ. ಪದ್ಯದಲ್ಲಿ ಭಾವೈಕ್ಯಕ್ಕೆ ಪ್ರಾಶಸ್ತ್ಯ, ಗದ್ಯದಲ್ಲಿ ಆಲೋಚನಾ ವಿಧಾನಕ್ಕೆ ಪ್ರಾಶಸ್ತ್ಯ. ಆದುದರಿಂದ ಪದ್ಯದಲ್ಲಿ ವಾಕ್ಯಗಳು ತರ್ಕಬದ್ಧವಾಗಿ ಕಾರ್ಯ-ಕಾರಣಬದ್ಧವಾಗಿ

ಇಲ್ಲದಿರಬಹುದು; ಆದರೆ ಗದ್ಯದಲ್ಲಿ ಈ ಗುಣಕ್ಕೆ ವಿಶೇಷ ಮನ್ನಣೆ. ಗದ್ಯದಲ್ಲಿಯೂ ಗತಿಲಯಯತಿಪ್ರಾಸಗಳಿಗೆ ಅವಕಾಶವಿದೆ. ಆದರೆ ಅವು ಪದ್ಯದಲ್ಲಿ ಬರುವಂತೆ ನಿಯತವಾಗಿ ಸತತವಾಗಿ ಬರುವುದಿಲ್ಲ. ಅವು ಗದ್ಯದ ಅನಿವಾರ್ಯ ಲಕ್ಷಣಗಳಲ್ಲದಿದ್ದರೂ, ಸುಲಕ್ಷಣಗಳೆಂದೇ ಹೇಳಬೇಕು. ಸ್ಥೂಲವಾಗಿ ಗದ್ಯ ಪದ್ಯಗಳ ರೂಪ ರೇಷೆಗಳನ್ನು ಪ್ರತ್ಯೇಕವಾಗಿ ಗುರುತಿಸಿ ನಿರ್ದೇಶಿಸಬಹುದಾದರೂ ಅವುಗಳ ಎಲ್ಲೆಗಟ್ಟುಗಳನ್ನು ಗಡಿಗಲ್ಲುಗಳಿಂದ ಪ್ರತ್ಯೇಕಿಸಿ, ಭೌಗೋಲಿಕ ವಿಭಾಗಗಳನ್ನು ನಿರ್ಣಯಿಸಲಾಗುವುದಿಲ್ಲ. ಏಕೆಂದರೆ ಒಂದೇ ಮೂಲದಲ್ಲಿ ಹುಟ್ಟಿ, ಬೇರೆ ಬೇರೆಯಾಗಿ ಹರಿದು, ಮತ್ತೆ ಜತೆಗೂಡಿ ಹರಿಯುವ ನದಿಗಳಂತೆ ಅವು ವೃದ್ಧಿಗೊಳ್ಳುತ್ತಿವೆ. ಆದುದರಿಂದ ಅವು ಪರಸ್ಪರ ವಿರೋಧಿಗಳಲ್ಲ, ಪರಸ್ಪರ ಪೂರಕಗಳು, ಮನುಷ್ಯನ ಕಣ್ಣುಗಳಿದ್ದಂತೆ.

ಗದ್ಯವೂ ಪದ್ಯದಂತೆ ಕಲೆಯೆ. ಆತ್ಮಾಹ್ಲಾದದ ಮೂಲಕ ಆತ್ಮೋದ್ಧಾರವನ್ನು ಸಾಧಿಸುವ ಸಾಮರ್ಥ್ಯ ಅದರಲ್ಲಿಯೂ ಇದೆ. ಪದ್ಯ ಶಕ್ತಿದಾಯಿ; ಮಾನವನನ್ನು ಅಳಿಸಿ ಅಪ್ಪಳಿಸಿ ನಗಿಸಿ ರೇಗಿಸಿ ಕೆರಳಿಸಿ ಕುಣಿಸಿ ಪ್ರಚೋದಿಸಿ ಪ್ರೇರಿಸಿ ಅಣಕಿಸಿ ಕುತೂಹಲಗೊಳಿಸಿ ಒಲಿಸಿಕೊಂಡು ತತ್ತ್ವೋಪದೇಶ ಮಾಡುವ, ಅವನನ್ನು ಉದ್ಧರಿಸುವ ಶಕ್ತಿ ಅದರಲ್ಲಿದೆಯೆಂದೂ; ಗದ್ಯ ಜ್ಞಾನದಾಯಿ; ತರ್ಕದಿಂದ ಜಿಜ್ಞಾಸೆಯಿಂದ ವಾದದಿಂದ ವಿಚಾರದಿಂದ ಜ್ಞಾನಾಭಿವೃದ್ಧಿಗೆ ಅವಕಾಶ ನೀಡುತ್ತದೆಂದೂ ಹೇಳುತ್ತಾರೆ. ಇದರಿಂದ ಗದ್ಯ ಕಲೆಯಲ್ಲವೆಂಬ ಭ್ರಾಂತಿ ಉಂಟಾಗಬಹುದು. ಸುಂದರವಲ್ಲದ್ದು, ಆನಂದವನ್ನು ನೀಡಲಾರದುದು ಕಲೆಯಲ್ಲ. ಸೌಂದರ್ಯ ಕಲೆಯ ಪ್ರಧಾನಾಂಶ. ಅದು ಇಲ್ಲದೆಡೆ ಕಲೆಯಿರುವುದಿಲ್ಲ. ಕೇಶಿರಾಜನ ಶಬ್ದ ಮಣಿದರ್ಪಣ ಪಾಂಡಿತ್ಯದಿಂದ ಗಾಂಭೀರ್ಯದಿಂದ ತುಂಬ ತೂಕವಾಗಿ ಕಂಡರೂ ಅದು ವಿಕ್ರಮಾರ್ಜುನ ವಿಜಯದಂತೆ ಆಕರ್ಷಕವಾಗಲಾರದು. ಗದ್ಯ ಗ್ರಂಥವಾದ ಮಾತ್ರಕ್ಕೆ ಗಿಬ್ಬನ್‌ನ "ರೋಮನ್ ಸಾಮ್ರಾಜ್ಯದ ಅವನತಿ ಮತ್ತು ಪತನ" ಕಲಾಕೃತಿಯ ಪಟ್ಟಕ್ಕೇರದೆಂದು ಹೇಳಲಾಗದು. ಪದ್ಯವಾಗಲಿ ಗದ್ಯವಾಗಲಿ ಸಾಹಿತ್ಯದ ಪಟ್ಟಕ್ಕೇರಬೇಕಾದರೆ ಕಲಾತ್ಮಕವಾಗಿರಲೇಬೇಕು.

ಕಲೆಯನ್ನು ಸಾಮಾನ್ಯವಾಗಿ ಎರಡು ವಿಭಾಗವಾಗಿ ವಿಂಗಡಿಸುವುದುಂಟು: (1) ಆತ್ಮನಿಷ್ಠ, ರಸಾತ್ಮಕ ಅಥವಾ ಆನಂದಾತ್ಮಕ ಮತ್ತು (2) ಲೋಕನಿಷ್ಠ, ವಸ್ತುನಿಷ್ಠ ಅಥವಾ ಪ್ರಯೋಜನಾರ್ಥಕ. ಇಂಗ್ಲಿಷಿನಲ್ಲಿ ಮೊದಲನೆಯದನ್ನು Fine Arts ಎಂದೂ, ಎರಡನೆಯದನ್ನು Useful Arts ಎಂದೂ; ಅಥವಾ ಮೊದಲನೆಯದನ್ನು Arts ಎಂದೂ, ಎರಡನೆಯದನ್ನು

Crafts ಎಂದೂ ಕರೆಯುವುದುಂಟು. ಗದ್ಯವನ್ನು Craft ಎನ್ನುವ ಗುಂಪಿಗೆ ಸೇರಿಸುವುದುಂಟು. ಜ್ಞಾನಲಾಭ ಗದ್ಯದ ಪರಮೋದ್ದೇಶವೆಂಬ ಭಾವನೆ ಆ ಅಭಿಪ್ರಾಯಕ್ಕೆಡೆಗೊಟ್ಟಿದೆ. ಚರಿತ್ರೆ ಉಪನ್ಯಾಸ ಮೊದಲಾದುವುಗಳಿಗೆ ಸಂಬಂಧಿಸಿದ ಗದ್ಯ ಗ್ರಂಥಗಳನ್ನು ಆ ಹೆಸರಿನಿಂದ ಕರೆಯಬಹುದಾದರೂ, ಉತ್ತಮ ಕಥೆಕಾದಂಬರಿ ಪ್ರಬಂಧಗಳನ್ನು Arts ಎಂಬ ಹೆಸರಿನಿಂದಲೇ ಕರೆಯ ಬೇಕಾಗಬಹುದು.

ಗದ್ಯ ಪದ್ಯಗಳ ತಾರತಮ್ಯ ಗ್ರಹಣದನಂತರ ಗದ್ಯದ ರೂಪಸ್ವರೂಪ ಗಳನ್ನೂ ಅದರ ಲಕ್ಷಣಗಳನ್ನೂ ಸೂಕ್ಷ್ಮವಾಗಿ ವಿವರಿಸಬಹುದು. ನಮ್ಮ ದಿನಬಳಕೆಯ ಮಾತು ಕತೆ ವಾದ ವಿವಾದ ಭಾಷಣ ಸಂಭಾಷಣೆ ಎಲ್ಲವೂ ಸಾಮಾನ್ಯವಾಗಿ ಗದ್ಯರೂಪದಲ್ಲಿರುತ್ತದೆ. ಅಂದರೆ ನಮ್ಮ ಮಾತಿನ ಸರಣಿ ಯನ್ನೇ ಗ್ರಾಂಥಿಕ ಗದ್ಯದಲ್ಲಿಯೂ ಕಾಣಬಹುದು. ನಾವಾಡುವ ಮಾತಿ ನಲ್ಲಿ ಕರ್ತೃ ಕರ್ಮ ಕ್ರಿಯೆಗಳೂ ಅವುಗಳ ಅಂಗ ಪ್ರತ್ಯಂಗಗಳೂ ಒಂದು ಕ್ರಮದಲ್ಲಿ ಒಂದು ಹದದಲ್ಲಿ, ತರತರದ ಹೂಗಳನ್ನು ಒಪ್ಪವರಿತು ಓರಣವಾಗಿ ಪೋಣಿಸುವಂತೆ, ಬರುತ್ತವೆ. ಒಂದೆರಡು ಉದಾಹರಣೆಗಳಿಂದ ಈ ವಿಷಯ ವನ್ನು ಸ್ಪಷ್ಟಪಡಿಸಬಹುದು.

| | |
|---|---|
| (1) ಇಲಿಯು ಓಡಿತು | (1) ಓಡಿತಿಲಿ |
| (2) ಬೆಕ್ಕು ಬಂದಿತು | (2) ಬಂದಿತು ಬೆಕ್ಕು |
| (3) ರಾಮು ಕೆರೆಯ ತಡಿಗೆ ಹೋದನು | (3) ಹೋದ ರಾಮು ಕೆರೆಯ ತಡಿಗೆ |

ಈ ಮೂರು ಜೋಡಿಯ ವಾಕ್ಯಗಳ ಸರಣಿಯನ್ನೂ, ಕರ್ತೃ ಕರ್ಮ ಕ್ರಿಯೆಗಳ ಹಂಚಿಕೆಯನ್ನೂ ಪರಿಶೀಲಿಸಿದರೆ ಸದ್ಯದಲ್ಲಿ ಅವು ಕ್ರಮ ತಪ್ಪ ದೆಯೂ, ಪದ್ಯದಲ್ಲಿ ಅದಲು ಬದಲಾಗಿಯೂ ಬಂದಿರುವುದು ಸ್ಪಷ್ಟವಾಗುತ್ತದೆ. ಪದ್ಯದಲ್ಲಿ ಪದಗಳು ಭಾವಲಯಾನುಸಾರಿಯಾದರೆ ಗದ್ಯದಲ್ಲಿ ಅರ್ಥಾನುಸಾರಿ. ಭಾವಾನುಗುಣವಾಗಿ ವಾಕ್ಯಗಳು ಪದ್ಯದಲ್ಲಿ ಹೆಣಿಗೆಗೊಂಡರೆ, ತಡೆದು ತಡೆದು, ನಿಂತು ನಿಂತು, ಮೊಟಕು ಮೊಟಕಾಗಿ ಮುಂದುವರಿದರೆ, ಗದ್ಯದಲ್ಲಿ ವಾಕ್ಯಗಳು ನಿರಂತರವಾಗಿ ನಿರರ್ಗಳವಾಗಿ ಮುಂದುವರಿಯುತ್ತವೆ.

ಪದ್ಯಶಿಲ್ಪಿಯಂತೆ ಗದ್ಯಶಿಲ್ಪಿಯೂ ಮಾತಿನ ಮಲ್ಲ, ಮಾತಿನ ಗಾರುಡಿಗ ನೆಂಬುದನ್ನು ಮರೆಯಬಾರದು; ಅವನೂ ಮಾತಿನ ಮರ್ಮವನ್ನು ಅರ್ಥಧ್ವನಿ ಗಳನ್ನು ನಾದಸಂಪತ್ತು ಭಾವಸಂಪತ್ತು ರಸಸಂಪತ್ತುಗಳನ್ನು ನಯನುಣ್ಪು ಗಳನ್ನು ಬಣ್ಣ ಗುಣ್ಪಗಳನ್ನು ಪೆಂಪುಕಂಪುಗಳನ್ನು ಓರೆಕೋರೆಗಳನ್ನು ಗತ್ತು

ವರಸೆಗಳನ್ನು ಬನಿಪಾಕಗಳನ್ನು ಒನಪು ಒಯ್ಯಾರಗಳನ್ನು ಸೂಕ್ಷ್ಮವಾಗಿ ಕಂಡಿರಬೇಕು. ತರ್ಕಬದ್ಧವಾದ ವಿಚಾರಸರಣಿ, ಕಾರಣ–ಕಾರ್ಯಸಂಬಂಧಿಯಾದ ಆಲೋಚನಾ ವಿಧಾನ, ಗಹನವಾದ ತತ್ತ್ವಜ್ಞಾನ, ಇವುಗಳನ್ನು ಸ್ಫುಟವಾಗಿ ವ್ಯಕ್ತಗೊಳಿಸಬಲ್ಲ ಪದಸಂಪತ್ತು ಮತ್ತು ಪದಸಂಘಟನಾರೀತಿ, ಪದಮೈತ್ರಿ ವಾಕ್ಯಮೈತ್ರಿಯನ್ನು ಸಾಧಿಸುವ ಚತುರತೆ—ಇವು ಉತ್ತಮ ಗದ್ಯಲೇಖಕನಲ್ಲಿರಬೇಕಾದ ಗುಣಗಳು. ಕಲೆಯ ಜೀವಂತ ಲಕ್ಷಣಗಳಾದ ಆಯ್ಕೆ ಮತ್ತು ಜೋಡಣೆ ಇಲ್ಲಿಯೂ ಅತ್ಯಾವಶ್ಯಕ. ಪದಗಳ ಗುಣ ದೋಷಗಳನ್ನು ಮರೆಯಬಾರದು. ಅತಿವ್ಯಾಪ್ತಿ ಅಲ್ಪವ್ಯಾಪ್ತಿ, ಹೀನಾರ್ಥ ವಿಪರೀತಾರ್ಥ ಅಲ್ಪಾರ್ಥ—ಇವುಗಳನ್ನು ಗಮನಿಸಲೇಬೇಕು. ಸ್ಪಷ್ಟವಾದ ಆಲೋಚನೆ, ಅದಕ್ಕೆ ತಕ್ಕ ಮಾತಿನ ಮೋಡಿ, ಗುರುಲಘುಗಳ ಸರಳ ಪರುಷಾಕ್ಷರಗಳ ಉಚಿತವಿನ್ಯಾಸದಿಂದುಂಟಾಗುವ ಅಪೂರ್ವ ಸೊಗಸು—ಇದೇ ಗದ್ಯದ ಮರ್ಮ. ಆಲೋಚನೆಯೆ ಪದವಾಗಿ, ಪದವೇ ಆಲೋಚನೆಯಾದಾಗ ಗದ್ಯದ ವಿಜಯ ಪತಾಕೆ ಹಾರಾಡುತ್ತದೆ. ಸರಿಯಾಗಿ ಬಳಸಿದರೆ ಮಾತೇ ಜ್ಯೋತಿರ್ಲಿಂಗವಾಗುತ್ತದೆ.

ಸ್ವಾತಿಯ ಹನಿ ಮುತ್ತಿನ ಚಿಪ್ಪನ್ನು ಸೇರಿ ಮುತ್ತಾಗುವಂತೆ ಮಾತು ಶ್ರೇಷ್ಠ ಸಾಹಿತಿಯ ಕೈಯಲ್ಲಿ ವಿದ್ಯುದಾಗಾರವಾಗುತ್ತದೆ. ಖಡ್ಗ ವೀರಯೋಧನ ಬಾಹುವನ್ನಲಂಕರಿಸಿದಾಗ ಮಹಿಮಾಸ್ಪದವಾಗುತ್ತದೆ. ಹಾಗೆಯೇ ಮಾತೂ ನಿಪುಣ ಬರೆಹಗಾರನ ಕೈಯಲ್ಲಿ ಅದ್ಭುತ ಚೈತನ್ಯವನ್ನು ಪಡೆಯುತ್ತದೆ. ಮಾತು ನಾಣ್ಯವಿದ್ದಂತೆ. ಚೆನ್ನಾಗಿರುವ ತನಕ ಅದನ್ನು ಯಾರು ಬೇಕಾದರೂ ಉಪಯೋಗಿಸಬಹುದು. ಸವೆದುಹೋದಮೇಲೆ ಅದು ಯಾರಿಗೂ ಬೇಡವಾಗುತ್ತದೆ. ಆದರೆ ಅದು ಮತ್ತೆ ಉತ್ತಮ ಸಾಹಿತಿಯ ಕೈಗೆ ಸೇರಿದರೆ ಹಿಂದಿನ ನಾಣ್ಯತೆಯನ್ನು ಪಡೆಯುತ್ತದೆ. ಅದನ್ನು ತನ್ನ ಪ್ರತಿಭೆಯ ಎರಕದಲ್ಲಿ ಹೊಯ್ದು ಜೀವದಾನ ಮಾಡುತ್ತಾನೆ. ಹಳೆಯ ಪದಗಳೆಲ್ಲ ಮೂರ್ಛಾವಸ್ಥೆಯಲ್ಲಿರುತ್ತವೆ, ಕಲ್ಲಾದಹಲ್ಯೆಯಂತಿರುತ್ತವೆ; ದಿವ್ಯ ಮುನೀಶ್ವರನ ಕಮಂಡಲೋದಕದ ಸಿಂಚನೆಯಿಂದ ಅರಿವು ಮರಳುವಂತೆ, ರಾಮ ಪಾದದ ಸೋಂಕಿನಿಂದ ಅಹಲ್ಯೆ ಕಲ್ತನವನ್ನುಳಿಯುವಂತೆ, ಕವಿಬ್ರಹ್ಮನ ಸಂಪರ್ಕ ಮಹಿಮೆಯಿಂದ ಪದಗಳಿಗೆ ಹೊಸ ಬದುಕು ಉದಯವಾಗುತ್ತದೆ.

ಪದಗಳ ಮೂಲದ್ರವ್ಯ ಅಕ್ಷರ; ವಾಕ್ಯಗಳ ಮೂಲಮಾನ ಪದಗಳು. ಗಂಡ ಹೆಂಡತಿಯೊಂದಿಗೆ ಹೆಂಡತಿ ಗಂಡನೊಂದಿಗೆ, ನೆರೆಯವರು ನೆರೆಯವರೊಂದಿಗೆ ಹೊಂದಿಕೊಂಡು ಹೋದರೆ ಸಂಸಾರಜೀವನ, ಸಮಾಜಜೀವನ

ಮಧುರವಾಗಿ ಸಾಗುತ್ತದೆ. ಹಾಗೆಯೇ ನೆರೆಹೊರೆಯ ಪದಗಳಲ್ಲಿ ಮಧುರ ಮೈತ್ರಿ ಸಂಸ್ಥಾಪಿತವಾಗಬೇಕು. ಆಲೋಚನೆಗೆ ತಕ್ಕಂತೆ ಪದಗಳು ಬಿಡಿಬಿಡಿಯಾಗಿರಬೇಕು, ಇಲ್ಲವೆ ದೀರ್ಘವಾಗಿರಬೇಕು, ಇಲ್ಲವೆ ಸಮಾಸವಾಗಿರಬೇಕು. ಯಾವ ಪದವೂ ಸಿಕ್ಕು ಸಿಕ್ಕಾಗಿ ಗಂಟು ಗಂಟಾಗಿ ತಡೆತಡೆದು ನಡಗೆ ಕುಂಟುವಂತಾಗಬಾರದು. ವಿಶೇಷಣಗಳು ಸಂಸ್ಕೃತ ಜೀವನದ ವಿಶ್ಲೇಷಾತ್ಮಕ ಮನಸ್ಸಿನ ಪರಿಪಕ್ವಸ್ಥಿತಿಯನ್ನು ಎತ್ತಿ ತೋರಿಸುತ್ತವೆಯಾದರೂ, ಅವುಗಳನ್ನು ಮಿತವಾಗಿ ಹದವಾಗಿ ಹಾಳತವಾಗಿ ಬಳಸಬೇಕು. ಅವುಗಳ ಬಳಕೆಯಿಂದ ಆಲೋಚನಾ ಪ್ರವಾಹಕ್ಕಾಗಲೀ ಕ್ರಿಯಾ ವೇಗಕ್ಕಾಗಲೀ ಅರ್ಥ ಸ್ಪಷ್ಟತೆಗಾಗಲಿ ಅಡಚಣೆಯಾಗಬಾರದು. ಹಾಗೆಯೇ ಉಪಮೆ ರೂಪಕಾದಿಗಳು ಕೇವಲ ಅಲಂಕಾರಿಕವಾಗಿ ಬರದೆ ಪ್ರದೀಪನಾರ್ಥವಾಗಿ ಬರಬೇಕು. ಒಂದು ವಾಕ್ಯದ ಎಲ್ಲ ಪದಗಳ ಗುರಿಯೂ ಒಂದೇ ಆಗಿರಬೇಕು. ಎತ್ತು ಏರಿಗೆ ಎಮ್ಮೆ ನೀರಿಗೆ ಎಳೆಯುವಂತಾಗಬಾರದು. ಆಲೋಚನೆಗಳ ಗಹನತೆ ತೀವ್ರತೆ ಗಾಂಭೀರ್ಯಗಳಿಗನುಗುಣವಾಗಿ ವಾಕ್ಯಗಳ ರಚನೆ, ಉಚಿತಪದಪ್ರಯೋಗ ಅವುಗಳ ದೀರ್ಘಾ-ದೀರ್ಘತೆ, ಅವುಗಳ ಯತಿಲಯಗಳು ದ್ರುತಗತಿ ಮತ್ತೇಭಗತಿ ವೃಷಭಗತಿ ಅಶ್ವಗತಿ ಹರಿಣಗತಿಗಳು ನಿರ್ಧಾರಗೊಳ್ಳುತ್ತವೆ. ಮುಂದಿನ ವಾಕ್ಯ ಹಿಂದಿನ ವಾಕ್ಯದಿಂದ ಸಹಜವಾಗಿ ಅನಿವಾರ್ಯವಾಗಿ, ಬಳ್ಳಿಯಿಂದ ಹೂವು ಹೊರಹೊಮ್ಮುವಂತೆ, ಹೊಮ್ಮಬೇಕು. ಅಂದರೆ ಅವುಗಳಲ್ಲಿ ಸಾವಯವ ಸಂಬಂಧವಿರಬೇಕು. ಒಂದೇ ಒಂದು ಅಭಿಪ್ರಾಯವನ್ನು ವ್ಯಕ್ತಪಡಿಸುವ, ವಿಸ್ತರಿಸುವ, ವಿವರಿಸುವ ವಾಕ್ಯಗಳ ಗುಂಪಿಗೆ ವಾಕ್ಯಶ್ರೇಣಿ (Paragraph) ಎಂದು ಹೆಸರು. ಈ ವಾಕ್ಯಶ್ರೇಣಿಯ ಮೊದಲ ವಾಕ್ಯಕ್ಕೂ ಕೊನೆಯ ವಾಕ್ಯಕ್ಕೂ ಯಾವ ಅಂಶದಲ್ಲಿಯೂ ವಿರೋಧವಿರಬಾರದು; ಕೃತಕತೆ ತಲೆದೋರಕೂಡದು. ಸಾರಳ್ಯ, ಸಮತೂಕ, ಸ್ಪಷ್ಟತೆ, ಲಲಿತಬಂಧ, ಪ್ರಸನ್ನತೆ, ಅವಿರೋಧ ಗಮನ, ಏಕೋದ್ದೇಶ ಸಾಧನೆ, ಸ್ಫುಟತ್ವ—ಇವು ವಾಕ್ಯರಚನೆಯಲ್ಲಿ ಸಾಧಿಸಬೇಕಾದ ಗುಣಗಳು. ಅರ್ಥಾಭಿವ್ಯಕ್ತಿ, ಉಚಿತ ಭಾಷಾಪ್ರಯೋಗ, ಶಾಶ್ವತವಾದ ಆನಂದೋತ್ಪಾದನೆ–ಇವು ಗದ್ಯದ ಕಾರ್ಯಗಳೆಂದು ಎ. ಸಿ. ವಾರ್ಡ್* ಹೇಳಿರುವುದನ್ನಿಲ್ಲಿ ಗಮನಿಸಬಹುದು.

ಸಾಹಿತ್ಯ ವ್ಯಾಸಂಗದಿಂದ ಮನಸ್ಸಿಗೆ ಆನಂದವುಂಟಾಗುತ್ತದೆ; ಒಂದೊಂದು ಸಾಹಿತ್ಯ ಪ್ರಕಾರದಿಂದ ಒಂದೊಂದು ಬಗೆಯ ಆನಂದ ಒದಗುತ್ತದೆ. ಕಥೆ ಕಾದಂಬರಿ ಪ್ರಬಂಧ ಜೀವನಚರಿತ್ರೆ ಉಪನ್ಯಾಸ ಪ್ರವಾಸಕಥೆ ಹರಟೆ

* Foundations of English Prose—A. C. Ward.

ವಿಮರ್ಶೆ ನಾಟಕ—ಈ ಒಂದೊಂದು ಗದ್ಯಪ್ರಕಾರದಿಂದ ಉಂಟಾಗುವ ಆನಂದ ಒಟ್ಟನಲ್ಲಿ ಒಂದೆಯಾದರೂ, ಸ್ವರೂಪದಲ್ಲಿ ಅಲ್ಪವ್ಯತ್ಯಾಸವಿರುತ್ತದೆ. ಮಾನವನ ವಿವಿದೋದ್ದೇಶ, ವಿವಿಧರುಚಿ–ಅಭಿರುಚಿ, ವಿವಿಧ ಸಂಸ್ಕಾರ ಪರಿಷ್ಕಾರಗಳಿಗನುಗುಣವಾಗಿ ಈ ವಿವಿಧ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡಿವೆ. ಗದ್ಯ ಒಂದೊಂದು ಪ್ರಕಾರಕ್ಕೂ ಹೊಸ ರೂಪ ರೀತಿಗಳನ್ನು ತಳೆಯಬೇಕಾಗುತ್ತದೆ. ಕಾದಂಬರಿಯ ಗದ್ಯ ಸಮತಲ ಭೂಮಿಯ ನದಿಯಂತೆ ಗಂಭೀರವಾಗಿ ತುಂಬಿಕೊಂಡು ಅಲ್ಲೋಲಕಲ್ಲೋಲವಿಲ್ಲದೆ ನಿದಾನವಾಗಿ ಯಾವ ಅಡಚಣೆಯೂ ಇಲ್ಲದೆ ಸಾಗಿದರೆ, ಕಥೆಯ ಗದ್ಯ ಇಳಿಜಾರಿನ ಹೊಳೆಯಂತೆ ತೀವ್ರವಾಗಿ ಓಡುತ್ತದೆ. ಕಾದಂಬರಿಯಲ್ಲಿ ವರ್ಣನೆ, ವಿವರಣೆ, ಸಂಭಾಷಣೆಗಳು ಬರುವುದರಿಂದ ಎಲ್ಲ ವಿಧದ ಗತ್ತಿನ ಗದ್ಯಕ್ಕೂ ಅವಕಾಶವುಂಟು. ಸನ್ನಿವೇಶ ಸಂದರ್ಭ ಪಾತ್ರಗಳಿಗೆ ತಕ್ಕಂತೆ ಬಿಡಿಬಿಡಿ ಪದಗಳು, ಸಮಾಸಪದಗಳು, ದೀರ್ಘ ಸಮಾಸಗಳು, ದೀರ್ಘವಾಕ್ಯಗಳು, ಸಣ್ಣ ಸಣ್ಣ ವಾಕ್ಯಗಳು ಬರುತ್ತವೆ. ವಸ್ತುಪಾತ್ರ ಕ್ರಿಯೆಗಳ ವರ್ಣನೆಗೆ ಅನುಕೂಲವಾಗುವ ವರ್ಣನಾತ್ಮಕ ಗದ್ಯಕ್ಕೂ, ಸುಖ ದುಃಖ ಕೋಪ ಶೃಂಗಾರ ಹಾಸ್ಯ ಅಣಕ ಹಠ ದೌಷ್ಟ್ಯ ದೌರ್ಜನ್ಯ ಮೊದಲಾದ ಭಾವಗಳನ್ನೂ ಭಾವಸ್ಥಿತಿಯನ್ನೂ ಸುಸ್ಪಷ್ಟಗೊಳಿಸ ತಕ್ಕಂಥ ಭಾವನಿಷ್ಠಗದ್ಯಕ್ಕೂ ಅಲ್ಲಿ ಅವಕಾಶವುಂಟು. ನಾಟಕದ ಗದ್ಯವೇ ಬೇರೆ. ಮನುಷ್ಯಹೃದಯದ ಅನಂತಾನಂತ ರಾಗದ್ವೇಷಾದಿ ಭಾವಗಳನ್ನು ವ್ಯಕ್ತಪಡಿಸುವುದು ನಾಟಕದ ಉದ್ದೇಶ. ವಿವರಣೆಗಾಗಲಿ ವಿಸ್ತಾರವಾದ ವರ್ಣನೆಗಾಗಲಿ ಅಲ್ಲಿ ಅವಕಾಶವಿಲ್ಲ. ಆದುದರಿಂದ ಹಿತಮಿತವಾದ ಭಾವ ಪ್ರಚೋದಕವಾದ ಗದ್ಯಕ್ಕೆ ಮಾತ್ರ ಅಲ್ಲಿ ಸ್ಥಾನ. ಸಂಭಾಷಣೆ ನಾಟಕದ ಉಸಿರಾದುದರಿಂದ ಬಳಕೆಯ ಮಾತುಗಳಿಗೆ ಅದೀರ್ಘ ಪದಗಳಿಗೆ ಹೆಚ್ಚು ಮರ್ಯಾದೆ ಸಲ್ಲುತ್ತದೆ. ಭಾವಪ್ರಬಂಧದ ಭಾಷೆ ಪದ್ಯದ ಭಾಷೆಗೆ ಹತ್ತಿರವಾಗಿರುತ್ತದೆ. ಜೀವನ ಚರಿತ್ರೆಯಲ್ಲಿ ಘಟನಾವಳಿಗಳ ವಾಸ್ತವಿಕ ನಿರೂಪಣೆಗೆ ಮಾತ್ರ ಪುರಸ್ಕಾರವಿರುವುದರಿಂದ ಅರ್ಥವೈಶದ್ಯಕ್ಕೂ ಸರಳ ಸುಲಭ ಸರಣಿಯ ಭಾಷೆಗೂ ಹೆಚ್ಚು ಮನ್ನಣೆ. ಕಂಡದ್ದನ್ನು ಕಂಡಹಾಗೆ ಹೇಳುವುದು ಪ್ರವಾಸ ಕಥೆಯ ಮುಖ್ಯ ಗುಣ. ಇದರಲ್ಲಿ ಸಾಹಿತಿಯ ಪ್ರಮಾಣಿಕತೆ ಮುಖ್ಯ. ಅವನು ಪ್ರಮಾಣಿಕನಾಗಿದ್ದರೆ, ಅವನ ದೃಷ್ಟಿ ಸೂಕ್ಷ್ಮವಾಗಿಯೂ ನಿರ್ಮಲವಾಗಿಯೂ ಇದ್ದರೆ ಭಾಷೆ ತಾನೇ ತಾನಾಗಿ ವಿಕಾಸಗೊಳ್ಳುತ್ತದೆ. ವಿಮರ್ಶೆಯಲ್ಲಿ ಆಲೋಚನೆ ವಿಚಾರ ಗಹನವಾಗಿ ನಿಷ್ಪಕ್ಷಪಾತವಾಗಿರಬೇಕು; ಓದುಗರಲ್ಲಿ ವಿಚಾರಶಕ್ತಿ ಆಲೋಚನಾನುರಕ್ತಿ ಬೆಳೆಯುವಂತೆ ಮಾಡಬೇಕು.

ಹಾಗೆ ಮಾಡಬಲ್ಲ ಗದ್ಯವನ್ನು ವಿವರಣಾತ್ಮಕಗದ್ಯವೆಂದು ಕರೆಯುತ್ತೇವೆ.

ಗದ್ಯ ತಾಳುವ ವಿವಿಧಾಕಾರ ರೂಪಗಳು ಇಷ್ಟೇ ಅಲ್ಲ; ಚರಿತ್ರೆ ಭೂಗೋಳ, ಸಮಾಜಶಾಸ್ತ್ರ, ತತ್ತ್ವಶಾಸ್ತ್ರ, ಭೌತಶಾಸ್ತ್ರ, ಯಂತ್ರಶಾಸ್ತ್ರ, ರಸಾಯನಶಾಸ್ತ್ರ, ಸಸ್ಯಶಾಸ್ತ್ರ, ಭೂಗರ್ಭಶಾಸ್ತ್ರಗಳಲ್ಲೆಲ್ಲ ಗದ್ಯದ್ದೇ ಅಧಿಕಾರ. ವರ್ತಮಾನ ಪತ್ರಿಕೆಗಳಂತೂ ಗದ್ಯವನ್ನು ನಾನಾವಿಧದಲ್ಲಿ ಬೆಳೆಸುತ್ತಿವೆ. ಈ ಎಲ್ಲ ರೀತಿಯ ಗದ್ಯದ ರೂಪಸ್ವರೂಪಗಳ ವಿವರಣೆ ಇಲ್ಲಿ ಅನಗತ್ಯ. ಲೌಕಿಕ ಪ್ರಯೋಜನವೇ ಇವುಗಳ ಪ್ರಧಾನೋದ್ದೇಶ. ಸ್ಪಷ್ಟತೆ ವಿಶದತೆ ಸ್ಫುಟತ್ವ—ಇವು ಇಲ್ಲಿ ಕಾಣುವ ಗದ್ಯದ ವಿಶೇಷ ಲಕ್ಷಣಗಳು.

ಗದ್ಯದ ಸಾಮಾನ್ಯ ಲಕ್ಷಣಗಳನ್ನೂ ಸ್ವರೂಪ ಸ್ವಭಾವಗಳನ್ನೂ ಇಲ್ಲಿ ಅತಿ ಸಂಕ್ಷೇಪವಾಗಿ ವಿವರಿಸಲು ಪ್ರಯತ್ನಿಸಿದೆ. ಅದರ ವಿರಾಡ್ರೂಪದ ದರ್ಶನವನ್ನು ಮಾಡಿಸುವ ಸಾಹಸಕ್ಕೆ ಕೈಹಾಕಿಲ್ಲ. ಕನ್ನಡ ಗದ್ಯದ ವಿವೇಚನೆಯಾಗಲಿ, ಅದರ ಇತಿಹಾಸ ದರ್ಶನ*ವಾಗಲಿ ಈ ಮುನ್ನುಡಿಯ ಉದ್ದೇಶವಲ್ಲ. ಮುಂದಿನ ಗದ್ಯ ಭಾಗಗಳ ವ್ಯಾಸಂಗಕ್ಕೆ ಅನುಕೂಲವಾಗಲೆಂದು ಒಂದೆರಡು ಮಾತು ಹೇಳಲು ಪ್ರಯತ್ನಿಸಿದೆ.

ಕನ್ನಡ ಗದ್ಯದ ಇತಿಹಾಸ ಪ್ರಾಚೀನವಾದುದೇನೂ ಅಲ್ಲ. ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ಆಧುನಿಕ ಗದ್ಯದ ನವೋದಯವಾಯಿತೆನ್ನಬಹುದು. ಆ ಕಾಲಕ್ಕೆ ಹಿಂದೆ ಗದ್ಯವಿರಲಿಲ್ಲವೆಂದಲ್ಲ. ಇತ್ತು. ಆಧುನಿಕ ರೀತಿಯ ಗದ್ಯವಿರಲಿಲ್ಲ. ಭಿನ್ನಭಿನ್ನ ಜನಾಂಗಗಳ ಸಂಪರ್ಕ, ಭಿನ್ನಭಿನ್ನ ನಾಗರಿಕ ಸಂಸ್ಕೃತಿಗಳ ಸಮ್ಮಿಲನ, ಭಿನ್ನಭಿನ್ನ ಆಚಾರ ವಿಚಾರಗಳ ಸಮಾವೇಶ, ವಿಜ್ಞಾನದ ತೀವ್ರ ವಿಕಾಸ; ಇವುಗಳ ಜೊತೆಗೆ ಅಚ್ಚುಕೂಟಗಳ ಸ್ಥಾಪನೆ, ವರ್ತಮಾನ ಪತ್ರಿಕೆಗಳ ಪ್ರಚಾರ, ರೇಡಿಯೋ ಮೊದಲಾದುವು ಸೇರಿಕೊಂಡು ಭಾರತೀಯ ಜೀವನವನ್ನು ರೂಪಾಂತರಗೊಳಿಸುತ್ತಿವೆ. ಹೊಸ ಹೊಸ ಆಚಾರ ವ್ಯವಹಾರಗಳನ್ನೂ, ಹೊಸ ಹೊಸ ಭಾವನೆಗಳನ್ನೂ, ಹೊಸ ಹೊಸ ಆಲೋಚನೆಗಳನ್ನೂ ರೂಪಿಸಲು ಮತ್ತು ನಿರೂಪಿಸಲು ಯುಗಧರ್ಮಕ್ಕೆ ಹೊಂದಿಕೊಳ್ಳಲು ಹೊಸ ಭಾಷೆ ಬೇಕು. ಅಂಥ ಭಾಷೆ ಕನ್ನಡದಲ್ಲಿ ಈಗೀಗ ಸಿದ್ಧವಾಗುತ್ತಿದೆ.

ವಿಕಾಸೋನ್ಮುಖವಾದ ಕನ್ನಡ ಗದ್ಯದ ಕೆಲವು ಮುಖಗಳನ್ನು ಮಾತ್ರ ತೋರಿಸಲು ಇಲ್ಲಿ ಹದಿನಾಲ್ಕು ಭಾಗಗಳನ್ನು ಆಯ್ದುಕೊಂಡಿದೆ. ಕನ್ನಡ

---

* ಮುಂದೆ ಬರಲಿರುವ 'ಗದ್ಯ ಮಣಿಮಾಲೆಯು' ಇತರ ಭಾಗಗಳಲ್ಲಿ ಕನ್ನಡ ಗದ್ಯದ ಇತಿಹಾಸವನ್ನು ಪರಿಚಯಿಸಿಕೊಡಲು ಆಲೋಚಿಸಿದೆ.

ಗದ್ಯದ ಎಲ್ಲ ಮುಖಗಳನ್ನಾಗಲಿ, ಉತ್ತಮ ಗದ್ಯಲೇಖಕರೆಲ್ಲರ ಪರಿಚಯವನ್ನಾಗಲಿ ಮಾಡಿಕೊಡುವ ಆದರ್ಶಸಾಧನೆಗೆ ಕೈಹಾಕಿಲ್ಲ. ಅಂಥ ಉದ್ಯಮಕ್ಕೆ ಇಂಥ ಸಣ್ಣ ಪುಸ್ತಕ ಸಾಲದು. ಕೇವಲ ವಸ್ತು ವಿಷಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಸಂಗ್ರಹವನ್ನು ಸಿದ್ಧಪಡಿಸಿದೆ. ಬುದ್ಧಿ ಹೃದಯಗಳೆರಡಕ್ಕೂ ತೃಪ್ತಿ ದೊರಕಿಸಬೇಕೆಂಬ ಉದ್ದೇಶದಿಂದ ಕಥೆ, ಭಾವಪ್ರಬಂಧ, ವಿಚಾರ ಪ್ರಬಂಧ, ನಾಟಕ, ಹರಟೆ, ಜೀವನಕಥೆ, ಕಾದಂಬರಿ, ಪ್ರವಾಸ ಕಥೆ—ಎಲ್ಲ ಮಾದರಿಯ ಗದ್ಯಪ್ರಕಾರಗಳನ್ನು ಆಯ್ದು ಮಾಲೆಯಾಗಿ ಪೋಣಿಸಿ ಓದುಗರಿಗೆ ಅರ್ಪಿಸಿದೆ. ಇದರಿಂದ ಓದುಗರಿಗೆ ಆನಂದಾಂಶ ಮಾತ್ರವಲ್ಲ, ಜ್ಞಾನಾಂಶವೂ ದೊರೆಯುತ್ತದೆಂಬ ಭರವಸೆ ಇದೆ. ನಮ್ಮ ಉದ್ದೇಶ ಸಾಧನೆಗೆ ಹರಿಹರನ ಗದ್ಯ ಅಪ್ರಕೃತವಾದರೂ, ನಡುಗನ್ನಡದ ಪರಿಚಯವಾಗಲೆಂಬ ಬಯಕೆಯಿಂದ ಮೂರ್ನಾಲ್ಕು ಪುಟಗಳಷ್ಟನ್ನು ಮಾತ್ರ ಆಯ್ದು ಕೊಟ್ಟಿದೆ.

ಮುಂದೆ ಬರುವ ಗದ್ಯ ಮಣಿಮಾಲೆಯ ಎರಡು ಭಾಗಗಳಲ್ಲಿ ಕನ್ನಡ ಗದ್ಯದ ನಾನಾ ಮುಖಗಳನ್ನೂ ಅದರ ಇತಿಹಾಸವನ್ನೂ ಉತ್ತಮ ಗದ್ಯ ಲೇಖಕರ ಪರಿಚಯವನ್ನೂ ಮಾಡಿಕೊಡುವ ಆಶೆ ಇದೆ. ಈ ಮಾಲೆ ಈಗಾಗಲೆ ಪ್ರಕಟವಾಗಿರುವ ಗದ್ಯ ಸಂಕಲನಗಳಿಗೆ ಪೂರಕವಾಗಿದೆಯೇ ಹೊರತು ಅವುಗಳಿಗಿಂತ ಉತ್ತಮವೆಂದು ಹೇಳುವ ಅಟ್ಟಹಾಸವಿಲ್ಲ.

ಈ ಮಾಲೆಯನ್ನು ಪ್ರಕಟಿಸುವ ಉದ್ದೇಶವನ್ನು ತಿಳಿಸಿ, ಲೇಖನಗಳನ್ನು ಬಳಸಿಕೊಳ್ಳಲು ಅನುಮತಿ ಕೇಳಿದೊಡನೆಯೆ, ಮಾನ್ಯರಾದ ಹಿರಿಯರೂ ಗೆಳೆಯರೂ ಸಂತೋಷದಿಂದ ಒಪ್ಪಿದರು. ಈ ಉಪಕಾರಕ್ಕಾಗಿ ಅವರೆಲ್ಲರಿಗೂ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇವೆ.

೧—೭—೧೯೫೬
ಗುರು ಕೃಪಾ,
ಮೈಸೂರು

ದೇ. ಜ. ಗೌ.

# ಗಾಡಿಯ ಪ್ರಯಾಣ

ಎ. ಎನ್. ಮೂರ್ತಿರಾವ್

ಎ. ಎನ್. ಮೂರ್ತಿರಾಯರು (ಜನ್ಮ ೧೯೦೦) ಮೈಸೂರು ವಿಶ್ವವಿದ್ಯಾನಿಲಯದ ಪದವೀಧರರು. ೧೯೨೬ರಲ್ಲಿ ಆಂಗ್ಲ ಸಾಹಿತ್ಯದಲ್ಲಿ ಎಂ. ಎ. ಪದವಿ ಪಡೆದು, ಮೈಸೂರು ವಿಶ್ವವಿದ್ಯಾನಿಲಯದಲ್ಲಿಯೇ ಇಂಗ್ಲಿಷ್ ಅಧ್ಯಾಪಕರಾದರು. ಇಂಗ್ಲಿಷ್ ಸಾಹಿತ್ಯದ ಪರಿಚಯವನ್ನು ಕನ್ನಡಿಗರಿಗೂ, ಕನ್ನಡ ಸಾಹಿತ್ಯದ ಪರಿಚಯವನ್ನು ಇಂಗ್ಲಿಷ್ ಬಲ್ಲವರಿಗೂ ಪರಸ್ಪರಾನುವಾದದ ಮೂಲಕ ಮಾಡಿಕೊಟ್ಟಿದ್ದಾರೆ. ಸಾಕ್ರಟೀಸನ ಕೊನೆಯ ದಿನಗಳು—ಪ್ಲೇಟೋ ಕೃತಿಯ ಅನುವಾದ; ಆಷಾಢಭೂತಿ—ಫ್ರೆಂಚ್ ನಾಟಕಕಾರ ಮೋಲಿಯರ್‌ನ 'ಟಾರ್ಟಫೆ'ಯ ಅನುವಾದ; ಹವಳದ ದ್ವೀಪ—ಮಕ್ಕಳ ಸಾಹಿತ್ಯದಲ್ಲಿ ಎತ್ತುಗೈಯಾದ ಬಲಾಂಟೈನನ 'ಕಾರಲ್ ಐಲೆಂಡ್' ಕೃತಿಯ ಸಂಗ್ರಹಾನುವಾದ; ಯೋಧನ ಪುನರಾಗಮನ ಮತ್ತು ಪಾಶ್ಚಾತ್ಯ ಸಣ್ಣ ಕಥೆಗಳು ಈ ಸಾಲಿನವೇ. 'ಹಗಲುಗನಸುಗಳು' ಅವರ ಸ್ವತಂತ್ರ ಕೃತಿ. ಈಚೆಗೆ ಶ್ರೀ ಶಿವರಾಮಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ. ಇವರದು ಮುದ್ದಾದ, ಆಕರ್ಷಕವಾದ ಸರಳಶೈಲಿ.

ಮೂರ್ತಿರಾಯರು ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದು ಎರಡು ವರ್ಷಗಳ ಹಿಂದೆ ನಿವೃತ್ತಿಗೊಂಡರು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಆದರೂ ಅವರು ವಿರಾಮವಿಲ್ಲದೆ ದುಡಿಯುತ್ತಿದ್ದಾರೆ. ಸಂಸ್ಕೃತಿ ಪ್ರಚಾರಶಾಖೆಯ ಡೈರೆಕ್ಟರಾಗಿ ಮತ್ತೆ ನೇಮಕಗೊಂಡಿದ್ದಾರೆ; ಸಾಹಿತ್ಯ ಅಕಾಡೆಮಿಯಂಥ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

'ಗಾಡಿಯ ಪ್ರಯಾಣ' ಎಂಬ ಪ್ರಬಂಧವನ್ನು 'ಹಗಲುಗನಸುಗಳು' ಎಂಬ ಅವರ ಸ್ವತಂತ್ರ ಕೃತಿಯಿಂದ ಆರಿಸಿಕೊಂಡಿದೆ.

ಮೇಲೆ ತಿಳಿಯಾದ ನಕ್ಷತ್ರಮಂಡಿತವಾದ ಆಕಾಶ; ಮುಂದೆ ಬೆಳುದಿಂಗಳಿನಲ್ಲಿ ಇಲ್ಲಿ ಶುಭ್ರವಾಗಿಯೂ ಅಲ್ಲಿ ಅಸ್ಪಷ್ಟವಾಗಿಯೂ ನೆರಳಿನ ನಡುವೆ ನುಸುಳಿಕೊಂಡು ಹೋಗುವ ರಸ್ತೆ; ಮೃದುವಾಗಿ ಬೀಸುವ ತೆಂಗಾಳಿ; ಎತ್ತುಗಳ ಕೊರಳಿನಲ್ಲಿರುವ ಗೆಜ್ಜೆಯ ಶಬ್ದ—ಈ ಆವರಣದಲ್ಲಿ ಗಾಡಿಯ ಪ್ರಯಾಣವೇ ಹಿತ. ರೈಲೂ ಮೋಟಾರುಗಳೂ ಇಲ್ಲದಿದ್ದರೇನು! ರೈಲು ಪ್ರಯಾಣದಲ್ಲಿಯೂ ಒಂದು ವಿಧವಾದ ಸೌಖ್ಯವಿದೆಯಾದರೂ ಶಾಂತ ಸ್ವಭಾವದವರಿಗೂ ಪ್ರಕೃತಿ ಪ್ರೇಮಿಗಳಿಗೂ 'ರೊಮಾನ್ಸ್' ಮನೋವೃತ್ತಿ

ಯುಳ್ಳವರಿಗೂ ಅದು ಜುಗುಪ್ಸೆಯುಂಟುಮಾಡುತ್ತದೆ. ಈಚೆಗೆ ರೈಲಿನ ಹಾವಳಿ ಹೆಚ್ಚಿ ಗಾಡಿಯ ಪ್ರಯಾಣದ ಸೌಖ್ಯವು ಕನಸಾಗಿಹೋಯಿತು. ರೈಲಿನಲ್ಲಿಯೂ ಮೋಟಾರಿನಲ್ಲಿಯೂ ಪ್ರಯಾಣಮಾಡಿ ಅವುಗಳ ವೇಗ ವೈಭವವನ್ನು ಅರಿತ ಮೇಲೆ ಘಂಟೆಗೆ ಎರಡು ಮೈಲಿ ಹೋಗುವ ಎತ್ತಿನ ಗಾಡಿಯನ್ನು ಕೇಳುವವರು ಯಾರು? ಕುಳಿತುಕೊಳ್ಳುವುದಕ್ಕೆ ಹುಲ್ಲೇ ಮೆತ್ತೆ; ಒರಗಿಕೊಳ್ಳುವುದಕ್ಕೆ ಒಂದೊಂದು ಮೊಳ ಅಂತರದಲ್ಲಿ ಬಿಗಿದಿರುವ ಬಿದಿರು ದಬ್ಬೆಗಳು; ಮಧ್ಯೆ ಮಧ್ಯೆ ಒಂದೊಂದು ಬೊಂಬು; ಘಳಿಗೆಗೊಂದು ಸಲ ಒಂದು ಅಡಿ ಮೇಲಕ್ಕೆದ್ದು ಮತ್ತೆ ಕೆಳಕ್ಕುರುಳುವ ಗಾಲಿ; ಹಳೆಯ ಹುಲ್ಲಿನ ಅಸಹ್ಯವಾಸನೆ; ಸಾಬೂನು ಮತ್ತು ನೀರಿನ ಗಂಧವನ್ನೇ ಅರಿಯದ ಸಾರಥಿ; ಬಾಲವನ್ನು ಮುರಿದರೂ ಹೆಜ್ಜೆ ಮುಂದಿಡಲಾರದ ಹೊಟ್ಟೆಗಿಲ್ಲದ ಎತ್ತುಗಳು—ಇದನ್ನೆಲ್ಲಾ ನೋಡಿ ಅನುಭವಿಸಿದವರಿಗೆ ಗಾಡಿಯ ಪ್ರಯಾಣ ವೆಂದರೆ ಕೆಟ್ಟ ಕನಸು ಬಿದ್ದಂತೆಯೇ ಸರಿ. ಈಗ ನಮ್ಮ ಕಣ್ಣಿಗೆ ಬೀಳುವ ಗಾಡಿಗಳು ಇಂಥವೇ. ಆದರೆ ಇವುಗಳನ್ನು ನೋಡಿ ಗಾಡಿಯ ಪ್ರಯಾಣ ವನ್ನೇ ಹೀಯಾಳಿಸುವುದು ಅನ್ಯಾಯ. ಈ ಗಾಡಿಗಳು ಭಕ್ತರಿಲ್ಲದ ಗುಡಿಗಳಂತೆ; ಸ್ವಬಲವಿಲ್ಲದ ಸ್ತ್ರೀಯಂತೆ. ಅವುಗಳು ಯಾರಿಗೆ ಬೇಕು? ಯಾರಿಗಾಗಿ ಅವು ನಿರ್ಮಲವಾಗಿಯೂ ಸುಂದರವಾಗಿಯೂ ಇರಬೇಕು? ಹಿಂದಿನ ಕಾಲದಲ್ಲಾದರೆ ಮಾಮಲೆದಾರರಾಗಲಿ ಜಮಾಬಂದಿಯ ಸಾಹೇಬ ರಾಗಲಿ, ರೈತನಾಗಲಿ ಜಮೀನುದಾರನಾಗಲಿ ಜೋಡೆತ್ತಿನ ಗಾಡಿಯನ್ನೇ ನಂಬಿದ್ದರು. ಸರ್ವರಿಗೂ ಆವಶ್ಯಕವಾಗಿಯೂ ಸರ್ವರಿಗೂ ಪ್ರಿಯವಾಗಿಯೂ ಇದ್ದುದರಿಂದ ಅದು ಉಳಿಸಿಕೊಳ್ಳಬೇಕಾದ ಮರ್ಯಾದೆಯೂ ಕಾಪಾಡಿ ಕೊಳ್ಳಬೇಕಾದ ಸೌಂದರ್ಯವೂ ಇದ್ದುವು. ಆಗಿನ ಗಾಡಿಗಳು ನಾಲ್ಕು ಜನರು ಸುಖವಾಗಿ ಕುಳಿತುಕೊಳ್ಳುವಂತೆ ವಿಶಾಲವಾಗಿದ್ದುವು; ಮಳೆಗಾಳಿ ಗಳನ್ನು ತಡೆಯುವಂತೆ ದಟ್ಟವಾಗಿ ನೆಯ್ದ ಚಾಪೆಯಲ್ಲಿ ಕಮಾನು ಕಟ್ಟಿರು ತ್ತಿದ್ದರು; ಕೆಲವು ಗಾಡಿಗಳಲ್ಲಿ ಒರಗಿಕೊಳ್ಳುವುದಕ್ಕೆ ಮೆತ್ತೆಗಳನ್ನು ಸಹ ಹಾಕಿರುವುದುಂಟು. ಗಾಡಿಗಳನ್ನೆಳೆಯುವುದಕ್ಕೆ ಐನೂರರಿಂದ ಸಾವಿರ ರೂಪಾಯಿಗಳವರೆಗೂ ಕೊಟ್ಟು ಎತ್ತುಗಳನ್ನು ತರುತ್ತಿದ್ದರು. ಚುಂಚನ ಕಟ್ಟೆ, ಹಾಸನ, ಹೇಮಗಿರಿ, ಮೊದಲಾದ ಸ್ಥಳಗಳಲ್ಲಿ ದನದ ಜಾತ್ರೆಗಳಾದರೆ ಎತ್ತುಗಳನ್ನೂ ಹಸುಗಳನ್ನೂ ಕೊಳ್ಳದಿದ್ದವರು ಕೂಡ ಕಣ್ಣಿನಿಂದ ನೋಡಿ ಸಂತೋಷಪಡುವುದಕ್ಕಾದರೂ ಜಾತ್ರೆಗೆ ಹೋಗಿ ಬರುತ್ತಿದ್ದರು. ಈಗ ಅಂಥ ಎತ್ತುಗಳನ್ನು ಸಾಕುವವರೂ ಕಡಿಮೆ, ಕೊಳ್ಳುವವರೂ ಕಡಿಮೆ.

ಹಳ್ಳಿಗಳಲ್ಲಿ ದನದ ವಿಷಯದಲ್ಲಿ ಉತ್ಸಾಹವೇ ಇಲ್ಲದಂತಾಗಿ ನಲವತ್ತು ರೂಪಾಯಿನ ಉಳುವ ಎತ್ತುಗಳನ್ನು ಇಟ್ಟುಕೊಳ್ಳುವುದೇ ಹೆಚ್ಚು.

ಈಗಿನ ಗಾಡಿಗಳಲ್ಲಿ ಸೌಂದರ್ಯವೂ ಇಲ್ಲ, ಸೌಖ್ಯವೂ ಇಲ್ಲ. ಆದರೆ ಹಳೆಯ ಕಾಲದ ಗಾಡಿಯಲ್ಲಿ ಪ್ರಯಾಣ ಮಾಡಿರುವವರಿಗೆ ಆ ಅನುಭವ ಎಂದೆಂದಿಗೂ ಮನಸ್ಸಿನಲ್ಲಿ ನಿಂತಿರುವುದು. ಆಗಾಗ ಅದರ ನೆನಪು ಬಂದು ಮತ್ತೆ ಆ ಸಂತೋಷವನ್ನನುಭವಿಸಬೇಕೆಂಬ ಬಯಕೆ ಹುಟ್ಟುವುದು. ರೈಲು ಮಾರ್ಗವನ್ನೂ ಗಾಡಿಯ ರಸ್ತೆಯನ್ನೂ ಹೋಲಿಸಿ ನೋಡಿ. ರೈಲು ರಸ್ತೆಯನ್ನು ಎಲ್ಲಿಂದ ಎಲ್ಲಿಯವರೆಗೆ ನೋಡಿದರೂ ಅದರಲ್ಲಿ ಸೌಂದರ್ಯದ ಚಿಹ್ನೆ ಸಹ ಇಲ್ಲ. ಒಂದೊಂದು ವೇಳೆ ಸೂರ್ಯನ ಕಾಂತಿ ಮೇಲೆ ಬಿದ್ದಾಗ ಅದು ಉಕ್ಕಿನ ಅಲಗಿನಂತೆ ಕ್ರೂರವಾದ ನೀಲಿಯ ಕಿರಣಗಳನ್ನು ಎಸೆಯುವುದು. ಅದರಲ್ಲಿ ದೃಢಮನಸ್ಸೂ ಅಮೋಘವಾದ ನಿರ್ಘೃಣವಾದ ಶಕ್ತಿಯೂ ಅಡಗಿರುವಂತೆ ತೋರುತ್ತದೆ. ಅದು ಯಾವ ಚಾಪಲ್ಯಕ್ಕೂ ಮನಸ್ಸು ಕೊಡದೆ ತನ್ನ ಕರ್ತವ್ಯದಲ್ಲೇ ದೃಷ್ಟಿಯನ್ನು ನಿಲ್ಲಿಸಿರುತ್ತದೆ. ಒಟ್ಟಿನಲ್ಲಿ ರೈಲು ರಸ್ತೆಯಲ್ಲಿ ಬಲವೂ ಕಾಠಿನ್ಯವೂ ಕಾಣುವುವೇ ಹೊರತು ಮಾರ್ದವ ಕಾಣುವುದಿಲ್ಲ. ಗಾಡಿಯ ರಸ್ತೆಯಾದರೋ ಉದಾರಿಗಳ ಮನಸ್ಸಿನಂತೆ ವಿಶಾಲವಾದದ್ದು. ಬಿಸಿಲಿನಲ್ಲಾಗಲಿ ಬೆಳುದಿಂಗಳಿನಲ್ಲಾಗಲಿ ನಮ್ಮನ್ನು ನೋಡಿ ಆದರದಿಂದ ಬರಮಾಡಿಕೊಳ್ಳುವ ನಗೆಯಂತಿರುವ ಒಂದು ಬಗೆಯ ಡಂಭವಿಲ್ಲದ ಮೃದುವಾದ ಲಾವಣ್ಯದಿಂದ ಹೊಳೆಯುವುದು. ರೈಲಿನಲ್ಲಿ ಪ್ರಯಾಣ ಮಾಡುವವರಿಗೂ ರೈಲಿಗೂ ಆಂತರಿಕ ವಿಶ್ವಾಸವಿಲ್ಲ. ರೈಲು ನಮ್ಮದಲ್ಲ, ಅದರಲ್ಲಿ ಕೆಲವು ಘಂಟೆಯ ಕಾಲ ಕುಳಿತಿರುವ ಹಕ್ಕು ಮಾತ್ರ ನಮ್ಮದು. ನಾವು ಕೊಟ್ಟ ಹಣಕ್ಕೆ ಪ್ರತಿಯಾಗಿ ನಮ್ಮನ್ನು ಕೆಲವು ಮೈಲಿಗಳ ದೂರ ಕರೆದುಕೊಂಡು ಹೋಗುವುದು ಅದರ ಕರ್ತವ್ಯ; ಹಲ್ಲು ಕಚ್ಚಿಕೊಂಡು ಸ್ವಲ್ಪವೂ ತಪ್ಪದಂತೆ ಆ ಕರ್ತವ್ಯವನ್ನು ನಡೆಸಿಬಿಡುತ್ತದೆ. ಹೆಚ್ಚಿನ ವಿಷಯ ಅದಕ್ಕೆ ಬೇಕಿಲ್ಲ. ಅದಕ್ಕೂ ನಮಗೂ ಮಾನವೀಯ ಸಂಬಂಧವಿಲ್ಲ. ನಾವು ಮನುಷ್ಯರಾದರೆ ಹೇಗೋ ಇಟ್ಟಿಗೆಗಳಾದರೂ ಅದು ಹಾಗೆಯೇ ವರ್ತಿಸುತ್ತದೆ. ಅದಲ್ಲದೆ ರೈಲಿನಲ್ಲಿ ಪ್ರಯಾಣ ಮಾಡುವಾಗ ನೀವು ಸಾವಿರ ಜನರಲ್ಲೊಬ್ಬರು. ನೀವು ಮೊದಲನೆಯ ತರಗತಿಯ ಗಾಡಿಯಲ್ಲಿ ಜನಸಂಪರ್ಕವಿಲ್ಲದೆ ನಿಮ್ಮ ಬಿಗುಮಾನ ಒಂದರ ಜೊತೆಯಲ್ಲಿಯೇ ಪ್ರಯಾಣ ಮಾಡಿದರೂ ಟಿಕೆಟ್ ಕಲೆಕ್ಟರು ಬಂದು 'ಟಿಕೆಟ್' ಎಂದು ಕೇಳಿಯೇ ಕೇಳುವನು; ಅಥವಾ ನೀವು ಚೆನ್ನಾಗಿ ಇಸ್ತ್ರಿಮಾಡಿದ ಬಟ್ಟೆಗಳನ್ನು ಧರಿಸಿರುವುದನ್ನು

ನೋಡಿ ' ಪ್ಲೀಸ್ ' ಎಂದೋ ' ಸಾರ್ ' ಎಂದೋ ಸೇರಿಸಬಹುದು. ಅಷ್ಟು ಹೊರತು ನಿಮ್ಮ ದೊಡ್ಡಸ್ತಿಕೆಯೇನೂ ಅಲ್ಲಿ ನಡೆಯುವುದಿಲ್ಲ. ರೈಲು ಇಂಥ ಕಡೆ ನಿಲ್ಲಬೇಕೆಂದರೆ ನಿಲ್ಲುವುದಿಲ್ಲ; ' ಕಾಲದ ಪಟ್ಟಿ ' ಎಂಬ ಯಂತ್ರದಲ್ಲಿ ನೀವು ಒಂದು ಭಾಗವಾಗಿ ಹೋಗುವಿರಿ. ಆ ಯಂತ್ರದ ಚಕ್ರಗಳು ನಿಮ್ಮ ಅಪೇಕ್ಷೆಗೆ ಸ್ವಲ್ಪವೂ ಗಮನಕೊಡದೆ ತಮ್ಮ ನಿಯಮವನ್ನು ತಾವು ಅನುಸರಿಸಿ ತಿರುಗುವುವು. ಆ ಯಂತ್ರ ನಿರ್ಜೀವಿಯಾದದ್ದು; ಅದಕ್ಕೆ ಆಸೆ ಜುಗುಪ್ಸೆಗಳಿಲ್ಲ. ನಿಲ್ಲುವುದು ಹೊರಡುವುದು, ವೇಗ, ಮಂದಗತಿ, ಎಲ್ಲದರಲ್ಲಿಯೂ ಅದು ನಿಯಮಬದ್ಧವಾಗಿದೆ. ಸ್ವಲ್ಪಮಟ್ಟಿಗೆ ಅದು ಕಾಲದಂತೆ, ಸಮುದ್ರದ ಏರಿಳಿತಗಳಂತೆ; ಮಾನವನ ಆಜ್ಞೆಗೆ ಒಳಪಟ್ಟುದಲ್ಲ. ನಿಮಗಾಗಿ ಅದು ತನ್ನ ನಿಯಮಗಳನ್ನು ಉಲ್ಲಂಘಿಸುವುದಿಲ್ಲ. ಇಲ್ಲಿ ಗದ್ದೆಗಳಲ್ಲಿ ಮೈಲಿಗಟ್ಟಲೆ ಎಳೆ ಹಸುರಾಗಿ ಚಿಗುರುತ್ತಿರುವ ಪೈರನ್ನು ನಿಂತು ನೋಡಬೇಕೆಂದು ನಿಮ್ಮ ಹೃದಯವು ಕಾತರಗೊಳ್ಳುತ್ತಿದೆ. ಆದರೆ ರೈಲು ನಿಮ್ಮ ಬಯಕೆಗೆ ಮರ್ಯಾದೆ ಕೊಡುವುದಿಲ್ಲ. ಇಲ್ಲಿ ದೊಡ್ಡ ಬೆಟ್ಟಗಳ ನಡುವೆ ರೈಲು ಹೋಗುತ್ತಿದೆ; ಇತ್ತಕಡೆ ಕಣಿವೆಯಲ್ಲಿ ಒಂದು ಪರ್ವತ ಪ್ರವಾಹವು ಭೋರ್ಗರೆಯುತ್ತ ಧುಮುಕುತ್ತಿದೆ; ಬಲಗಡೆ ಗಗನವನ್ನು ಮುಟ್ಟುವ ಶಿಖರಗಳು; ಎದುರಿಗೆ ಪರ್ವತಶ್ರೇಣಿಯ ಮೇಲೆ ಬೆಳಗಿನ ಹೊಂಬಿಸಿಲು ಬಿದ್ದು ಅದಕ್ಕೆ ಸ್ವರ್ಗೀಯ ಸೌಂದರ್ಯವನ್ನು ಕೊಟ್ಟಿದೆ. ಐದು ನಿಮಿಷ ಅಲ್ಲಿಯೇ ನಿಂತು ನೋಡೋಣ ವೆಂದರೆ ಆ ಐದು ನಿಮಿಷಗಳಲ್ಲಿ ರೈಲು ಒಂದು ಗುಡ್ಡವನ್ನು ಸುತ್ತುಹಾಕಿ ಆ ದೃಶ್ಯವನ್ನು ಮರೆಮಾಡುವುದು.

ಗಾಡಿಯ ಪ್ರಯಾಣದಲ್ಲಿ ಈ ಕಷ್ಟವಿಲ್ಲ. ಗಾಡಿ ಹೊಡೆಯುವವನು ರೈಲಿನ ಡ್ರೈವರಿನಂತೆ ಕೇವಲ ನಿಯಮಬದ್ಧನಲ್ಲ. ಅವನೂ ನಮ್ಮಂತೆಯೇ ಆಸೆ ಉತ್ಸಾಹಗಳುಳ್ಳ ಮಾನವ. ಬೀಡಿಗೆ ಮೂರು ಕಾಸು ಕೊಟ್ಟರಂತೂ ನಾವು ಹೇಳಿದಂತೆ ಕೇಳುವನು. ಗಾಡಿಯ ಪ್ರಯಾಣವು ಸುಖದಾಯಕವಾಗ ಬೇಕಾದರೆ ಇಂಥ ಸಾರಥಿ ಅವಶ್ಯಕ. ಗಾಡಿ ಹೊಡೆಯುವವರಲ್ಲಿ ಅನೇಕ ವಿಧಗಳುಂಟು. ಕೆಲವರು ಸಾಹಸಿಗಳು. ತಮ್ಮ ದೇಹಶಕ್ತಿ, ಕಷ್ಟ ಸಹಿಷ್ಣುತೆ, ಚಟುವಟಿಕೆ ಮೊದಲಾದುವುಗಳ ವಿಷಯ ಜಂಭ ಕೊಚ್ಚುವರು. ಕೆಲವರು ತಮ್ಮ ಹಳ್ಳಿಯ ಸರಳ ಜೀವನವನ್ನೂ ಪಟ್ಟಣದ ಹುಸಿನಾಗರಿಕತೆಯನ್ನೂ ಕುರಿತು ಸಣ್ಣ ಸಣ್ಣ ಉಪನ್ಯಾಸಗಳನ್ನು ಕೊಡುವರು. ಇನ್ನು ಕೆಲವರು ಸುಖಾಭಿಲಾಷಿಗಳು, ರಸಿಕರು, ಪ್ರಣಯಲಂಪಟರೆಂದರೂ ಎನ್ನಬಹುದು. ಅವರು ನೂರುಗಟ್ಟಲೆ ಲಾವಣಿಗಳನ್ನೂ ಯಕ್ಷಗಾನದ ಹಾಡುಗಳನ್ನೂ ಹೇಳ

ಬಲ್ಲರು. ಆಗಾಗ ತಮ್ಮ ಪ್ರಣಯಾನುಭವಗಳ ಕಥೆಯನ್ನು ಹೇಳುವುದೂ ಉಂಟು. ಗಾಡಿಯವರ ಸಲ್ಲಾಪ ರುಚಿಸಬೇಕಾದರೆ ಪ್ರಯಾಣಿಕರು ವಯಸ್ಸಿನಲ್ಲಾಗಲಿ ಅಥವಾ ಅದು ಸಾಧ್ಯವಾಗದಿದ್ದರೆ ಮನೋವೃತ್ತಿಯಲ್ಲಾಗಲಿ ಯುವಕರಾಗಿದ್ದು ಅವರ ಜೊತೆಗೆ ಸಲಿಗೆಯಾಗಿ ಮಾತಾಡುವಷ್ಟು ಸರಳ ಸ್ವಭಾವವುಳ್ಳವರಾಗಬೇಕು. ಹಳ್ಳಿಯ ಜನರನ್ನು ತಿರಸ್ಕಾರದಿಂದ ದೂರ ಇಡುವ ಮರ್ಯಾದೆ ರಾಮಣ್ಣನವರಿಗೆ ಗಾಡಿಯ ಪ್ರಯಾಣದಲ್ಲಿ ಸೌಖ್ಯವಿಲ್ಲ.

ಗಾಡಿಯಲ್ಲಿ ಪ್ರಯಾಣ ಹೊರಡುವವರಿಗೆ ಆತುರವಿಲ್ಲ. ರೈಲಿಗೆ ಹೊರಡುವಾಗಿನ ಗಡಿಬಿಡಿಯೆಷ್ಟು! ಹೆಂಗಸರು ಬೇಗ ಸಿದ್ಧವಾಗಲಿಲ್ಲವೆಂದು ಬೆದರಿಕೆಯೆಷ್ಟು! ಬೈಗುಳೆಷ್ಟು! ಮಕ್ಕಳಿಗೆ ಏಟುಗಳೆಷ್ಟು! ಈ ಗಡಿಬಿಡಿಯಿಲ್ಲದಿದ್ದರೆ ರೈಲು ಸಿಕ್ಕುವುದು ಅಸಾಧ್ಯ. ಎಷ್ಟೋವೇಳೆ ನಮ್ಮ ತಾಮಸ ಪ್ರಕೃತಿಯನ್ನು ಮೂದಲಿಸುವುದಕ್ಕೋ ಏನೋ, ರೈಲು ನಾವು ಸ್ಟೇಷನ್ನಿಗೆ ಬರುವವರೆಗೂ ಕಾದಿದ್ದು ನಾವು ಸ್ಟೇಷನ್ನಿನೊಳಕ್ಕೆ ಕಾಲಿಡುವುದರಲ್ಲೇ ಹೊರಟುಬಿಡುವುದು. ಗಾಡಿಯ ಪ್ರಯಾಣ ಹೊರಡುವವರಿಗೆ ಒಂದು ವಿಧವಾದ ಆತುರವಿಲ್ಲದ ಸಂಭ್ರಮ ಮಾತ್ರ ಇರುತ್ತದೆ. ಹೆಂಗಸರು ಗಂಟು ಮೂಟೆಗಳನ್ನು ಕಟ್ಟಿ, ಜಡೆ ಹೆಣೆದುಕೊಂಡು ಸಿದ್ಧರಾಗುತ್ತಿರುತ್ತಾರೆ. ಗಂಡಸರು ಗಾಡಿಯವನ ಮನೆಗೆ ಹೋಗಿ ಗಾಡಿಯನ್ನು ಹೊಡೆಯಿಸಿಕೊಂಡು ಬಂದು, ಭಾರವಾದ ಸಾಮಾನುಗಳನ್ನೆಲ್ಲಾ ಅದರೊಳಕ್ಕೆ ಹಾಕಿಸಿ, ಅವುಗಳ ಮೇಲೆ ಮೆತ್ತಗಿರುವಂತೆ ಮಂದವಾಗಿ ಹೊಸ ಹುಲ್ಲು ಮುಚ್ಚಿ, ಮೇಲೆ ಜಮಖಾನವನ್ನು ಹಾಸುತ್ತಾರೆ. ಒಂದೆರಡು ದಿನಗಳವರೆಗೂ ಆ ಗಾಡಿಯೇ ನಮ್ಮ ಮನೆಯಾದ್ದರಿಂದ ಮನೆಯನ್ನು ಅಲಂಕರಿಸುವಷ್ಟೇ ಆಸ್ಥೆಯಿಂದ ಅದನ್ನು ಅಲಂಕರಿಸುತ್ತೇವೆ. ಗಾಡಿಯನ್ನು ಸಿದ್ಧಪಡಿಸಿದ ಮೇಲೆ ಊಟಮಾಡಿ ಹೊರಡಲನುವಾಗಬೇಕು. ಊಟಕ್ಕೆ ಆತುರವೇನೂ ಇಲ್ಲ; ತಿಂದವರು ತಿಂದರು, ಉಳಿದವರಿಗಿಲ್ಲ ಎನ್ನುವ ಹಾಗಿಲ್ಲ; ಅನ್ನ ಗಂಟಲು ಸುಡುವಷ್ಟು ಬಿಸಿಯಾಗಿದ್ದರೂ ಹಾಗೇ ನುಂಗಬೇಕಾದ ಆವಶ್ಯಕತೆಯಿಲ್ಲ. ಗಾಡಿಯು ಇನ್ನು ಎರಡು ಮೂರು ದಿನಗಳವರೆಗೂ ನಮ್ಮ ಆಜ್ಞಾನುವರ್ತಿಯಾಗಿಯೇ ಇರುವುದರಿಂದ ನಾವು ಆತುರಪಡಬೇಕಾದ್ದಿಲ್ಲ. ಪ್ರಯಾಣವನ್ನು ಮುಂದಿಟ್ಟು ಕೊಂಡು ಊಟ ಮಾಡುವುದರಲ್ಲಿ ಒಂದು ಅಪೂರ್ವವಾದ ಸೌಖ್ಯವಿದೆ. ಬೇಳೆ ಹುಳಿಯೂ ಸಂಡಿಗೆಯೂ ಇನ್ನು ಯಾವಾಗಲೂ ಆಗಿನಷ್ಟು ರುಚಿಯಾಗಿರುವುದಿಲ್ಲ. ಊಟವಾದ ಮೇಲೆ, ಹೊರಡಲು ಸಿದ್ಧವಾಗಬೇಕೆಂದು ಪ್ರತಿಯೊಬ್ಬರೂ ಉಳಿದವರನ್ನು ಅವಸರಿಸುವರು. ಕೆಲವರು ಸಣ್ಣ ಪುಟ್ಟ ಸಾಮಾನುಗಳನ್ನೆಲ್ಲಾ

ಗಾಡಿಗೆ ಹಾಕುವರು. ಹೆಂಗಸರು ಮೊಸರನ್ನ, ಸಿಂಬೆಯ ಉಪ್ಪಿನಕಾಯಿನ ಬುತ್ತಿಯನ್ನು ಕಟ್ಟುವರು. ಇದೆಲ್ಲವೂ ಆಗಿ ಬಂಧುಗಳಿಗೆಲ್ಲರೂ ಹೋಗಿ ಬರುತ್ತೇನೆಂದು ತಿಳಿಸಿ ಬೀಳ್ಕೊಂಡ ಮೇಲೂ ಅವರು ಊರ ಹೊರಗೆ ಕಾಲುವೆಯ ಬಳಿ ಇರುವ ತೋಪಿನವರೆಗೆ ಸಾಗಕಳುಹಲು ಬರುತ್ತಾರೆ.

ಈಗ ನಮಗೆ ಸಾವಿರಮೈಲಿ ದೂರದ ಪ್ರಯಾಣವಾದರೂ ದೊಡ್ಡ ವಿಷಯವಲ್ಲ. ಸಮುದ್ರದ ಹೃದಯವನ್ನು ಸೀಳಿಕೊಂಡು ಹೋಗುವುದಾಗಲಿ, ಅಂತರಿಕ್ಷದಲ್ಲಿ ಪಕ್ಷಿಯಂತೆ ಹಾರುವುದಾಗಲಿ, ಯಾವುದೂ ನಮ್ಮ ಮನಸ್ಸಿನಲ್ಲಿ ಹೆಚ್ಚು ಸಂಭ್ರಮವುಂಟುಮಾಡಲಾರದು. ಹಿಂದೆ ಪ್ರಯಾಣವೆಂದರೆ ಪ್ರತಿ ದಿನದ ವ್ಯಾಪಾರವಲ್ಲ. ಪ್ರಯಾಣಿಕರಿಗೆ ದಾರಿಯಲ್ಲಿ ನೂರೆಂಟು ವಿಪತ್ತುಗಳು ಸಂಭವಿಸಬಹುದು. ಹೊಳೆಯನ್ನು ದಾಟುವಾಗ ಗಾಡಿ ಮಗುಚಿಕೊಳ್ಳಬಹುದು; ದಾರಿಯಲ್ಲಿ ಕಳ್ಳರ ಭಯ; ರಾತ್ರಿಯ ಕಾಲದಲ್ಲಿ ಹುಡುಗರು ಮಕ್ಕಳು ಕೆಟ್ಟ ಸ್ಥಳದಲ್ಲಿ ಹೆದರಿಕೊಳ್ಳಬಹುದು. ಆದ್ದರಿಂದ ಮನೆಯಲ್ಲಿ ಯಾರಾದರೂ ಪ್ರಯಾಣ ಹೊರಟರೆ ಸಂಬಂಧಿಗಳು ಕಣ್ಣೀರುಬಿಡುತ್ತಾ ಬಹಳ ದೂರ ಗಾಡಿಯ ಹಿಂದೆಯೇ ಬರುವುದು ಅಪರೂಪವಾಗಿರಲಿಲ್ಲ. "ದಾರಿಯಲ್ಲಿ ಹುಷಾರಾಗಿರು" ಎಂದು ಹೇಳುವವರು ಕೆಲವರು; "ಆ ಮಗು ತುಂಟ ಮಗು, ಕೈಯಿಂದ ಚಿಮ್ಮಿ ಕೆಳಕ್ಕೆ ಬಿದ್ದೀತು" ಎಂದು ಎಳೆಕೂಸಿನ ತಾಯಿಗೆ ಎಚ್ಚರಿಕೆ ಕೊಡುವವರು ಕೆಲವರು; "ಹೊಳೆ ದಾಟುವಾಗ ಜೋಕೆ, ಒಬ್ಬರು ಇಳಿದು ಗಾಡಿಯನ್ನು ಹಿಡಿದುಕೊಂಡೇ ನಡೆಯಿರಿ" ಎಂದು ಕೆಲವರು. ರಾತ್ರಿಯ ಕಾಲದಲ್ಲಿ ಹೊಳೆ ದಾಟುವಾಗ ನಿಜವಾಗಿಯೂ ಸ್ವಲ್ಪ ಮೈನಡುಗುತ್ತಿತ್ತು. ಎಲ್ಲಿ ಯಾವ ಮಡುವಿನಲ್ಲಿ ಗಾಡಿ ಮಗುಚಿಕೊಳ್ಳುವುದೋ ಎಂದು ನಮಗೆ ಹೆದರಿಕೆ; ಇಳಿದು ಚಕ್ರವನ್ನು ಹಿಡಿದುಕೊಂಡು ಬರುತ್ತಿರುವವರನ್ನು ಮೊಸಳೆ ಎಳೆದುಕೊಂಡು ಹೋಗಬಹುದೆಂಬ ಭಯ ಬೇರೆ. ಮಧ್ಯೆ ಮಧ್ಯೆ ಚಕ್ರವನ್ನು ನೂಕುತ್ತಿರುವವರು "ಎಡಗೋಲು ಹೊಡೆದುಕೋ" ಎಂದು ಎಚ್ಚರಿಕೆ ಕೊಡುವರು; ಒಂದೊಂದು ವೇಳೆ ಗಾಡಿಯ ಮೂಕಿಯವರೆಗೂ ನೀರು ಬಂದುಬಿಡುವುದು; ಆ ವೇಳೆಯಲ್ಲಿ ನಮ್ಮ ಸಂಭ್ರಮವೆಷ್ಟೊ! ದಿಗಿಲೆಷ್ಟೊ!

ಆಗ ನಮ್ಮೂರಿನಿಂದ ಮೈಸೂರಿಗೆ ಬರುವುದಾಗಲಿ, ಇಲ್ಲಿಂದ ಅಲ್ಲಿಗೆ ಹೋಗುವುದಾಗಲಿ ಸ್ವಲ್ಪ ಅಪರೂಪವೇ. ಸುಗ್ಗಿಯ ಕಾಲದಲ್ಲಿ ಮಾತ್ರ ಬತ್ತದ ಗಾಡಿಗಳ ಓಡಾಟ ಬಹಳ ಹೆಚ್ಚು. ಇಲ್ಲಿಂದ ಹೊರಡುವವರು ಸಂಜೆಯ ಗಾಡಿಯನ್ನು ಹತ್ತಿ ಮಾರನೆಯ ದಿನ ಎರಡು ಘಂಟೆಗೋ ಮೂರು

ಘಂಟೆಗೋ ಊರನ್ನು ಸೇರಬೇಕಾಗಿತ್ತು. ನಮ್ಮ ದೊಡ್ಡಪ್ಪನ ಮನೆಯಲ್ಲಿ ಓದಿಕೊಂಡಿದ್ದ ನನಗೆ ಹಳ್ಳಿಗೆ ಹೋಗುವುದೆಂದರೆ ಹಿಡಿಯಲಾರದಷ್ಟು ಆನಂದ. ದಸರಾ ಮತ್ತು ಕ್ರಿಸ್‌ಮಿಸ್ ರಜಗಳು ಎಂದಿಗೆ ಬರುವುವೋ ಎಂದು ಚಾತಕ ಪಕ್ಷಿ ಮಳೆಯನ್ನೆದುರು ನೋಡುವಂತೆ ಕಾದಿರುತ್ತಿದ್ದೆ. ಪುಸ್ತಕಗಳನ್ನು ಬಿಸುಟು ಬೆಳಗ್ಗೆ ತಿಂಡಿ ತಿಂದು ಚಳಿಮುರಿದ ಮೇಲೆ ಹೊಳೆಗೆ ಹೋಗಿ ಕೈ ಕಾಲು ಸೋಲುವವರೆಗೂ ಈಜಿ ಆಮೇಲೆ ಮನೆಗೆ ಬಂದು ಊಟಮಾಡಿ ನಿದ್ರಿಸುವ ಸುಖಜೀವನವೆಲ್ಲಿ, ಮೈಸೂರಿನ ನಿಸ್ಸಾರವಾದ ಜೀವನವೆಲ್ಲಿ! ಗಾಡಿಯ ಚೌಕಕ್ಕೆ ಹೋಗಿ ಗಾಡಿಯನ್ನು ಹತ್ತಿದೊಡನೆಯೇ ನನಗೆ ಸರ್ಕಸ್ಸಿನ ಹುಲಿಗಳನ್ನು ಮತ್ತೆ ಕಾಡಿನಲ್ಲಿ ಬಿಟ್ಟರೆ ಅವುಗಳಿಗಾಗುವಷ್ಟು ಸಂತೋಷವಾಗುತ್ತಿತ್ತು. ಒಂದು ವಿಧದಲ್ಲಿ ನೋಡಿದರೆ ನನಗೆ ಊರಿಗೆ ಹೋಗುವುದಕ್ಕಿಂತಲೂ ಪ್ರಯಾಣದಲ್ಲಿಯೇ ಉತ್ಸಾಹ ಹೆಚ್ಚು. ಎಷ್ಟೇ ಸ್ವಾತಂತ್ರ್ಯವಿದ್ದರೂ ಹಳ್ಳಿಯಲ್ಲಿ ಸಹ ಮನೆಯವರ ಅಂಕೆಯುಂಟು; ದಾರಿಯಲ್ಲಿ ನಾವು ಸರ್ವಸ್ವತಂತ್ರರು.

ಸವಾರಿ ಗಾಡಿಗಳೂ ಭರ್ತಿಗಾಡಿಗಳೂ ಸಾಧಾರಣವಾಗಿ ಸಂಜೆ ಏಳೂವರೆ ಘಂಟೆಗೆ ಮೈಸೂರಿನಿಂದ ಹೊರಡುವ ಪದ್ಧತಿ. ಆಗ ಕಳ್ಳರ ಕಾಟ ಹೆಚ್ಚಾಗಿದ್ದುದರಿಂದ ಒಂಟಿಗಾಡಿಗಳು ಹೊರಡುವುದು ಅಪರೂಪ. ಎಡತೊರೆ, ಹೊಸ ಅಗ್ರಹಾರ ಮುಂತಾದ ಕಡೆಯಿಂದ ಬಂದ ಗಾಡಿಗಳು ಐವತ್ತು ಅರುವತ್ತಾದರೂ ಇರುತ್ತಿದ್ದುವು. ಪ್ರತಿಯೊಂದು ಗಾಡಿಗೂ ಮಗ್ಗುಲಲ್ಲಿ ಹೆಬ್ಬೆರಳು ಗಾತ್ರದ ಕಕ್ಕಡದ ದೀಪ. ಉಕ್ಕಡವನ್ನು ದಾಟಿದೊಡನೆಯೇ ಅದನ್ನು ಆರಿಸಿಬಿಡುವರು. ಊರನ್ನು ಬಿಟ್ಟಮೇಲೆ ಈ ಕಕ್ಕಡಗಳ ಸುಳಿವೇ ಇಲ್ಲದಿದ್ದರೂ ಗಾಡಿಯ ಚೌಕದಲ್ಲೇನೋ ಅವುಗಳ ಸಂಭ್ರಮ ಹೇಳತೀರದು. ಹೊತ್ತಿಳಿದ ಮೇಲೆ ಹೊರಡುವವರೆಗೂ ಗಾಡಿಯವರು ಕಕ್ಕಡಗಳನ್ನು ಹಿಡಿದುಕೊಂಡು ದೀಪದ ಮಲ್ಲಿಗಳಂತೆ ಅಲ್ಲಲ್ಲಿಯೇ ನಿಂತಿರುತ್ತಾರೆ; ಇಲ್ಲವೆ ಕೊಳ್ಳಿಯ ದೆವ್ವಗಳಂತೆ ಸುತ್ತಾಡುತ್ತಿರುತ್ತಾರೆ. ಒಂದೊಂದು ವೇಳೆ ಈ ಕಕ್ಕಡಗಳು ಆಯುಧಗಳಾಗಿ ಪರಿಣಮಿಸಿ ಸಣ್ಣ ಸಣ್ಣ ಹುಸಿಯುದ್ಧಗಳಾಗುವುದೂ ಉಂಟು. ಗಾಡಿಗಳು ಹೊರಡುವುದಕ್ಕೆ ಮುಂಚೆ ಚೌಕದವನಿಗೂ ಗಾಡಿಯವರಲ್ಲಿ ಯಾವನಾದರೂ ಒಬ್ಬನಿಗೂ ಜಗಳವಾಗಲೇಬೇಕು; ಪ್ರಯಾಣಕ್ಕೆ ಇದೊಂದು ಆವಶ್ಯಕವಾದ ಉಪಕರಣವೆಂದೇ ನಾನು ಭಾವಿಸಿದ್ದೆ. ಆ ಚೌಕದ ಮಾಲೀಕಳಾದ ಮುದುಕಿಯೊಬ್ಬಳ ನೆನಪು ನನ್ನ ಮನಸ್ಸಿನಲ್ಲಿ ಚೆನ್ನಾಗಿ ನಿಂತಿದೆ. ಆಕೆಗೆ ಮುಪ್ಪಿನಿಂದ ಬೆನ್ನು ಬಿಲ್ಲಿನಂತೆ

ಬಾಗಿ, ಹಲ್ಲು ಬಿದ್ದುಹೋಗಿ, ಮೈಯೆಲ್ಲಾ ಸುಕ್ಕುಗಟ್ಟಿ ವಿಕಾರವಾದ ರೂಪ ಬಂದಿತ್ತು. ಆದರೂ ಅವಳ ನಡೆನುಡಿಯಲ್ಲಿ ಏನೋ ಒಂದು ಅದ್ಭುತವಾದ ಚಟುವಟಿಕೆಯಿದ್ದದ್ದರಿಂದ ಅವಳ ಮುಖವನ್ನು ನೋಡಿದವರಿಗೆ ಮರುಕಕ್ಕೆ ಬದಲಾಗಿ ಭಯವುಂಟಾಗುತ್ತಿತ್ತು. ನಾನು ಚಿಕ್ಕವನಾಗಿದ್ದಾಗ, ಆ ಗಾಡಿಯ ಚೌಕದಲ್ಲಿ ಕಾಲಿಟ್ಟವರೆಲ್ಲಾ ಅವಳ ಮಂತ್ರಶಕ್ತಿಗೆ ಒಳಗಾಗುವರೆಂದೂ, ಅವಳು ನರಮಾಂಸ ಭಕ್ಷಕಳಾದ ಮಾಟಗಾತಿಯೆಂದೂ ನಂಬಿದ್ದೆನು. ಆಕೆಯನ್ನು ಎದುರಿಸಿ ಜಗಳವಾಡಿ ಗೆದ್ದವರನ್ನು ನಾನು ಕಾಣೆ. ಅವೇಳ್ಲದೆ ಅವಳ ಕಡೆಯವರು ಇನ್ನು ಯಾರಾದರೂ ಇದ್ದರೆ ಗಾಡಿಯವರ ಪೌರುಷಕ್ಕೆ ಎಣೆಯೇ ಇಲ್ಲ. ಅವಳು ಬಂದೊಡನೆಯೇ “ದುಡ್ಡು ಮಡಗೋತನಕ ಗಾಡಿ ಬಿಡಾಕಿಲ್ಲ ಕನಯ್ಯ” ಎಂದು ಸಂಶಯಕ್ಕೆ ಆಸ್ಪದವೇ ಇಲ್ಲದಂತೆ ಹೇಳಿ ಅವರ ಸೊಲ್ಲು ಅಡಗಿಸಿಬಿಡುತ್ತಿದ್ದಳು. ಅವಳ ಕೈಯಿಂದ ಪಾರಾದ ಮೇಲೆ ಹೊರಡುವ ಸಂಭ್ರಮ. ಜೊತೆಯವರನ್ನು ಅವಸರಿಸುವುದು, ಎತ್ತುಗಳಿಗೆ ಕೋಪದ ಮತ್ತು ಪ್ರೀತಿಯ ಬೈಗುಳದ ಜೊತೆಗೆ ಅಲ್ಲಲ್ಲೇ ಚಾವಟಿಯ ಪ್ರದರ್ಶನ—ಇವೆಲ್ಲಾ ಆದಮೇಲೆ ಒಂದೊಂದಾಗಿ ಗಾಡಿಗಳು ಹೊರಡುವುವು.

ಊರನ್ನು ದಾಟಿ ಸಾಲುಮರದ ರಸ್ತೆಯನ್ನು ಸೇರುವವರೆಗೂ ಸವಾರಿ ಕುಳಿತಿರುವವರಿಗೆ ಸೆರೆಮನೆಯಲ್ಲಿದ್ದಂತೆ ತೋರಿ ಮನಸ್ಸಿಗೆ ಸ್ವಲ್ಪ ಜುಗುಪ್ಸೆ ಯಾಗುವುದು. ಆದರೆ ಅದು ಹೆಚ್ಚು ಹೊತ್ತು ನಿಲ್ಲುವುದಿಲ್ಲ. ಅಠಾರಾ ಕಚೇರಿ ಕಳೆಯಿತು . . . . ದಿವಾನರ ಬಂಗಲೆಯೂ ಕಳೆಯಿತು. ಇನ್ನು ಮುಂದೆ ಪೋಲೀಸಿನವರ ಕಾಟವಿಲ್ಲವೆಂದು ಕೆಲವರೆಲ್ಲಾ ದೀಪಗಳನ್ನು ಅಲ್ಲಿಯೇ ಆರಿಸಿಬಿಡುವರು. ಆದರೂ ನಾವು ಪಟ್ಟಣದ ಸಂಕಲೆಗಳಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದಬೇಕಾದರೆ ಉಕ್ಕಡವನ್ನು ದಾಟಿ ವಿದ್ಯುಚ್ಛಕ್ತಿಯ ಸುಳಿವೇ ಇಲ್ಲದ ಸ್ಥಳವನ್ನು ಸೇರಬೇಕು. ಉಕ್ಕಡವನ್ನು ದಾಟಿದ ಮೇಲೂ ಗಾಡಿಯವರು ತಮ್ಮ ಬತ್ತದ ವ್ಯಾಪಾರ, ದಳ್ಳಾಳಿಯು ತಮಗೆ ಮೋಸಮಾಡಲು ಯತ್ನಿಸಿದ್ದು, ತಾವು ಅವನ ಕಣ್ಣಿಗೇ ಮಣ್ಣು ಹೊಯ್ದುದ್ದು, ಬಟ್ಟೆಯ ವ್ಯಾಪಾರಕ್ಕೆ ಹೋಗಿ ‘ಪೆಗ್ಗಿ’ ಬಿದ್ದದ್ದು— ಮುಂತಾದ ವಿಷಯಗಳನ್ನು ಚರ್ಚಿಸುತ್ತಿರುವರು. ಕಡಲೆಪುರಿ ಬೆಲ್ಲವನ್ನೂ ಕಲ್ಯಾಣಿಸೇವೆಯನ್ನೂ ತಿಂದು ಜುಟ್ಟಿಗೆ ಸುತ್ತಿಕೊಳ್ಳಲು ಒಂದು ಕುಚ್ಚು ಹೂವನ್ನು ಕೊಂಡಿರುವ ನಿಮ್ಮ ಸಾತಲಿಯು ಒಂದೊಂದು ವೇಳೆ ನಿಮ್ಮನ್ನೂ ಸಂಭಾಷಣೆಗೆಳೆದು “ಮೈಸೂರು ಪಹರಿಗೆ ಬಂದಮೇಲೆ ಖುಸಿಮಾಡಬೇಕು ಕನ್ಸಾಮಿ, ಇವತ್ತಿದ್ದ ಹಂಗೆ ನಾಳೆ ಇದ್ದೇವಾ, ತಲೆ ನರತ ಮೇಲೇನೈತೆ

ಖುಸಿ !" ಎಂದು ಉಪದೇಶ ಮಾಡುವುದೂ ಉಂಟು. ರಾತ್ರಿಯು ಏರುತ್ತಾ ಏರುತ್ತಾ ಅವರ ಚರ್ಚೆಯೂ ಸಂಭಾಷಣೆಯೂ ಕಡಿಮೆಯಾಗುತ್ತಾ ಬರುತ್ತವೆ. ನಿದ್ರೆಯನ್ನು ತಡೆಯಲು ಗಾಡಿಯವರು ಪದಗಳನ್ನು ಹೇಳಲು ಪ್ರಾರಂಭಿಸುತ್ತಾರೆ. ನಿಶ್ಶಬ್ದವಾದ ರಾತ್ರಿಯ ಗಾಳಿಯಲ್ಲಿ ಒಂದು ವಿಧವಾದ ಶೈಥಿಲ್ಯವಿದ್ದಂತೆ ತೋರಿ ಹಾಡುಗಾರನ ಕಂಠದಲ್ಲಿ ಪ್ರತಿಯೊಂದು ಪಲುಕೂ ಸ್ಪಷ್ಟವಾಗಿ ಕೇಳಿಬರುತ್ತದೆ. ಹಿಂದಿನ ಗಾಡಿಯವನು 'ಗಂಟೆ ಎಂಟಾಯಿತು ಅಂಟೆಸದಿದ್ರಲ್ಲಿ ತಂಟೆಮಾಡುತ್ತಾರೆ ಪೋಲೀಸ್ನೋರು' ಎಂದು ಹೇಳಿ ನಿಲ್ಲಿಸಿದರೆ ಮುಂದಿನ ಗಾಡಿಯವನು ಅದೇ ಚರಣವನ್ನೆತ್ತಿ ರಾಗವಾಗಿ ಎಳೆದು ಹೇಳುವನು. ಅನಂತರ ಹಿಂದಿನ ಗಾಡಿಯವನು ಮುಂದಿನ ಚರಣವನ್ನೆತ್ತು ವನು. ಆ ರಾತ್ರಿಯ ಆವರಣದಲ್ಲಿ ಗಾಡಿಯ ಕರ್ಕಶ ಶಬ್ದವೂ ಗಾಯಕರ ಕೊರಳ ದನಿಗೆ ಹೊಂದಿಕೊಂಡಂತೆ ತೋರಿ ಆ ಹಾಡುಗಳಲ್ಲಿ ಅವರ್ಣನೀಯ ವಾದ ಮಾಧುರ್ಯವಿರುತ್ತದೆ. ಸ್ವಲ್ಪ ಹೊತ್ತು ಕಳೆದಮೇಲೆ ಗಾಡಿಯವರಿಗೆ ಹಾಡುವುದು ಬೇಸರವಾಗಿ ಪದಗಳು ಒಂದೊಂದಾಗಿ ನಿಂತುಹೋಗುತ್ತವೆ. ಸ್ವಲ್ಪ ಹೊತ್ತು ಅಲ್ಲೊಬ್ಬರು ಇಲ್ಲೊಬ್ಬರು ಏನೋ ಮಾತಾಡಿಕೊಳ್ಳುತ್ತಿದ್ದು ಅನಂತರ ಸ್ವಲ್ಪ ಜಂಪರ ಬಂದಂತಾಗಿ ಗಾಡಿಯವರು ಮೂಕಿಯ ಮೇಲೆಯೇ ಕುಳಿತು ತೂಕಡಿಸುತ್ತಾರೆ. ಎತ್ತುಗಳು ಮುಂದಿನ ಗಾಡಿಯ ಉದಾಹರಣೆ ಯನ್ನನುಸರಿಸಿ ಚಾಚೂ ತಪ್ಪದಂತೆ ಗಾಡಿಯನ್ನು ತುಯ್ಯುತ್ತಿರುವುವು. ನಿಶ್ಶಬ್ದತೆ ಜಗತ್ತನ್ನು ಸಂಪೂರ್ಣವಾಗಿ ಆವರಿಸಿಕೊಳ್ಳುವುದು.

ಆಗ ನಾವು ರಾತ್ರಿಯ ಸೌಂದರ್ಯವನ್ನೂ ಶಾಂತಿಯನ್ನೂ ಅನುಭವಿ ಸಲು ನಿರಾತಂಕವಾಗಿ ಮಲಗುವೆವು. ಮನಸ್ಸು ಭೂಮ್ಯಾಕಾಶಗಳಲ್ಲಿ ಎಲ್ಲೆಲ್ಲಿಯೂ ಸಂಚರಿಸುವುದು. ಮೇಲೆ ನಕ್ಷತ್ರಗಳು ಅದೇನು ದಿವ್ಯವಾದ ಹೊಳಪಿನಿಂದ ಥಳಥಳಿಸುತ್ತಿವೆ! ಅಲ್ಲೇನಾದರೂ ಜನಗಳು ವಾಸಿಸುತ್ತಿದ್ದರೆ ಅವರೂ ನಮ್ಮ ಭೂಮಿಯನ್ನು ಹೀಗೆ ನೋಡಿ ಆನಂದಪಡುವರೇನೊ . . . . ನಾಳೆ ಊರಿಗೆ ಹೋದಮೇಲೆ ಬೆಳುದಿಂಗಳಿನ ಮತ್ತು ನಕ್ಷತ್ರಗಳ ಸೌಂದರ್ಯ ವನ್ನು ಸವಿಯುವುದಕ್ಕೆ ಯಾವ ಅಡಚಣೆಯೂ ಇಲ್ಲ . . . . . ಅಲ್ಲಿ ನಮಗೆ ಸಂಪೂರ್ಣ ಸ್ವಾತಂತ್ರ್ಯ; ಬೆಳಗ್ಗೆ ಈಜುವುದಕ್ಕೆ ಹೋಗುವುದು; ಸಂಜೆ ತೋಟಕ್ಕೆ ಹೋಗಿ ಎಳನೀರು ಕುಡಿಯುವುದು . . . . ರಾಮಮಂದಿರದ ಹಳೆಯ ತಂಬೂರಿಯನ್ನು ಶ್ರುತಿಮಾಡಿಕೊಂಡು ಹುಚ್ಚು ಹುಚ್ಚಾಗಿ ಹಾಡು ಹೇಳುವುದು, . . . . ಹೀಗೆ ಯೋಚನೆಗಳು, ಒಂದೊಂದಾಗಿ ಮನಸ್ಸಿಗೆ ಬಂದು ಮತ್ತೆ ಎಲ್ಲಿಯೋ ಹೊರಟುಹೋಗುವುವು. ಈಗ ಗಾಡಿಯವನು

ಅದೇನೋ ಕನವರಿಸಿಕೊಳ್ಳುತ್ತಿದ್ದಾನೆ. ತನ್ನ ಚೆನ್ನಿಯನ್ನು ನೆನೆಯುತ್ತಿರಬಹುದು. ನನಗೂ ಒಂದು ದಿನ ಅಂಥ ಹುಚ್ಚು ಹಿಡಿಯುವುದೇನೋ! ಒಂದಲ್ಲ ಒಂದು ದಿನ ಚೆಲುವೆಯೊಬ್ಬಳು ನನ್ನ ಕೈಹಿಡಿಯುತ್ತಾಳೆ. ಎಲ್ಲಿ ಬೆಳೆಯುತ್ತಿರುವಳೋ ಆ ಬಯಕೆಯ ಹೆಣ್ಣು! ಹೇಗಿರುವಳೊ! ನನ್ನ ಕಲ್ಪನೆಯ ಚಿತ್ರದಂತೆಯೇ ಬಿಳಿಯ ಸಂಪಗೆ ಹೂವಿನ ವರ್ಣವೂ ಚೆಂದುಟಿಗಳೂ ನಕ್ಷತ್ರಗಳಂತೆ ಹೊಳೆಯುವ ಕಣ್ಣುಗಳೂ ಉಳ್ಳ ಕೃಶಾಂಗಿಯಿರಬಹುದೆ! ನಾನು ಪ್ರೀತಿಸುವ ಹೆಸರಿನವಳೆ? ಮುಂದೆ ನನ್ನ ಮನೆಯನ್ನು ಬೆಳಕು ಮಾಡಲು ಅವಳನ್ನು ಕರೆತರುವಾಗ ಹೀಗೆಯೇ ಪ್ರಯಾಣಮಾಡುವೆನೇನೋ! ಅವಳು ಸಮೀಪದಲ್ಲಿದ್ದರೆ ಗಾಡಿ ಎಷ್ಟು ನಿಧಾನವಾಗಿ ಬೇಕಾದರೂ ಸಾಗಲಿ . . . . ಈ ಯೋಚನೆಗಳೂ ಹೊತ್ತೇರಿದ ಹಾಗೆ ಮಂಕಾಗುತ್ತ ಬಂದು ಮನಸ್ಸಿನಲ್ಲಿ ಒಂದು ಬಗೆಯ ಶಾಂತಿಯೂ ಆನಂದವೂ ಮೂಡುವುವು. ರಾತ್ರಿಯ ಆವರಣದಲ್ಲಿ, ಚಿಟ್ಟೆಗಳ ಸಂತತವಾದ ಕೂಗಿನಲ್ಲಿ, ಗಾಡಿಯ ಶಬ್ದದಲ್ಲಿ ನಾವು ಲೀನರಾದಂತಿರುವುದು; ಆದ್ಯಂತ ದೇಹವೂ ನಶಿಸಿಹೋಗಿ, ಬೆಳುದಿಂಗಳು ಸುರಿಯುತ್ತಿರುವ ನೀಲಾಕಾಶದೊಡನೆ ನಾವು ಬೆರೆದುಹೋಗುವೆವು. ಹಾಗೆಯೇ ನಿದ್ರೆ ಬರುವುದು. ಒಂದೆರಡು ಘಂಟೆಗಳಾದ ಮೇಲೆ ಗಾಡಿ ಯಾವುದೋ ಕಲ್ಲಿನ ಮೇಲೆ ಉರುಳಿದಂತಾಗಿ ನಮಗೆ ಎಚ್ಚರವಾಗುವುದು. ಆಗ ನಾವು ಸ್ಪಷ್ಟಪ್ರಪಂಚದಲ್ಲಿದ್ದರೂ ಅದು ನಮಗೆ ಕನಸಿನ ಪ್ರಪಂಚದಂತೆಯೇ ತೋರುವುದು. ಮುಂದೆ ಕಪ್ಪನೆಯ ರಾಶಿಗಳಂತೆ ತೋರುವ ಸಾಲುಮರಗಳು; ಮರಗಳ ಮತ್ತು ಎಲೆಗಳ ನಡುವೆ ಕದ್ದು ತೂರಿಬಂದು ರಸ್ತೆಯ ಮೇಲೆ ಚಲನಚಿತ್ರಗಳನ್ನು ರಚಿಸುವ ಬೆಳುದಿಂಗಳು; ಅದೇ ರಸ್ತೆ, ಅದೇ ಆಕಾಶ—ನಾವು ಅಷ್ಟು ಹೊತ್ತೂ ಪ್ರಯಾಣಮಾಡದೆ, ಇದ್ದ ಕಡೆಯೇ ಇದ್ದಂತೆ ತೋರುತ್ತದೆ. ಜೊತೆಯ ಗಾಡಿಗಳು ಮುಂದೆ ಹೊರಟುಹೋಗಿರಬೇಕು. ನಮ್ಮ ಗಾಡಿ ಒಂಟಿಯಾಗಿದೆ. ಇಲವಾಲಕ್ಕೂ ಎಡತೊರೆಗೂ ನಡುವೆ ಇರುವ ಜೋರೆಯು ಕಳ್ಳತನಕ್ಕೆ ಪ್ರಸಿದ್ಧವಾದ ಸ್ಥಳ. ಗಾಡಿಯವನು "ಎಚ್ಚರಾಗಿದ್ದೀರ ಸ್ವಾಮಿ, ಒಸಿ ಹುಷಾರಾಗಿರಿ, ಮುಂಜಿಮಾಡುವ ಜಾಗ ಇದು" ಎಂದು ಹೇಳುತ್ತಾನೆ. ಅವನ ಗ್ರಾಮ್ಯ ಭಾಷೆಯಲ್ಲಿ ಕಳ್ಳತನಕ್ಕೆ 'ಮುಂಜಿ' ಎಂದು ಹೆಸರು. ಅವನು ಹಿಂದಿನ ಕಾಲದ ಕಳ್ಳತನದ ಕಥೆಗಳನ್ನೆಲ್ಲಾ ಹೇಳುವನು. ಆ ಕಥೆಗಳಲ್ಲಿ ಬಂದ ಕಳ್ಳರೇನೋ ನಮ್ಮಂತೆಯೇ ಮನುಷ್ಯರೇ. ಆದರೆ ನಾನು ನೋಡದ ನನ್ನ ಕಲ್ಪನೆಯ ಕಳ್ಳರು ಮನುಷ್ಯರಲ್ಲ. ಅವರು ಹಿಂದೆ ಋಷ್ಯಾಶ್ರಮಗಳಿಗೆ ಬಂದು ಯಜ್ಞಕ್ಕೆ ಭಂಗತರುತ್ತಿದ್ದ

ರಾಕ್ಷಸರಂತೆ ಕ್ರೂರಕರ್ಮಿಗಳು, ಕರಾಳಾಕೃತಿಯುಳ್ಳವರು. ಈ ರಾಕ್ಷಸರು, ಯವನ ಯಾಮಿನೀ ಕಥೆಗಳಲ್ಲಿ ಬರುವ ಒಂಟಿಗಣ್ಣಿನ ಭೂತಗಳು, ಇಂಗ್ಲಿಷ್ ಫೇರಿ ಕಥೆಗಳಲ್ಲಿ ಬರುವ ಘೋರರೂಪಿಗಳು—ಇವರೆಲ್ಲರಿಂದಲೂ ಅಂಶಗಳನ್ನು ಸಂಗ್ರಹಿಸಿ ನನ್ನ ಕಲ್ಪನೆಯು ಇಲವಾಲದ ಬೋರೆಯ ಕಳ್ಳರನ್ನು ಸೃಷ್ಟಿಸಿದ್ದಿತು. ಆಜಾನುಬಾಹುಗಳೂ ಅರ್ಧ ನಗ್ನವಾದ ಕಾರ್ಗಪ್ಪಿನ ದೇಹವುಳ್ಳವರೂ ಆದ ಈ ಜನರು ಅಮಾವಾಸ್ಯೆಯ ಕಗ್ಗತ್ತಲಿನಲ್ಲಿ ತಮ್ಮ ಗುಹೆಗಳಿಂದ ಹೊರಟು ಇದ್ದಕ್ಕಿದ್ದ ಹಾಗೆಯೇ ಬರಸಿಡಿಲಿನಂತೆ ಗಾಡಿಯವರ ಮೇಲೆ ಎರಗಿ ಕಲ್ಲು ಮಳೆಯನ್ನು ಕರೆದು ಗಾಡಿಯನ್ನು ಪುಡಿಮಾಡುವರು; ಅವರ ಕೈಗೆ ಸಿಕ್ಕಿದವರು ಬದುಕುವ ಆಸೆಯಿಲ್ಲ. ನಾನು ಎಂದೂ ಕಳ್ಳರ ಕೈಗೆ ಸಿಕ್ಕದಿರುವುದರಿಂದ ನನ್ನ ಕಲ್ಪನೆಯ ಚಿತ್ರವು ಇನ್ನೂ ಸಂಪೂರ್ಣವಾಗಿ ಮಣ್ಣುಗೂಡಿಲ್ಲ.

ಆ ಬೋರೆಯನ್ನು ಬಿಟ್ಟು ಸ್ವಲ್ಪ ಮುಂದೆ ಹೋದರೆ ಅಲ್ಲಿ ದೆವ್ವಗಳ ಕಾಟ ಹೆಚ್ಚು. ದಾರಿಯ ಪಕ್ಕದಲ್ಲಿ ಹುಲ್ಲುಹಸಲೆಯ ಮೇಲೆ ಅಲ್ಲಲ್ಲಿ ಮೋಹಿನಿ ಕುಳಿತಿರುವುದುಂಟು. ನನ್ನ ಮೋಹಿನಿಯು ರವಿವರ್ಮನ ಚಿತ್ರದವಳೋ ಅಥವಾ ಜನಗಳ ಕಥೆಯವಳೋ ಚೆನ್ನಾಗಿ ನೆನಪಿಲ್ಲ. ಅಂತೂ ಅವಳು ರವಿವರ್ಮನ ಮೋಹಿನಿಯಂತೆಯೇ ಬಲು ಸುಂದರಿ. ಬೆಳುದಿಂಗಳಿನಂತೆಯೇ ದಿವ್ಯಧಾವಳ್ಯವುಳ್ಳ ತೆಳ್ಳನೆಯ ಸೀರೆಯನ್ನುಟ್ಟಿರುವಳು; ಕಂಚುಕವಿಲ್ಲ; ಕೂದಲು ಗಂಟಿನಲ್ಲಾಗಲಿ ಜಡೆಯಲ್ಲಾಗಲಿ ಬಂಧನಕ್ಕೆ ಸಿಕ್ಕದೆ ಅವಳ ಬೆನ್ನಮೇಲೂ ಹೆಗಲ ಮೇಲೂ ಎದೆಯ ಮೇಲೂ ಹರಿಯುತ್ತಿದೆ; ಮುಂಗುರುಳುಗಳು ಗಾಳಿಯಲ್ಲಿ ಸ್ವಲ್ಪ ಚೆದರಿ ಸುಳಿಸುಳಿಯಾಗಿ ಮತ್ತೆ ಕೂದಲನ್ನು ಸೇರಿಕೊಳ್ಳುತ್ತವೆ. ಅವಳ ತುಟಿಗಳು ತಾಂಬೂಲದ ರಾಗದಿಂದ ಕೆಂಪಾಗಿವೆ; ಕೈಯಲ್ಲಿಯೂ ಎಲೆ ಅಡಕೆಯನ್ನು ಮಡಿಸಿ ಸಿದ್ಧವಾಗಿಟ್ಟುಕೊಂಡಿದ್ದಾಳೆ. ಅವಳು ಯಾರೊಡನೆಯೂ ಮಾತಾಡುವುದಿಲ್ಲ. ಅವಳ ಕಣ್ಣಿನ ಕಟಾಕ್ಷವೂ ಅವಳ ಕೈಸನ್ನೆಯ ಭಾವಭಂಗಿಗಳೂ ನಾವು ಕೇಳದ ಅವಳ ಕೋಮಲ ಕಂಠಸ್ವರಕ್ಕಿಂತಲೂ ಹೆಚ್ಚಾಗಿ ನಮ್ಮನ್ನು ಸೆರೆಹಾಕಿಕೊಳ್ಳುವುವು. ಒಂಟಿ ಗಾಡಿಯವರೋ ಕಾಲುನಡಿಗೆಯ ಪಾಂಥರೋ ಬಂದರೆ ಆಕೆ ಅವರನ್ನು ಸನ್ನೆ ಮಾಡಿ ಕರೆದು ತಾಂಬೂಲವನ್ನು ನೀಡುತ್ತಾಳೆ. ಅದನ್ನು ಸ್ವೀಕರಿಸಿದವರು ಅವಳ ಬಲೆಗೆ ಸಿಕ್ಕಿ ಅಲ್ಲಿಂದ ಹದಿನೈದು ದಿನಗಳೊಳಗೆ ಸಾಯುವರು. ನಮ್ಮೂರಿನವರು ಕೆಲವರು ಹಾಗೆ ಪ್ರಾಣ ಕಳೆದುಕೊಂಡದ್ದುಂಟು. ಎಷ್ಟೋವೇಳೆ ಮೋಹಿನಿ ಕುಳಿತಿರುವ ಬಳಿಗೆ ಬಂದೊಡನೆಯೇ ಕಣ್ಣಿಗೆ ಏನೂ ಕಾಣದಿದ್ದರೂ ಗಾಡಿಯು ತಾನಾಗಿಯೇ ನಿಂತು

ಹೋಗುವುದಂತೆ. ನಾನು ದೊಡ್ಡವನಾಗುವ ವೇಳೆಗೆ ಈ ನವೀನ ಪ್ರಪಂಚದ ಅರಸಿಕತೆಗೆ ಜುಗುಪ್ಸೆಪಟ್ಟು ಮೋಹಿನಿಯರು ಅಲ್ಲಿಗೆ ಬರುವುದನ್ನೇ ಬಿಟ್ಟಂತೆ ತೋರುತ್ತದೆ. ನನಗೆ ನನ್ನ ಜಿತೇಂದ್ರಿಯತ್ವವನ್ನು ಪ್ರದರ್ಶಿಸುವ ಸಮಯವು ಒದಗಲೇ ಇಲ್ಲ.

ಒಂಟಿ ಗಾಡಿಯವರಿಗೆ ಮೋಹಿನಿಯ ಹೆದರಿಕೆ ಹೆಚ್ಚಾದರೂ ಅದಕ್ಕಿಂತಲೂ ಜಡೆಮುನಿಯಿಂದ ಅಪಾಯ ಹೆಚ್ಚು. ಒಂದೊಂದು ವೇಳೆ ಜಡೆಮುನಿಯ ಪರಿವಾರವು ರಸ್ತೆಯನ್ನು ಸಂಪೂರ್ಣವಾಗಿ ಅಡ್ಡಗಟ್ಟಿ ನಿಂತು ಬಿಡುವುದುಂಟು. ಆಗ ಗಾಡಿಯಲ್ಲಿರುವವರು ಧೈರ್ಯಸ್ಥರಲ್ಲದಿದ್ದರೆ ಎಲ್ಲರೂ ರಕ್ತಕಾರಿ ಸತ್ತುಹೋಗುವರು. ನಮ್ಮೂರ ಕಡೆಯ ಜಡೆಮುನಿಯು ಇತರ ಮುನಿಗಳಂತೆ ಬಡದೆವ್ವವಲ್ಲ. ಪ್ರೇತಪ್ರಪಂಚದಲ್ಲಿ ಅದಕ್ಕೆ ರಾಜಮರ್ಯಾದೆ ಯುಂಟು. ಅದರ ವಾಸ ನಮ್ಮೂರಿಗೂ ಕೃಷ್ಣರಾಜಪೇಟೆಗೂ ನಡುವೆ ಇರುವ ಜೆಳ್ಳಿಬೆಟ್ಟದಲ್ಲಿ. ಅದರ ರಾತ್ರಿಯ ಕಾಲದ ಕಾರ್ಯಕ್ರಮ ನಮ್ಮೂರಿನ ವರಿಗೆಲ್ಲರಿಗೂ ಗೊತ್ತು. ಸುಮಾರು ಹನ್ನೆರಡು ಘಂಟೆಗೆ ಅದು ತನ್ನ ಗುಹೆಯನ್ನು ಬಿಟ್ಟು ಹೇಮಾವತಿ ನದಿಗೆ ಬಂದು ಅಲ್ಲಿ 'ಕೃಷ್ಣಭಟ್ಟನ ಮಡು' ವಿನಲ್ಲಿ ಮುಳುಗಿರುವ ಕಂಚಿನ ತೇರನ್ನು ಎಳೆದು ಮೇಲಕ್ಕೆ ಹಾಕಲು ಯತ್ನಿ ಸುತ್ತದೆ. ಇದುವರೆಗೂ ಆ ಪ್ರಯತ್ನವು ಸಫಲವಾಗದಿದ್ದರೂ ಮಡುವಿನ ನೀರೇನೋ ಮುನಿಯ ಎಳೆದಾಟದಿಂದ ಯಾವಾಗಲೂ ಸ್ವಲ್ಪ ಕದಡಿದಂತೆಯೇ ಕಾಣುವುದಂತೆ. ಈ ಕರ್ತವ್ಯವಾದ ಮೇಲೆ ಮುನಿಯು ಸ್ನಾನ ಜಪಗಳನ್ನು ತೀರಿಸಿಕೊಂಡು ನಮ್ಮೂರಿನ ಸೋಮೇಶ್ವರನ ಗುಡಿಗೆ ಬಂದು ಅಲ್ಲಿ ದೇವರಿಗೆ ಅಭಿಷೇಕಮಾಡಿ ಅನಂತರ ಎಡತೊರೆಯ ಕಡೆಗೆ ಹೋಗುವುದು. ಅಲ್ಲಿ ಅರ್ಕೇಶ್ವರನ ಪೂಜೆಮಾಡಿದ ಮೇಲೆ ಬೆಳಗಿನ ಜಾವದ ವೇಳೆಗೆ ಮತ್ತೆ ತನ್ನ ಗುಹೆಗೆ ಹೊರಟುಹೋಗುವುದು. ನಮ್ಮೂರ ಗಾಡಿಯವರು ಜಡೆಮುನಿಯನ್ನು ಕಂಡಿರುವುದು ಸಾಧಾರಣವಾಗಿ ಎಡತೊರೆಯ ಬಳಿಯಲ್ಲಿ. ಅವರ ವರ್ಣನೆ ನಿಜವಾದರೆ ಮುನಿಯ ವೈಭವವು ರಾಜವೈಭವದಂತೆಯೇ ಇರಬೇಕು. ಜಡೆಮುನಿಯು ಬಹು ಲಕ್ಷಣವಾಗಿ ಕಾಣುವ ಗಂಡು ದೆವ್ವ. ಬಿಳಿಯ ವರ್ಣ, ಕೊರಳಿನಲ್ಲಿ ರುದ್ರಾಕ್ಷಿ, ಹಣೆಯಲ್ಲಿ ಶುಭ್ರವಾಗಿ ಕಾಣುವ ವಿಭೂತಿ, ಹುಬ್ಬಿನ ನಡುವೆ ಕುಂಕುಮ—ನೋಡಿದರೆ ಉತ್ತಮನಾದ ಶ್ರೋತ್ರಿಯ ನಂತೆಯೇ ಕಾಣುತ್ತದೆ. ನಮಗೂ ಅದಕ್ಕೂ ಇರುವ ವ್ಯತ್ಯಾಸವಿಷ್ಟೆ: ಅದಕ್ಕೆ ಬೆನ್ನೂ ಹಿಮ್ಮಡಿಯೂ ಮುಂದಾಗಿ ಎದೆಯೂ ಕಾಲ್ಬೆರಳುಗಳೂ ಹಿಂದಾಗಿ ಇರುತ್ತವೆ. ಇದಲ್ಲದೆ ಜಡೆಮುನಿಯು ಸ್ತ್ರೀಯರಂತೆ ಮಧ್ಯದಲ್ಲಿ ಬೈತಲೆ

ತೆಗೆದು ಜುಟ್ಟನ್ನು ನಾಲ್ಕೈದು ಜಡೆಯಾಗಿ ಹೆಣೆದುಕೊಂಡಿರುತ್ತದೆ. ಈ ಜಡೆಗಳು ಸುಮಾರು ನಾನೂರು ಐನೂರು ಅಡಿ ಉದ್ದವಿರುತ್ತವೆ. ಜಡೆ ಮುನಿಯು ನಾಲ್ಕು ದೆವ್ವಗಳು ಹೊತ್ತಿರುವ ಪಲ್ಲಕ್ಕಿಯಲ್ಲಿ ಕುಳಿತು ಪ್ರಯಾಣ ಹೊರಡುವುದು. ಮುಂದೆ ನೂರಾರು ಕೊಳ್ಳಿದೆವ್ವಗಳು ಉರಿಯುತ್ತ ಹೋಗುತ್ತವೆ. ಹಿಂದುಗಡೆಯಲ್ಲೂ ಪಕ್ಕದಲ್ಲೂ ದೆವ್ವಗಳು ಮುನಿಯ ಜಡೆಯನ್ನು ಹೊತ್ತುಕೊಂಡು ನಡೆಯುತ್ತವೆ. ಈ ಮೆರವಣಿಗೆಯು ರಸ್ತೆಯ ಮಧ್ಯದಲ್ಲಿ ವೇಗವಾಗಿ ಹೋಗುತ್ತಿದ್ದರೂ ಜನರ ಕಣ್ಣಿಗೆ ಎಷ್ಟೋ ವೇಳೆ ಏನೂ ಕಾಣಿಸುವುದಿಲ್ಲ; ಮಾತಿನ ಶಬ್ದವಾಗಲಿ ನಡಿಗೆಯ ಶಬ್ದವಾಗಲಿ ಕೇಳುವುದಿಲ್ಲ. ಭಯಂಕರವಾದ ಸುಂಟರಗಾಳಿ ಬೀಸಿದಂತೆ ಮಾತ್ರ ಅನುಭವವಾಗುವುದು. ಒಂದೊಂದು ವೇಳೆ ಇದ್ದಕ್ಕಿದ್ದ ಹಾಗೆ ಕೊಳ್ಳಿಯ ದೆವ್ವಗಳು ಜ್ವಲಿಸಿದಾಗ ಆ ಮೆರವಣಿಗೆಯು ಅದೃಷ್ಟಹೀನರ ಕಣ್ಣಿಗೆ ಕಾಣುವುದು. ಆ ಜನರು ಧೈರ್ಯಸ್ಥರಾದರೆ ಮುನಿಯನ್ನು ವಶಮಾಡಿಕೊಳ್ಳುವ ಮಾರ್ಗವುಂಟು. ಅಮಾವಾಸ್ಯೆಯ ದಿನ ಅದರ ಜಡೆಯನ್ನು ಸ್ವಲ್ಪ ಕತ್ತರಿಸಿ ಇಟ್ಟುಕೊಂಡರೆ ಮುನಿಯು ಎಂದೆಂದಿಗೂ ನಮ್ಮ ಸೇವೆಯಲ್ಲಿ ನಿಲ್ಲುತ್ತದೆ. ನಮ್ಮೂರ ಸಿಂಗನು ಎಡತೊರೆ ತೋಪಿನ ಬಳಿ ಗಾಡಿ ಹೊಡೆದುಕೊಂಡು ಹೋಗುತ್ತಿದ್ದಾಗ ಗಾಡಿಯ ಬಳಿ ಹರಿದುಬಿದ್ದಿದ್ದ ಜಡೆಯ ಕೂದಲನ್ನು ಕತ್ತರಿಸಿಕೊಂಡನಂತೆ. ಅಂದಿನಿಂದ ಅವನ ಹೊಲದಲ್ಲಿ ಕಾಳಿನ ಪೈರು ಎಲ್ಲಾ ಕಡೆಗಿಂತಲೂ ಹುಲುಸಾಗಿ ಬೆಳೆದು ಅವನು ಊರಿಗೆ ದೊಡ್ಡ ಕುಳವಾದನು. ಆದರೆ ಅವನು ಸಾಯುವಾಗ ಮಾತ್ರ ಮುನಿಯು ಬಂದು ನಾರಾಯಣ ಸ್ಮರಣೆಮಾಡಲು ಅವಕಾಶಕೊಡದೆ ಅವನ ನಾಲಿಗೆಯನ್ನು ಹಿರಿದುಬಿಟ್ಟಿತಂತೆ. ಇದನ್ನೆಲ್ಲಾ ಬಲ್ಲ ಗಾಡಿಯವರು ಎಡತೊರೆಯ ತೋಪಿಗೆ ಬಂದರೆ ಎಡಗೈಯ್ಯಲ್ಲಿ ಜೀವ ಹಿಡಿದುಕೊಂಡೇ ಗಾಡಿ ಹೊಡೆಯುತ್ತಾರೆ. ಆ ತೋಪಿನಲ್ಲಿ ಹಗಲು ಹೊತ್ತಿನಲ್ಲೇ ದೆವ್ವ ಕುಣಿಯುತ್ತದೆಂದು ಪ್ರತೀತಿ. ನಾವು ಆ ಸ್ಥಳಕ್ಕೆ ಒಂದೊಂದು ವೇಳೆ ಅರುಣೋದಯದ ಸಮಯಕ್ಕೆ ಬರುವುದುಂಟು. ಆ ವೇಳೆಗೆ ಮೂಡಲಿನ ಅಸ್ಪಷ್ಟ ಕಾಂತಿಯು ಮರಗಳ ನಡುವೆ ಅಲ್ಪ ಸ್ವಲ್ಪ ಕಾಣುವುದು. ಆ ಮೂಡಲ ಹಿನ್ನೆಲದಲ್ಲಿ ಮರಗಳು ಇದ್ದದ್ದೂ ಕಪ್ಪಾಗಿ ಕಾಣುವುವು. ಮರಗಳ ಕೊಂಬೆಗಳಲ್ಲಿ ದೆವ್ವಗಳು ಅವಿತುಕೊಂಡು ನಮ್ಮನ್ನು ಕ್ರೂರದೃಷ್ಟಿಯಿಂದ ನೋಡುತ್ತಿರುವುವೆಂದೇ ನನ್ನ ಭಾವನೆ. ಯಾವ ಘಳಿಗೆಯಲ್ಲಿ ಅವು ಗಾಡಿಯೊಳಕ್ಕೆ ನೆಗೆದು ನಮ್ಮ ಕತ್ತನ್ನು ಮುರಿದುಹಾಕುವುವೋ! ನನ್ನ ಹೆದರಿಕೆಯೇನೋ ಬರಿಯ ಕಾರಣವಿಲ್ಲದ ಹೆದರಿಕೆಯಾಯಿತು. ಒಂದು ದಿನವೂ ದೆವ್ವಗಳು

ನನ್ನ ಕಣ್ಣಿಗೆ ಬೀಳಲಿಲ್ಲ. ನಮ್ಮ ನವೀನ ಪ್ರಪಂಚವು ಎಲ್ಲಾ ವಿಧದಲ್ಲಿಯೂ ನೀರಸವಾದದ್ದು.

ಗಾಡಿಯವರು ಬೆಳಗ್ಗೆ ಒಂಬತ್ತು—ಹತ್ತು ಘಂಟೆಯವರೆಗೂ ಎಡತೊರೆಯಲ್ಲಿಯೇ ಇದ್ದು ಅನಂತರ ಮುಂದಕ್ಕೆ ಪ್ರಯಾಣಮಾಡುವುದೂ ಉಂಟು. ಗಾಡಿಯಲ್ಲಿರುವವರಿಗೆ ರಾತ್ರಿಯಲ್ಲಿ ಕಲ್ಪನೆಯ ಜೀವನವೇ ಹೆಚ್ಚಾದರೂ ಬೆಳಗಾದ ಮೇಲೆ ಅವರು ಬಾಹ್ಯಪ್ರಪಂಚದ ಜೀವನ ಸಂಪತ್ತನ್ನು ಮನದಣಿಯ ನೋಡಬಹುದು. ಅಲ್ಲಲ್ಲಿಯೇ ರಸ್ತೆಯ ಪಕ್ಕದಲ್ಲಿ ನೆಟ್ಟಿರುವ ಕಲ್ಲಿನ ಪೀಠಗಳ ಮೇಲೆ ತಮ್ಮ ಹೊರೆಗಳನ್ನು ಇಳಿಕಿ ಕೂಲಿಯವರು ವಿಶ್ರಮಿಸಿಕೊಳ್ಳುತ್ತಿರುತ್ತಾರೆ. ಕೆಲವುಕಡೆ ಮರಗಳ ಕೆಳಗೆ ಸಣ್ಣ ಸಂಸಾರಗಳಿರುತ್ತವೆ. ಮೂರು ಕಲ್ಲುಗಳನ್ನು ಕೂಡಿಸಿ ಒಲೆಮಾಡಿಕೊಂಡು ತಾಯಿ ಅಡಿಗೆ ಮಾಡುತ್ತಿರುತ್ತಾಳೆ; ಮಕ್ಕಳು ಸುತ್ತಮುತ್ತ ಬಿದ್ದಿರುವ ಕಡ್ಡಿಗಳನ್ನು ಸೌದೆಗಾಗಿ ಆಯ್ದು ಕೊಡುತ್ತಿರುತ್ತಾರೆ. ಆ ತೋಪಿನ ಮರದ ಕೆಳಗೆ ಒಬ್ಬ ಯುವಕನು ತನ್ನ ಪ್ರೇಯಸಿಯೊಡನೆ ಕುಳಿತಿದ್ದಾನೆ. ಸೇವಂತಿಗೆಯ ದಂಡೆಯನ್ನು ಮುಡಿದು ಬಣ್ಣಬಣ್ಣದ ಸೀರೆಯನ್ನುಟ್ಟಿರುವ ಆ ಹಳ್ಳಿಯ ಚೆಲುವೆಯು ಎಲೆ ಅಡಕೆಯಿಂದ ರಂಗಾದ ತನ್ನ ತುಟಿಗಳನ್ನು ಬಿರುಕಿಸಿ ಪ್ರಿಯನ ಕಡೆಗೆ ಹುಸಿಕೋಪದ ಓರೆನೋಟವನ್ನು ಬೀರುತ್ತಿದ್ದಾಳೆ. ದಾರಿಯುದ್ದಕ್ಕೂ ಈ ಬಗೆಯ ಚಿತ್ರಗಳು ಕಣ್ಣಿಗೆ ಬೀಳುತ್ತವೆ. ಈ ಮಾನವ ಜೀವನದ ಔತನವನ್ನು ಸವಿಯಬೇಕಾದರೆ ನಾವು ರೈಲಿನಲ್ಲೋ ಮೋಟಾರಿನಲ್ಲೋ ಸುಂಟರಗಾಳಿಗೆ ಸಿಕ್ಕಿದ ತರಗೆಲೆಗಳಂತೆ ತೂರಿಹೋಗಬಾರದು. ಆ ಪ್ರಯಾಣದಲ್ಲಿ ಮನಸ್ಸಿಗೆ ಬೇಕಾದ ವಿರಾಮವೂ ದಾರಿಗರೊಡನೆ ಸೌಹಾರ್ದವೂ ದೊರೆಯುವುದಿಲ್ಲ.

A ಈಗಿನ ಜೀವನವು ವಿಚಿತ್ರತರವಾದ ಆತುರದ ಜೀವನ. ನಾವು ಒಂದು ಘಳಿಗೆ ಒಂದು ಕಡೆ ನಿಲ್ಲಲಾರದೆ ಅಲೆಯುತ್ತಿದ್ದೇವೆ. ಹಿಂದಿನ ಜೀವನದ ಸರಳತೆಯೂ ಏಕಮುಖತೆಯೂ ನಾಶವಾದಂತೆ ತೋರುತ್ತದೆ. ಈಗಿನ ಪ್ರಪಂಚದಲ್ಲಿ ವೇಗ ಹೆಚ್ಚು, ಸಂಪತ್ತು ಹೆಚ್ಚು; ಆದರೆ ಸೌಖ್ಯ ಹೆಚ್ಚೆಂದು ಹೇಳಲಾಗುವುದಿಲ್ಲ. ನಾವು ಹೊಸದಾಗಿ ಕಲ್ಪಿಸಿಕೊಂಡಿರುವ ಸುಖಸಾಮಗ್ರಿಗಳನ್ನು ಬಿಟ್ಟು ಮತ್ತೆ ಹಳೆಯ ಪದ್ಧತಿಗಳನ್ನೇ ಅನುಸರಿಸುವುದೇನೋ ಸಾಧ್ಯವಲ್ಲ. ಆದರೂ ಆಗಿನ ಒರಟು ಜೀವನದಲ್ಲಿಯೂ ಸಹ ಈಗ ನಮ್ಮಲ್ಲಿ ಕಾಣದಿರುವ ಒಂದು ಬಗೆಯ ಸೌಂದರ್ಯವಿತ್ತು; ಅದರ ಅನುಭವ ನಮಗೆ ಇಲ್ಲದ್ದಕ್ಕಾಗಿ ಮನಸ್ಸು ವ್ಯಸನಪಡುತ್ತದೆ. ಒಂದೊಂದು ವೇಳೆ ಕನಸಿನ ಪರಪೆಯಂತೆ ಆ ಹಳೆಯ ನಾಗರಿಕತೆಯ ದೃಶ್ಯಗಳು ಕಣ್ಣಮುಂದೆ ನಿಲ್ಲುತ್ತವೆ.

ಸಂತೋಷಕ್ಕೂ ಸೌಖ್ಯಕ್ಕೂ ಮನಸ್ಸೇ ಕಾರಣವಲ್ಲವೆ? ಒಂದೂರಿನಿಂದ ಮತ್ತೊಂದು ಊರಿಗೆ ಹತ್ತು ಘಂಟೆಯಲ್ಲಿ ಹೋಗುವುದಕ್ಕೆ ಬದಲಾಗಿ ಒಂದೇ ಘಂಟೆಯಲ್ಲಿ ಹೋದಮಾತ್ರಕ್ಕೆ ನಮ್ಮ ಸೌಖ್ಯ ಹೆಚ್ಚಿತೆ? ಆ ವೇಗದಲ್ಲಿ ನಾವು ಪ್ರಪಂಚದ ಜೀವನವನ್ನೂ ಸೌಂದರ್ಯವನ್ನೂ ಎಷ್ಟು ಉಪೇಕ್ಷಿಸ ಬೇಕಾಗುವುದೋ! ಇನ್ನು ಕೆಲವು ವರ್ಷಗಳಲ್ಲಿ ನಮ್ಮ ಹಳ್ಳಿಯ ಜೀವನವು ಸಂಪೂರ್ಣವಾಗಿ ಮಾರ್ಪಾಡು ಹೊಂದಬಹುದು. ಎತ್ತುಗಳ ಕೊರಳಿನ ಗೆಜ್ಜೆಯ ಶಬ್ದ ಸಂಪೂರ್ಣವಾಗಿ ನಿಂತುಹೋಗಿ ಮೋಟಾರಿನ ಕೂಗು ಮಾತ್ರ ಕೇಳಬಹುದು. ಈ ಬದಲಾವಣೆಗಳು ನಡೆಯದಿರಲಾಗುವುದಿಲ್ಲ. ಆದರೆ ಸೌಧಗಳಲ್ಲಿ ವಾಸಿಸುವವರಿಗೆ ಆಗಾಗ ಮರದ ನೆರಳೂ ರುಚಿಸುವಂತೆ ಮೋಟಾರಿನಲ್ಲಿ ತಿರುಗುವವರಿಗೂ ಒಂದೊಂದು ವೇಳೆ ಗಾಡಿಯ ಪ್ರಯಾಣವು ರುಚಿಸಬಹುದು. ಆ ಶಾಂತಿ, ವಿರಾಮ, ಸರಳ ಸಹವಾಸ, ಪ್ರಕೃತಿಯ ಗಮನದಂತೆಯೇ ನಿಧಾನವಾದ ಪ್ರಗತಿ—ಇವು ನಮಗೆ ಸಂತೋಷದಾಯಕ ವಾಗಬಹುದು. ಈಗ ನನಗೆ ಮೋಟಾರಿನ ಕನಸಿಗಿಂತಲೂ ಕೆಲವು ವೇಳೆ ಗಾಡಿಯ ಪ್ರಯಾಣದ ಕನಸೇ ಹೆಚ್ಚಾಗಿದೆ. ಬೆಳುದಿಂಗಳಿನಲ್ಲಿ ನೆನೆದು ಹರಿಯುತ್ತಿರುವ ಹುಣ್ಣಿಮೆಯ ರಾತ್ರಿ, ಸಾಲುಮರಗಳ ನಡುವೆ ಸುತ್ತಿಸುತ್ತಿ ಕೊಂಡು ಹೋಗುವ ರಸ್ತೆ, ಒಳ್ಳೆಯ ಜಾತಿಯ ಎತ್ತುಗಳು ತುಯ್ಯುತ್ತಿರುವ ಗಾಡಿ, ಜೊತೆಯಲ್ಲಿ ನನ್ನ ನಲ್ಲೆ:—ಪ್ರಯಾಣವು ನಿಧಾನವಾದರೇನು, ನಿಶ್ಚಿತ ಸ್ಥಳವನ್ನು ಎಂದು ತಲಪಿದರೇನು, ತಲಪದಿದ್ದರೆ ತಾನೆ ಏನು?

## ಅಭ್ಯಾಸ

೧. **ಕಠಿಣ ಶಬ್ದಗಳ ಅರ್ಥ:—**

ರೊಮಾನ್ಸ್—ಅದ್ಭುತ ಸಾಹಸ, ಕಲ್ಪನೆ, ಪ್ರಣಯ. ನಲ್ಲ—ಪ್ರಿಯ, ಪತಿ. ಮಾಮಲೆದಾರ—ಕಂದಾಯ ವಸೂಲಿಮಾಡುವ ತಾಲ್ಲೂಕಿನ ಮುಖ್ಯಾಧಿಕಾರಿ, ಅಮಲ್ದಾರ. ನಿರ್ಘೃಣ—ಕ್ರೂರ, ದಯೆಯಿಲ್ಲದ. ಅಮೋಘ—ತಪ್ಪಿಲ್ಲದ, ಅಮೂಲ್ಯವಾದ. ಧಾವಳ್ಯ—ಬಿಳುಪು. ಲಂಪಟ—ಅತಿಕಾಮಿ, ದುರ್ಮೋಹಿ. ಆಸ್ಥೆ—ಪ್ರಯತ್ನ, ಆಸಕ್ತಿ, ಶ್ರದ್ಧೆ. ಪಲುಕು—ರಾಗದ ಮೋಡಿ, ಧ್ವನಿಯ ಏರಿಳಿತ. ಶ್ರೋತ್ರಿಯ—ವೇದಗಳನ್ನು ಚೆನ್ನಾಗಿ ಓದಿದವನು. ಎಡಗೋಲು—ಎಡಪಕ್ಕದ ಎತ್ತು. ಕಕ್ಕಡ—ಪಂಜು, ದೊಣ್ಣೆಗೆ ಬಟ್ಟೆ ಸುತ್ತಿ ಎಣ್ಣೆ ಹೊಯ್ದು ಉರಿಸುವ ದೀಪ.

ಉಕ್ಕಡ—ಒಂದು ಊರಿನ ಅಥವಾ ನಗರದ ಎಲ್ಲೆಗಟ್ಟು, ಕಾವಲು ಮನೆ. ಪೆಗ್ಗಿ—ಎಬಡ, ಹೆಡ್ಡ. ಕಲ್ಯಾಣಿಸೇವೆ—ಒಂದು ಸಿಹಿ ತಿಂಡಿ. ಮಾತಲಿ—ಇಂದ್ರನ ಸಾರಥಿ, ಇಲ್ಲಿ ಸಾರಥಿ ಎಂಬ ವಿಶಾಲಾರ್ಥದಲ್ಲಿ. ಷಹರು—ಪಟ್ಟಣ, ನಗರ. ಶೈಥಿಲ್ಯ—ಬಿಗಿಯಿಲ್ಲದ, ಸಡಿಲ. ಆಜಾನುಬಾಹು—ನಿಂತರೆ ಬಾಹು (ತೋಳು) ಮೊಣಕಾಲು ಮುಟ್ಟುವಷ್ಟು ಉದ್ದವುಳ್ಳವನು, ದೀರ್ಘದೇಹಿ. ನಗ್ನ—ಬೆತ್ತಲೆ. ಪಾಂಥ—ಪ್ರಯಾಣಿಕ. ಕರಾಳ—ಅಗಲ, ದೊಡ್ಡದು, ವಿಕಟ. ಜಂಪರ—ಜಂಪು, ನಿದ್ದೆಯಿಂದೆದ್ದಾಗ ಕಾಣುವ ತೂಕಡಿಕೆಯ ಪರಿಸ್ಥಿತಿ. ಕಂಚುಕ—ಕುಪ್ಪಸ, ರವಿಕೆ.

೨. **ಟಿಪ್ಪಣಿಗಳು :—**

ಮರ್ಯಾದೆ ರಾಮಣ್ಣ—ಸೊಗಸುಗಾರ ಪುಟ್ಟಶಾಮಿ ಎನ್ನುವ ಹಾಗೆ. ಕೆಲಸ ಮಾಡದೆ ಸೋಮಾರಿಯಾಗಿ ಷೋಕಿಮಾಡಿಕೊಂಡು ಹರಟೆ ಹೊಡೆಯುವವ.

ಇಲವಾಲ—ಹುಣಸೂರು ರಸ್ತೆಯಲ್ಲಿ ಮೈಸೂರಿಗೆ ಸುಮಾರು ಒಂಬತ್ತು ಮೈಲಿ ದೂರದಲ್ಲಿರುವ ಒಂದು ಹಳ್ಳಿ.

ಎಡತೊರೆ—ಮೈಸೂರು ಜಿಲ್ಲೆಯ, ಒಂದು ತಾಲ್ಲೂಕಿನ ಮುಖ್ಯಪಟ್ಟಣ. ಅದೀಗ ಕೃಷ್ಣರಾಜ ನಗರವಾಗಿದೆ.

ಯವನಯಾಮಿನೀ ಕಥೆ—ಅರೇಬಿಯಾದ ಕಲ್ಪನಾ ಕಥೆ. ಪಂಚತಂತ್ರದ ಕಥೆಗಳಂತಿರುವ ಸಾಹಸ ಜೀವನವನ್ನು ವರ್ಣಿಸುವ ಮತ್ತು ನೀತಿ ಉಪದೇಶಿಸುವ ಕಥೆಗಳು.

ಫೇರಿಕಥೆ—ಪ್ರಣಯ ಮತ್ತು ಸಾಹಸ ವರ್ಣನೆಯನ್ನೆ ಗುರಿಯಾಗುಳ್ಳ ಕಲ್ಪನಾಕಥೆ.

ರವಿವರ್ಮ—ರವಿವರ್ಮ ೧೮೪೮ರಲ್ಲಿ ತಿರುವಾಂಕೂರಿನ ರಾಜಮನೆತನದಲ್ಲಿ ಜನಿಸಿದ. ಪಾಶ್ಚಿಮಾತ್ಯ ರೀತಿಯ ಚಿತ್ರಕಲೆಯನ್ನು ಅಭ್ಯಾಸ ಮಾಡಿ ನೈಪುಣ್ಯವನ್ನು ಸಂಪಾದಿಸಿ ಆ ಕಾಲದ ಒಬ್ಬ ಶ್ರೇಷ್ಠ ಚಿತ್ರಗಾರನೆನಿಸಿಕೊಂಡ. ಅವನು ರಚಿಸಿದ ಅನೇಕ ಪೌರಾಣಿಕ ಮತ್ತು ಸಾಮಾಜಿಕ ಚಿತ್ರಗಳು ಮೈಸೂರಿನ ಜಗನ್ಮೋಹನ ಪ್ಯಾಲೇಸಿನ ಚಿತ್ರಶಾಲೆಯಲ್ಲಿ ಇವೆ. ಆತ ೧೯೦೬ರಲ್ಲಿ ಕಾಲವಶನಾದ.

೩. **ಈ ಕೆಳಗಣ ವಾಕ್ಯಗಳ ಸಂದರ್ಭವನ್ನೂ ಸ್ವಾರಸ್ಯವನ್ನೂ ವಿವರಿಸಿ :—**

೧. ನಲ್ಲನಿಲ್ಲದ ಸ್ತ್ರೀಯಂತೆ.
೨. ಗಾಡಿಯ ರಸ್ತೆಯಾಪರೋ ಉದಾರಿಗಳ ಮನಸ್ಸಿನಂತೆ ವಿಶಾಲವಾದದ್ದು.
೩. ಇವತ್ತಿದ್ದ ಹಂಗೆ ನಾಳೆ ಇದ್ದೇವಾ, ತಲೆ ನರತ ಮೇಲೇನೈತೆ ಖುಷಿ.
೪. ಈಗಿನ ಜೀವನವು ವಿಚಿತ್ರತರವಾದ ಆತುರದ ಜೀವನ.
೫. ಸಂತೋಷಕ್ಕೂ ಸೌಖ್ಯಕ್ಕೂ ಮನಸ್ಸೇ ಕಾರಣವಲ್ಲವೆ?

೪. ಪ್ರಶ್ನೆಗಳು :—

೧. ಗಾಡಿಯ ಪ್ರಯಾಣಕ್ಕೂ ರೈಲು ಪ್ರಯಾಣಕ್ಕೂ ಇರುವ ವ್ಯತ್ಯಾಸಗಳೇನು? ಅನುಕೂಲ ಅನಾನುಕೂಲಗಳೇನು?
೨. ನಿಮಗೆ ಗಾಡಿ ಪ್ರಯಾಣ ಇಷ್ಟವೋ, ರೈಲು ಪ್ರಯಾಣ ಇಷ್ಟವೋ–ಏಕೆ?
೩. ಈಗಿನ ಜೀವನಕ್ಕೂ ಹಿಂದಿನ ಜೀವನಕ್ಕೂ ಇರುವ ಸಾಮ್ಯವೈಷಮ್ಯಗಳೇನು?
೪. ದೆವ್ವಗಳ ಸ್ವರೂಪ ಸ್ವಭಾವಗಳನ್ನೂ ಅವುಗಳ ವರ್ತನೆಯನ್ನೂ ವಿವರಿಸಿ.
೫. ಗಾಡಿಯ ಪ್ರಯಾಣವನ್ನು ಕುರಿತ ನಿಮ್ಮ ಅನುಭವವನ್ನು ವಿವರಿಸಿ.

# ಗೌರಿಯ ಸಾವು

## ಎಂ. ವಿ. ಸೀತಾರಾಮಯ್ಯ

ಎಂ. ವಿ. ಸೀತಾರಾಮಯ್ಯನವರ ಜನ್ಮಸ್ಥಳ ಮೈಸೂರು. (ವಯಸ್ಸು ೪೪). ೧೯೩೩ರಲ್ಲಿ ಕನ್ನಡದಲ್ಲಿ ಎಂ. ಎ. ಡಿಗ್ರಿಯನ್ನು ಪಡೆದರು. ಲೇಖನಕಲೆ ಅವರ ಮುಖ್ಯವೃತ್ತಿ; ಸಂಗೀತ ಮತ್ತು ಚಿತ್ರಕಲೆಗಳಲ್ಲಿ ಅವರಿಗೆ ತುಂಬ ಆಸಕ್ತಿ. ಅವರ ಬರವಣಿಗೆ ಬಹುಮುಖವಾದುದು. 'ರಾಘವ' ಎಂಬ ಕಾವ್ಯನಾಮದಿಂದ ಹಲವಾರು ಕವಿತೆಗಳನ್ನು ಬರೆದಿದ್ದಾರೆ. ಅವರ ಸಣ್ಣ ಕಥೆಗಳೂ ಕಾದಂಬರಿಗಳೂ ಜನಪ್ರಿಯವಾಗಿವೆ. ನಾಟಕ, ಪ್ರಬಂಧ, ಸಾಹಿತ್ಯ ವಿಮರ್ಶೆಗಳಲ್ಲಿಯೂ ಹೆಸರು ಪಡೆದಿದ್ದಾರೆ. ಹಕ್ಕಿಹಾಡು, ಹೂವಾಡಿಗಿತ್ತಿ, ಅಶೋಕಚಕ್ರ (ಕವಿತೆ), ಶಿಲಾಮುಖ, ರತೀದೇವಿ (ಕಥೆ), ಭಾಗ್ಯಲಕ್ಷ್ಮಿ, ಮಾದನ ಮಗಳು, ಸೌಭಾಗ್ಯವತಿ (ಕಾದಂಬರಿ), ರಾಬಿನ್‌ಸನ್ ಕ್ರೂಸೊ (ಅನುವಾದ), ಹೂವಿನ ಆಸೆ, ಕವಿಯ ಹೆಂಡತಿ, ತೆರೆಮರೆಯ ಚಿತ್ರಗಳು (ನಾಟಕ), ಮುಗಿಲಗಳು (ಪ್ರಬಂಧ)—ಇವೇ ಮೊದಲಾಗಿ ಸುಮಾರು ಮೂವತ್ತು ಗ್ರಂಥಗಳನ್ನು ಬರೆದಿದ್ದಾರೆ.

ಸೀತಾರಾಮಯ್ಯನವರು ಬೇರೆ ಬೇರೆ ಕ್ಷೇತ್ರಗಳಲ್ಲಿಯೂ ಸಾಕಷ್ಟು ದುಡಿದಿದ್ದಾರೆ. ೧೯೩೪ರಿಂದ ೧೯೩೯ರ ವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿಯೂ, ೧೯೩೯ರಿಂದ ೧೯೪೬ರ ವರೆಗೆ ಮೈಸೂರು ವಿಶ್ವವಿದ್ಯಾನಿಲಯದ ಆಂಗ್ಲ-ಕನ್ನಡ ಕೋಶದ ಸಹಸಂಪಾದಕರಾಗಿಯೂ ಕೆಲಸಮಾಡಿದ್ದಾರೆ. ಈಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ (೧೯೪೬ರಿಂದ) ಕನ್ನಡ ಅಧ್ಯಾಪಕರಾಗಿದ್ದಾರೆ.

'ಗೌರಿಯ ಸಾವು' ಎಂಬ ಕಥೆಯನ್ನು "ಬಿಸಿಲು-ಬೆಳುದಿಂಗಳು" ಎಂಬ ಅವರ ಕಥಾಸಂಕಲನದಿಂದ ತೆಗೆದುಕೊಂಡಿದೆ.

"ಯಾಕೆ ಶಂಕರ, ಮಂಕಾಗಿ ಕುಳಿತಿದ್ದೀಯಲ್ಲ ?"

ಹೌದು, ಮಂಕಾಗಿಯೇ ಕುಳಿತಿದ್ದೆ.

"ಯಾಕೆ, ಏನು ಸಮಾಚಾರ ?"

ಏನೆಂದು ಹೇಳಲಿ ನಾನು ?

"ಮೌನ ಯಾಕೆ ? ನನ್ನ ಕೂಡ ಹೇಳಬಾರದ್ದಾದರೂ ಏನು ?"

ಹೌದು; ಮೌನವಾಗಿಯೇ ಇದ್ದೆ. ನನ್ನ ಒಲವಿನ ಗೆಳೆಯನ ಕೂಡ ಬಾಯಿ ಬಿಡಲಾರದವನಾಗಿದ್ದೆ.

"ಮೌನ ಯಾಕೆ ?" ಎಂದು ಕೇಳಿದಾಗ ಮೌನವಾಗಿಯೇ ಇದ್ದರೆ ಅದು ಉತ್ತರವಾದೀತೆ ? ಮೌನದಿಂದಲೇ ಮನಸ್ಸಿನ ಇಂಗಿತವನ್ನು ತಿಳಿಸಬೇಕಾದ ಸಂದರ್ಭಗಳೂ ಉಂಟು. ಆದರೆ, ಈ ಸಂದರ್ಭ ಅಂಥದಾಗಿರಲಿಲ್ಲ. "ಮೌನ ಯಾಕೆ? ನನ್ನ ಸಂಗಡ ಹೇಳು ಶಂಕರ" ಎಂದು ನನ್ನ ಗೆಳೆಯ ತುಂಬೊಲವಿನಿಂದ ಮತ್ತೆ ಕೇಳಿದಾಗ ಸುಮ್ಮನೆ ಇರುವುದಾದರೂ ಹೇಗೆ? ಆಗತಾನೆ ಬಂದಿದ್ದ ಟೆಲಿಗ್ರಾಮನ್ನು (ತಂತಿ ಸಮಾಚಾರವನ್ನು) ಜೇಬಿನಿಂದ ತೆಗೆದು ಅವನ ಕೈಗೆ ಕೊಟ್ಟೆ, ಅಷ್ಟೆ. ಆದರೆ, ಇನ್ನೂ ಮೌನವಾಗಿದ್ದೆ. ಏಕೆಂದರೆ, ಬಾಯಿ ಬಿಡಲಾರದವನಾಗಿದ್ದೆ.

ನನ್ನ ಗೆಳೆಯ ಟೆಲಿಗ್ರಾಂ ಓದಿಕೊಂಡ ಕೂಡಲೆ ನನ್ನ ಕಡೆ ತಿರುಗಿ ನೋಡಿದ. ನನ್ನ ಕೆನ್ನೆ ಒದ್ದೆಯಾಗಿದ್ದುದನ್ನು ಕಂಡು, "ನೋಡು, ಇಷ್ಟಕ್ಕೆಲ್ಲ ಹಾಗೆ ಕಣ್ಣೀರು ಹಾಕಬಾರದು. ನಿಮ್ಮ ಗೌರಿ ಸತ್ತದ್ದೇನೋ ಬಹಳ ವ್ಯಸನಕರ. ತಂಗಿ ಸತ್ತರೆ ವ್ಯಸನಪಡಬೇಕಾದ್ದು ಸಹಜ. ಆದರೆ ಹೀಗೆ ಕಣ್ಣೀರು ಹಾಕುತ್ತ ಮಂಕಾಗಿ ಕುಳಿತುಬಿಡಬಾರದು. ಮುಂದಿನ ಕೆಲಸ ಏನು ಅಂತ ಆಲೋಚನೆ ಮಾಡಬೇಕು. ಸಾವು ಯಾರಿಗೂ ತಪ್ಪಿದ್ದಲ್ಲ. ನೀನು ಧೈರ್ಯ ತಂದುಕೊಂಡು, ನಿಮ್ಮ ತಂದೆತಾಯಿಗಳಿಗೂ ಸಮಾಧಾನ ಹೇಳಬೇಕು. 'ಕೂಡಲೆ ಹೊರಟು ಬಾ' ಅಂತ ನಿಮ್ಮ ತಂದೆ ತಂತಿ ಕೊಟ್ಟಿದ್ದಾರೆ. ಮೊದಲು ಹೊರಡು. ನೀನು ಹೀಗೆ ತಲೆಯಮೇಲೆ ಕೈಯಿಟ್ಟುಕೊಂಡು ಕುಳಿತಿದ್ದರೆ ರೈಲಿಗೆ ಹೊತ್ತಾಗುತ್ತೆ. ಕಡೆಯ ಗಂಟೆಯ ಪಾಠ ಹೋದರೆ ಹೋಯಿತು. ಸದ್ಯಕ್ಕೆ ಒಂದೆರಡು ದಿನಕ್ಕೆ ರಜದ ಚೀಟಿ ಬರೆದುಕೊಟ್ಟು ಹೋಗು. ಇನ್ನೂ ಕೆಲವು ದಿನ ಉಳಿದುಕೊಳ್ಳಬೇಕಾದರೆ ಮೈಸೂರಿನಿಂದಲೇ ಹೆಚ್ಚಿನ ರಜಕ್ಕೆ ಕಾಗದ ಬರೆದು ಹಾಕುವೆಯಂತೆ . . . ." ಎಂದು ಮುಂತಾಗಿ ಸಮಾಧಾನ ಸಲಹೆಗಳನ್ನು ಕೊಟ್ಟು, ನನ್ನ ಕೆಲವು ಬಟ್ಟೆ ಬರೆಗಳನ್ನು ಒಂದು ಕೈಚೀಲಕ್ಕೆ ತುರುಕಿ, ನನ್ನ ಕೈಗೆ ಕೊಟ್ಟ. ಎಷ್ಟು ಬೇಡವೆಂದರೂ, ತಾನು ಕಡೆಯ ಗಂಟೆಯ ಪಾಠಕ್ಕೆ 'ಚಕ್ಕರ್ ಹೊಡೆದು', ನನ್ನೊಡನೆ ರೈಲ್ವೆ ಸ್ಟೇಷನ್ನಿಗೂ ಬಂದ. ಸ್ಟೇಷನ್ನಿನ ದಾರಿಯುದ್ದಕ್ಕೂ ನಾನು ಮೌನವಾಗಿಯೇ ಇದ್ದೆ. ಏಕೆಂದರೆ, ಅವನೊಡನೆ ಬಾಯಿ ಬಿಡಲಾರದವನಾಗಿದ್ದೆ. ದುಃಖದ ಉದ್ವೇಗ, ವಿವೇಚನಾ ಶೂನ್ಯತೆ ಇವುಗಳಿಂದಾಗಿ ನನ್ನ ಬಾಯಿ ಕಟ್ಟಿಹೋಗಿತ್ತು.

೩

ಮೈಸೂರಿನಲ್ಲಿ ಮನೆಯಲ್ಲಿ ಎಲ್ಲರೂ ನನ್ನ ಬರವನ್ನು ನಿರೀಕ್ಷಿಸಿ ಕೊಂಡಿದ್ದರು. ಗಾಡಿಯಿಂದ ಇಳಿದವನೇ ನೇರವಾಗಿ ಅಂಗಳದೊಳಕ್ಕೆ ಹಾರಿಹೋದೆ. ಗಾಡಿ ನಿಂತ ಸದ್ದು ಕೇಳಿ ಅಕ್ಕಪಕ್ಕದ ಮನೆಯವರು ಹೊರಕ್ಕೆ ಬಂದರು. "ಅಯ್ಯೋ ಪಾಪ! ಗೌರಿಯನ್ನು ನೋಡುವುದಕ್ಕೆ ಬೆಂಗಳೂರಿನಿಂದ ಬಂದಿದ್ದಾನೆ!"—"ಟೆಲಿಗ್ರಾಂ ಕೊಟ್ಟಿದ್ದರಂತೆ ಪಾಪ. ಬಹು ಗಾಬರಿಯಾಗಿ ಓಡಿಬಂದಿರಬೇಕು. ಇದಕ್ಕೆಲ್ಲ ಟೆಲಿಗ್ರಾಂ ಕೊಡಲೇಬಾರದು" —"ಗೌರಿಯಲ್ಲಿ ಅವನಿಟ್ಟಿದ್ದ ಪ್ರೀತಿ ಹಾಗಿದೆ ಅಂದ್ರೆ. ಇಂಥ ಪ್ರೀತಿ ಲೋಕಕ್ಕೇ ಅತಿಶಯವಾದದ್ದು"—"ಅವನ ತಂದೆ ತಾಯಿ ಇದನ್ನ ಅರಿತು ಕೊಂಡಿದ್ದಾರಲ್ಲ, ಅದು ದೊಡ್ಡ ವಿಷಯ"—"ಪಾಪ, ಅವರುಗಳಿಗಿಂತಲೂ ಇವನ ದುಃಖ ಹೆಚ್ಚು"—ಎಂದು ಮುಂತಾಗಿ ನನ್ನೊಡನೆಯೇ ನಮ್ಮ ಮನೆಯೊಳಕ್ಕೆ ಹಿಂಬಾಲಿಸಿ ಬಂದ ಕೆಲವರ ಉದ್ಗಾರ ಕೇಳಿ ನನ್ನ ಹೊಟ್ಟೆಯ ದುಃಖ ತಡೆದುಕೊಳ್ಳದ್ದಾಯಿತು. ಸಹಾನುಭೂತಿಯ ಮಾತುಗಳು ಯಾವಾಗಲೂ ದುಃಖವನ್ನು ಹೆಚ್ಚಿಸುತ್ತವೆಯೇ ಹೊರತು ತಗ್ಗಿಸುವುದಿಲ್ಲ. ದುಃಖ ತಡೆಯದ್ದಾಗಲು, ಅಂಗಳದಲ್ಲಿ ನುಗ್ಗಿ ಹೋಗಿ, ಮಾವಿನ ಮರದ ಕೆಳಗೆ ಹಾಕಿದ್ದ ತೆಂಗಿನ ಸೋಗೆಯ ಚಪ್ಪರದಡಿಯಲ್ಲಿ ಮಲಗಿಸಿದ್ದ ಗೌರಿಯ ಕಳೇಬರದ ಮೇಲೆ ಬಿದ್ದು, ಅವಳನ್ನು ತಬ್ಬಿಕೊಂಡು, ಮಗುವಿನಂತೆ ರೋದಿಸ ತೊಡಗಿದೆ. ಕಡೆಗೆ ನಮ್ಮ ತಂದೆ ತಾಯೇ ನನ್ನನ್ನು ಸಮಾಧಾನಮಾಡ ಬೇಕಾಯಿತು.

* * * *

ನನ್ನೊಡನೆ ಬಂದಿದ್ದವರೆಲ್ಲ ಅವರವರ ಮನೆಗಳಿಗೆ ತೆರಳಿದರು. ಮನೆಯವರೆಲ್ಲರೂ ಎಷ್ಟು ಹೇಳಿದರೂ ಕೇಳದೆ, ಗೌರಿಯ ಪಕ್ಕದಲ್ಲಿಯೇ ಒಂದು 'ಸ್ಟೂಲು' ಹಾಕಿಕೊಂಡು ಅವಳನ್ನು ಒಂದೇ ಸಮನೆ ನೋಡುತ್ತ ಕುಳಿತಿದ್ದೆ. ಊಟಕ್ಕೆ ಏಳುವಂತೆ ಸೋದರತ್ತೆ ಎಷ್ಟೋ ಬಲವಂತ ಮಾಡಿದರು. ನಾನು ಕೇಳಲಿಲ್ಲ. ಹಟ ಹಿಡಿದು, ಮೌನವಾಗಿ, ಕಲ್ಲು ಬೊಂಬೆಯ ಹಾಗೆ ಕುಳಿತಿದ್ದೆ. "ಶಂಕರ ಯಾವಾಗಲೂ ಹೀಗೆಯೇ; ವಿಚಿತ್ರದ ಹುಡುಗ. ಇಷ್ಟರಮೇಲೆ ಗೌರಿ ಅವನಿಗೆ ಪ್ರಾಣ. ನೀವೆಲ್ಲಾ ಊಟಕ್ಕೇಳಿ. ಆಮೇಲೆ ಅವನನ್ನು ನಾನು ಎಬ್ಬಿಸಿಕೊಂಡು ಬರುತ್ತೇನೆ" ಎಂದು ನಮ್ಮ ಸೋದರತ್ತೆ ಎಲ್ಲರನ್ನೂ ಊಟಕ್ಕೆ ಎಬ್ಬಿಸಿಕೊಂಡು ಹೋದರು.

ನಾನು ಒಬ್ಬನೇ ಮೌನವಾಗಿ ಗೌರಿಯನ್ನು ನೋಡುತ್ತ ಕುಳಿತಿದ್ದೆ. ಹುಣ್ಣಿಮೆಯ ಮುನ್ನಿನ ದಿನ. ಬೆಳುದಿಂಗಳು ಮೂಡಲ ಕಡೆಯಿಂದ ಚಪ್ಪರದೊಳಕ್ಕೆ ತೂರಿಬರುತ್ತಿತ್ತು. ಬೆಳುದಿಂಗಳ ತಣ್ ಬೆಳಕಿನಲ್ಲಿ ಗೌರಿ ಶಾಂತವಾಗಿ ನಿದ್ರಿಸುತ್ತಿದ್ದಳು. ಹೆಸರಿಗೆ ತಕ್ಕ ಹಾಗೆ ಗೌರಿ ಅಚ್ಚ ಬಿಳಿಯ ಬಣ್ಣ. ಮೇಲೆ ಬೆಳುದಿಂಗಳ ನವಿರು ಅರಿವೆ ಹೊದಿಸಿದಂತಿತ್ತು. ನಮ್ಮ ತಾಯಿ ಯಾವುದನ್ನೂ ಮರೆತಿರಲಿಲ್ಲ. ಹಣೆಯ ತುಂಬ ಕುಂಕುಮ ಹಚ್ಚಿದ್ದರು; ಕಪೋಲಗಳ ತುಂಬ ಅರಿಸಿನ ತೊಡೆದಿದ್ದರು. ಅರಿಸಿನ ಸೇವಂತಿಗೆಯ ದಂಡೆಯನ್ನು ತಲೆಯಮೇಲೆ, ಕೊರಳಮೇಲೆ, ಸೂಡಿದ್ದರು. ನನಗೆ ಗೌರಿ ಸತ್ತಂತೆಯೇ ಕಾಣುತ್ತಿರಲಿಲ್ಲ. ಖಂಡಿತವಾಗಿಯೂ ಮಲಗಿ ನಿದ್ದೆ ಹೋಗುತ್ತಿದ್ದಾಳೆಯೋ ಎಂದು ಅನ್ನಿಸುತ್ತಿತ್ತು. ಈ ಭಾವದ ಜೊತೆಗೆ ಬೆಳುದಿಂಗಳ ಶಾಮಕ ಪ್ರಭಾವ, ತಂಗಾಳಿಯ ಹಿತಕಾರಕ ಸ್ಪರ್ಶ,—ಇವೂ ಕೂಡಿ, ನನ್ನ ಮನಸ್ಸನ್ನು ತುಸ ಶಾಂತತೆಯ ಕಡೆಗೆ ಸೆಳೆದಿದ್ದುವು. ಆಗತಾನೆ ಅರಳುತ್ತಿದ್ದ ಜಾಜಿಯ ಸೌರಭವನ್ನು ಮಂದಮಾರುತ ಮೈಗೆಲ್ಲಾ ಪೂಸಿಕೊಂಡು ಅಲ್ಲಲ್ಲಿ ಸುಳಿದಾಡುತ್ತಿದ್ದ. ಆ ಜಾಜಿಯ ಗಿಡವಾದರೂ ನಾನು ನಟ್ಟು ಬೆಳಸಿ ಹಬ್ಬಿಸಿದ್ದು. ಅದರ ಹೂಗಳೂ ಎಷ್ಟೋ ವೇಳೆ ಗೌರಿಯ ತಲೆಯನ್ನು ಅಲಂಕರಿಸಿದ್ದುವು. ನಾನು ಬೆಳಸಿದ ಜಾಜಿಯ ಹೂಗಳ ಸೌರಭವನ್ನು ನನ್ನ ಕಡೆಯ ಕಾಣಿಕೆಯಾಗಿ ಗೌರಿಗೊಪ್ಪಿಸಲೋಸುಗವೋ ಎಂಬಂತೆ ಆ ಮಂದಮಾರುತ ಚಪ್ಪರದೊಳಕ್ಕೆ ಮೆಲ್ಲನೆ ನಡೆದು ಬಂದು ನಿಂತಾಗ, ಗೌರಿ ಆ ಸೌರಭವನ್ನು ಸ್ವೀಕರಿಸಲಾರಳು ಎಂದು ಮನವರಿಕೆಯಾಗಿ, ಎದ್ದುಹೋಗಿ, ಜಾಜಿಯ ನಸುಬಿರಿದ, ಕಂಪುಗೂಡಿದ ಹೂಗಳನ್ನೇ ಬೊಗಸೆ ತುಂಬ ಕೊಯ್ದು ತಂದು, ಬಾಷ್ಪಾಂಜಲಿಯ ಜೊತೆಗೆ ಪುಷ್ಪಾಂಜಲಿಯನ್ನೂ ಗೌರಿಗೆ ನನ್ನ ಕಡೆಯ ಕಾಣಿಕೆಯಾಗಿ ಅರ್ಪಿಸಿದೆ.

*   *   *   *

ಮಾರನೆಯ ಬೆಳಗ್ಗೆ ಗೌರಿ ಎಲ್ಲಿಗೆ ಹೋಗಬೇಕೋ ಅಲ್ಲಿಗೆ ಅವಳನ್ನು ಕಳಿಸಿದ್ದಾಯಿತು—ಅವಳು ಮಣ್ಣುಪಾಲಾದಳು. ಹುಟ್ಟಿದ ಮೇಲೆ ಎಲ್ಲರೂ ಒಂದು ದಿನ ಮಣ್ಣಿನೊಡನೆ ಮಣ್ಣಾಗಿ ಬೆರೆಯಬೇಕೆಂಬ ಘನ ತತ್ತ್ವವನ್ನು ಕೇಳಿದ್ದೆನಾದರೂ ಗೌರಿಯನ್ನು ಕುಳಿಯಲ್ಲಿ ಹುಗಿದು ಮೇಲೆ ಮಣ್ಣು ಮುಚ್ಚುವಾಗ ಆ ತತ್ತ್ವದ ನೆನಪಿನಿಂದ ನನಗೆ ಸ್ವಲ್ಪವೂ ಸಮಾಧಾನವಾಗಲಿಲ್ಲ. ನಾನಂತೂ ಹುಡುಗ; ಕೋಪ, ದುಃಖ, ಮೊದಲಾದ ಮೂಲ ರಾಗಭಾವಗಳ ಉದ್ರೇಕಕ್ಕೆ ಸುಲಭವಾಗಿ ಪಕ್ಕಾಗತಕ್ಕವನು. ನಮ್ಮ ತಂದೆ

ಐವತ್ತನ್ನು ದಾಟಿದ್ದರು. ಸಂಸಾರದಲ್ಲಿ ಕಷ್ಟಸುಖ ಕಂಡವರು, ಉಂಡವರು; ಮನಸ್ಸು ಮಾಗಿತ್ತು, ಹೃದಯ ಹಣ್ಣಾಗಿತ್ತು. ಅವರು ಒಂದು ಹಿಡಿ ಮಣ್ಣು ಹಿಡಿದು ಗೌರಿಯ ಮೇಲೆ ಹಾಕಲು ಹೋದಾಗ ಅವರ ಕೈ ನಡುಗುತ್ತಿತ್ತು; ಕಣ್ಣಿನಿಂದ ನೀರು ಹನಿಯುತ್ತಿತ್ತು. "ಪಾರ್ವತಿ ಹೋದಾಗ ನನಗೆ ಇಷ್ಟು ದುಃಖವಾಗಿರಲಿಲ್ಲ" ಎಂದು ಬಗಿದ ಕೊರಲಲ್ಲಿ ನುಡಿದು ಮಣ್ಣು ಉದುರಿಸಿದರು. ಇನ್ನು ನನ್ನ ಪಾಡು ಕೇಳಬೇಕೆ?

ಗೌರಿಯನ್ನು ಮಣ್ಣು ಮಾಡಿದ ಸ್ಥಳ ನೋಡಿಕೊಂಡು ಬರಲು ಮಾರನೆಯ ದಿನ ಬೆಳಗ್ಗೆ ಹೋಗಿದ್ದೆ. ತಂದೆಯೂ ಸಂಗಡ ಬಂದಿದ್ದರು. ಮಣ್ಣುಮಾಡಿದ ಸ್ಥಳ ಊರಾಚೆ ಒಳ್ಳೆಯ ಎತ್ತರದ ಸ್ಥಳದಲ್ಲಿತ್ತು. ಅಲ್ಲಿ ಸುತ್ತಮುತ್ತ ಹಸರು ಚೆನ್ನಾಗಿದ್ದುದರಿಂದ ಅದನ್ನು ಗೋವಳಿಗರು ದನದ ಕಾವಲಾಗಿ ಉಪಯೋಗಿಸುತ್ತಿದ್ದರು. ಗೌರಿಯನ್ನು ಹುಗಿದಿದ್ದ ಎಡೆ ತಿಟ್ಟಿನಲ್ಲಿ ಇದ್ದುದರಿಂದ ದನಕಾಯುವವನು ತನ್ನ ಸುತ್ತ ಕಣ್ಣಿಟ್ಟು ಕುಳಿತಿರಲು ಅದು ಒಳ್ಳೆಯ ಪ್ರಶಸ್ತ ಸ್ಥಳವಾಗಿತ್ತು. ಸುತ್ತಮುತ್ತ ನೆರಳಿಗೆ ಹುಣಿಸೆ, ಬೇವು, ಅರಳಿ, ಬಸಿರಿ ಮೊದಲಾದ ಮರಗಳು ಅಲ್ಲೊಂದು ಇಲ್ಲೊಂದು ಇದ್ದುವು. ಆದರೆ ಆ ಬೋರೆಯ ಮೇಲೆ ತಂಪು ಕೊಡಲು ಯಾವ ಗಿಡ ಮರಗಳೂ ಇರಲಿಲ್ಲ. ಅಲ್ಲಿ ಒಂದು ಹೊಂಗೆಯ ಸಸಿ ಹಾಕಿಸುವಂತೆ ನಮ್ಮ ತಂದೆಗೆ ಸೂಚನೆ ಕೊಟ್ಟೆ; ಚಿಕ್ಕಂದಿನಿಂದ ಹೊಂಗೆಯ ಮರ ಎಂದರೆ ಅಷ್ಟು ಪ್ರೀತಿ. ದುಃಖದಲ್ಲಿ ಕೂಡ ಅವರು ನಕ್ಕರು. ನಾನು ನನ್ನ ಇಂಗಿತವನ್ನು ಸ್ಪಷ್ಟಪಡಿಸಿದ ಮೇಲೆ ನನ್ನ ಸೂಚನೆ ಅವರ ಮನಸ್ಸಿಗೆ ಹಿಡಿಯಿತು. ಆ ಕೂಡಲೆಯೇ ಜೊತೆಯಲ್ಲಿದ್ದ ಆಳು ಸಿದ್ದನಿಗೆ ಅಪ್ಪಣೆಮಾಡಿದರು. ಮಾರನೆಯ ದಿನ ಮಾಡಬೇಕಾಗಿದ್ದ ಕೆಲಸವನ್ನು ೧೫–೨೦ ನಿಮಿಷಗಳೊಳಗಾಗಿ ಸಿದ್ದ ನಮ್ಮ ಕಣ್ಣೆದುರಿಗೆಯೇ ನೆರವೇರಿಸಿಬಿಟ್ಟ; ಎಲ್ಲೋ ಹೋಗಿ ಹೊಂಗೆಯ ಸಸಿಯೊಂದನ್ನು ತಂದು ನಟ್ಟುಬಿಟ್ಟ. ಹತ್ತಿರದಲ್ಲಿ ಇದ್ದ ಒಂದು ತೋಟಕ್ಕೆ ಹೋಗಿ, ಅಲ್ಲಿಯ ಬಾವಿಯಲ್ಲಿ ತನ್ನ ಬಟ್ಟೆಗಳನ್ನು ತೋಯಿಸಿ ತಂದು, ಅವುಗಳನ್ನು ಹಿಂಡಿ, ನಟ್ಟ ಗಿಡಕ್ಕೆ ನೀರೆರೆದ; ಗಿಡಕ್ಕೆ ಹೊಯ್ನೀರು ಬೇಕಾಗದಿರುವವುಟ್ಟಿಗೆ ಅದು ಬೆಳೆಯುವವರೆಗೂ ಅದಕ್ಕೆ ತಾನು ನಿತ್ಯವೂ ನೀರೆರೆಯುವ ಹೊಣೆ ಹೊತ್ತುಕೊಂಡ. ಇಲ್ಲಿಗೆ ನನಗೆ ಕೊಂಚ ಸಮಾಧಾನವಾಯಿತು. ನಮಗೆಲ್ಲಾ ತಂಪು ಕರೆದ ಗೌರಿ ಇನ್ನು ಮುಂದೆ ಆ ಹೊಂಗೆಯ ಗಿಡದ ಜೀವದಲ್ಲಿ ಬೆರೆತು ದನಗಳಿಗೂ ದನಕಾಯುವವರಿಗೂ ತಂಪೆರೆಯುವಳೆಂದು ನನಗೆ ಸಮಾಧಾನವಾಯಿತು.

೩

ಪರೀಕ್ಷೆ ಸಮೀಪಿಸುತ್ತಿದ್ದುದರಿಂದ, ಹೆಚ್ಚು ದಿನ ನನ್ನ ಊರಿನಲ್ಲೇ ಉಳಿಯಲಾಗಲಿಲ್ಲ. ಇದ್ದ ಮೂರು ದಿನವೂ ಮನೆಯಲ್ಲಿ ಗೌರಿಯ ವಿಷಯವಾದ ಮಾತುಕತೆಯಲ್ಲಿ ಕಳೆಯಿತು. ಬೆಂಗಳೂರಿಗೆ ಹಿಂದಿರುಗಿ ಹೋದ ಕೂಡಲೆ, ನನ್ನನ್ನು ಕಂಡು ನನ್ನ ಗೆಳೆಯ ಅತ್ಯಂತ ಆದರದಿಂದಲೂ ಮರುಕದಿಂದಲೂ ಕಂಡುಕೊಂಡ. ರಾತ್ರಿ ಊಟವಾಗಿ ದೀಪ ಆರಿಸಿ ಮಲಗಿಕೊಂಡಾಗ ನಮ್ಮ ಗೃಹಕೃತ್ಯದ ವಿಚಾರ, ಮುಖ್ಯವಾಗಿ ಆಗತಾನೆ ನಮ್ಮನ್ನು ಅಗಲಿಹೋಗಿದ್ದ ಗೌರಿಯ ವಿಚಾರ, ಕುರಿತು ಬಹು ಸಂಕೋಚದಿಂದ ಕೇಳಿದ. ನನಗೂ ನನ್ನ ಗೆಳೆಯನಿಗೂ ಇನ್ನೂ ಐದಾರು ತಿಂಗಳ ಪರಿಚಯ ಮಾತ್ರವಾಗಿದ್ದರೂ ನಮ್ಮಿಬ್ಬರಲ್ಲೂ ಆಗಲೇ ತುಂಬ ಸಲಿಗೆ ಬೆಳೆದು ಬಂದಿತ್ತು. ಆದರೂ ಕೂಡ, ಅವನ ಮನೆಯವರ ವಿಚಾರ ನಾನಾಗಲಿ ನನ್ನ ಮನೆಯವರ ವಿಚಾರವನ್ನು ಅವನಾಗಲಿ ಕೇಳಿರಲಿಲ್ಲ; ಕೇಳಿ ತಿಳಿದುಕೊಳ್ಳಬೇಕೆಂಬ ಚಪಲವೂ ಹುಟ್ಟಿರಲಿಲ್ಲ; ತಿಳಿದುಕೊಳ್ಳುವ ಸಂದರ್ಭವೂ ಒದಗಿರಲಿಲ್ಲ. ಈಗ ಒಂದು ಸಂದರ್ಭ ಬಂದದ್ದರಿಂದ ನನ್ನ ಗೆಳೆಯ ಕೇಳಿದ. ವಿಶ್ವಾಸದಿಂದ ಕೇಳಿದ ಗೆಳೆಯನ ಇಚ್ಛೆಯನ್ನು ಹೇಗೆ ಸಲ್ಲಿಸದೆ ಇರಲಾದೀತು? ನಾನು ಅವನಿಗೆ ಹೇಳಿದೆ: ನಮ್ಮ ಮನೆಯವರೆಲ್ಲರ ಪರಿಚಯವನ್ನು ಎಷ್ಟು ಸೂಕ್ಷ್ಮದಲ್ಲಿ ಮಾಡಿಕೊಡಬಹುದೋ ಅಷ್ಟುಮಟ್ಟಿಗೆ ಮಾಡಿಕೊಟ್ಟೆ.

"ಅಲ್ಲ, ಎಲ್ಲರ ವಿಚಾರವನ್ನೂ ಹೇಳಿ ಗೌರಿಯ ವಿಚಾರವನ್ನೇ ಬಿಟ್ಟು ಬಿಟ್ಟೆಯಲ್ಲ?" ಎಂದು ನನ್ನ ಗೆಳೆಯ ಕುತೂಹಲದಿಂದ ಪ್ರಶ್ನಿಸಿದ.

"ಅವಳ ಕತೆ ಮುಗಿಯಿತು. ಇನ್ನು ಅವಳ ವಿಚಾರ ಕಟ್ಟಿಕೊಂಡೇನು?"

"ಶಂಕರ, ಏನೂ ತಿಳಿದುಕೊಳ್ಳಬೇಡ. ನನ್ನ ಪ್ರಶ್ನೆಯಿಂದ ನಿನಗೆ ಇಷ್ಟೊಂದು ದುಃಖ ಉಕ್ಕಿ ಬರುತ್ತೆ ಎಂದು ನನಗೆ ತೋಚಿದ್ದರೆ ನಾನು ಆ ಪ್ರಶ್ನೆ ಹಾಕುತ್ತಿರಲಿಲ್ಲ. ನೀನು ಹೇಳದೆ ಇದ್ದರೂ ಚಿಂತೆಯಿಲ್ಲ. ಆದರೆ ಇನ್ನು ಹೆಚ್ಚು ದುಃಖಿಸಬೇಡ. ನಿನ್ನ ಮೌನವೇ ಗೌರಿಯ ಕತೆ ಹೇಳುತ್ತಿದೆ. ಅಷ್ಟರಿಂದಲೇ ನನಗೆ ತೃಪ್ತಿಯಾಗಿದೆ."

ಗೆಳೆಯನ ಸಮಾಧಾನದ ಮಾತುಗಳಿಂದ ನನ್ನ ದುಃಖ ಮರುಕೊಳಿಸಿಕೊಂಡಿತು. ಆದರೆ, ಇಷ್ಟು ಸಹಾನುಭೂತಿ ತೋರುವ ಗೆಳೆಯನಿಗೆ ಏನನ್ನಾದರೂ ಮರೆಮಾಚುವುದಾದರೂ ಹೇಗೆ? ಹೇಳಿಬಿಡುವುದೆಂದು ಬಾಯಿಬಿಟ್ಟೆ:

"ನನಗೆ ದುಃಖವೇನೋ ದುಃಖವೇ. ಅಷ್ಟು ದುಃಖವಿರುವುದರಿಂದಲೇ ನಾನು ಹೇಳುವುದು ನಗೆಗೀಡಾಗುವುದೆಂದು ಹೇಳದೆ ಸುಮ್ಮನಾದೆ. ಊರಿಗೆ ಹೊರಡುವ ಮುನ್ನವೂ ಹೇಳಲಿಲ್ಲ, ಈಗಲೂ ಹೇಳಲಿಲ್ಲ."

"ದುಃಖದ ವಿಚಾರ ಕೇಳಿ ಯಾರಾದರೂ ನಗುವುದುಂಟೆ?"

"ದುಃಖದ ವಿಚಾರಕ್ಕಲ್ಲ, ನನ್ನ ವಿಚಾರಕ್ಕೆ."

"ನಿನ್ನ ವಿಚಾರಕ್ಕೆ ನಗಬೇಕೇಕೆ? ಅಕ್ಕನೋ ತಂಗಿಯೋ ಸತ್ತರೆ ಒಡಹುಟ್ಟಿದವನು ಹೋಗಬೇಕಾದ್ದು ಲೋಕರೂಢಿಯಲ್ಲವೆ?"

"ಆದರೆ.... ಅಕ್ಕನೂ ಅಲ್ಲ, ತಂಗಿಯೂ ಅಲ್ಲ...."

"ಹಾಗಾದರೆ ಯಾರು?"

"ಹೇಳಿದರೆ ನಗುವುದಿಲ್ಲ ತಾನೆ?"

"ಇಲ್ಲ; ಖಂಡಿತ ಇಲ್ಲ."

"ನಮ್ಮ ಮನೆಯ ಹಸು—ಗೌರಿ."

ಗೆಳೆಯನ ಮುಖದ ಮೇಲೆ ಅಚ್ಚರಿಯ ಮುದ್ರೆ ಅಚ್ಚೊತ್ತಿತ್ತೆ ಹೊರತು, ನಗೆಯ ಚಿಹ್ನೆ ಕೂಡ ಇರಲಿಲ್ಲ. ಯಾರಾದರೂ ನಗಬಹುದಾಗಿದ್ದ ನನ್ನ ವಿಚಿತ್ರ ವರ್ತನೆ ಕೇಳಿ ನಗದೆ ಇದ್ದು, ಕುತೂಹಲದಿಂದ ಕಣ್ಣರಳಿಸಿ ಕುಳಿತಿದ್ದ ನನ್ನ ಗೆಳೆಯನಿಗೆ ನಮ್ಮ ಮನೆಯ ಮುದ್ದು ಗೌರಿಯ ವಿಚಾರ ಹೇಳಿದೆ:

"ನಮ್ಮ ಗೌರಿ ನಮ್ಮ ಮನೆಯಲ್ಲಿಯೇ ಹುಟ್ಟಿದ್ದು. ಆಗತಾನೆ ನಾನು ಮಿಡ್ಲ್ ಸ್ಕೂಲಿಗೆ ಕಾಲಿಟ್ಟಿದ್ದೆ. ಗೌರಿಯ ತಾಯಿ ಗಂಗೆ ಗಬ್ಬವಾಗಿದ್ದಾಗ ಮದುವೆಗೆ ನೆರೆದಿದ್ದ ನನ್ನ ಅಕ್ಕ ಪಾರ್ವತಿ ತೀರಿಕೊಂಡಳು. ಅವಳು ತೀರಿಕೊಂಡ ಒಂದು ತಿಂಗಳಿಗೆ ಗಂಗೆ ಹೆಂಗರು ಈದಳು. ಕರುವಿಗೆ ಪಾರ್ವತಿ ಎಂದೇ ಹೆಸರಿಡಬೇಕೆಂದು ನಮ್ಮ ತಂದೆಯ ಬಯಕೆ. ನಮ್ಮ ತಾಯಿಗೆ ಅದು ಆಗದು. ಮುದ್ದು ಮಗಳ ನೆನಪು ನಿತ್ಯವೂ ಬರುವುದನ್ನು ಸಹಿಸಲಾರದವರಾಗಿದ್ದರು ನಮ್ಮ ತಾಯಿ. ಆದ್ದರಿಂದ ಕರುವಿಗೆ 'ಗೌರಿ' ಎಂದು ಹೆಸರಿಡಲಾಯಿತು. ಕರು ಮೂರು ತಿಂಗಳಾಗಿದ್ದಾಗ ಗಂಗೆ ಏನೋ ರೋಗ ಬಂದು ತೀರಿಕೊಂಡಳು. ಸತ್ತ ಗಂಗೆಯನ್ನು ನಮ್ಮ ಮನೆಗೆ ಬರುತ್ತಿದ್ದ ಝಾಡಮಾಲಿ ಹೊತ್ತುಕೊಂಡು ಹೋದದ್ದು ನನಗೆ ಚೆನ್ನಾಗಿ ನೆನಪಿದೆ. ಕರುವನ್ನು ನಮ್ಮ ತಂದೆ ತಾಯಿ ಮಗು ಸಾಕುವಂತೆ ಸಾಕಿಕೊಂಡು ಬಂದರು. ನಮ್ಮ ತಂದೆ ಒಳ್ಳೆಯ ನೊರೆಹಾಲು ಕೊಂಡು ತಂದು ಅದಕ್ಕೆ ಗೊಟ್ಟದಲ್ಲಿ ಕುಡಿಸುತ್ತಿದ್ದರು; ನಮ್ಮ ತಾಯಿ ನಾಲ್ಕು ಐದು ದಿನಕ್ಕೆ ಒಮ್ಮೆ ಎಣ್ಣೆ ಕುಡಿಸುತ್ತಿದ್ದರು; ಮಣ್ಣು ತಿನ್ನದಂತೆ ಅದರ ಬಾಯಿಗೆ ಕುಕ್ಕೆ ಕಟ್ಟಿ

ಬಹು ಜೋಕೆಯಿಂದ ನೋಡಿಕೊಳ್ಳುತ್ತಿದ್ದರು. ನಾನು ಗರಿಕೆ ಹುಲ್ಲು ಕಿತ್ತು ತಂದು ಅದಕ್ಕೆ ಗರಿಗರಿಯಾಗಿ ತಿನ್ನಿಸುತ್ತಿದ್ದೆ. ಬೆಳಗ್ಗೆ ಸಂಜೆ ನಿತ್ಯವೂ ಗೌರಿಯೊಡನೆಯೇ ನನ್ನಾಟ. ಪಾರ್ವತಿಯೂ ಇರಲಿಲ್ಲ; ನನಗಿಂತ ಚಿಕ್ಕವರು ಯಾರೂ ಮನೆಯಲ್ಲಿರಲಿಲ್ಲ. ನನ್ನ ಅಣ್ಣಂದಿರು ಇಬ್ಬರು ದೊಡ್ಡವರು, ನನ್ನೊಡನಾಟಕ್ಕೆ ವಯಸ್ಸು ಮೀರಿದ್ದವರು. ಹೀಗಾಗಿ ಗೌರಿಯೇ ನನ್ನ ಒಡನಾಡಿಯಾಗಿದ್ದಳು. ಶಾಲೆ ಬಿಟ್ಟು ಮನೆಗೆ ಬಂದೊಡನೆಯೇ ಗೌರಿಯನ್ನು ಹಿಡಿದುಕೊಂಡು ಹೊರಟುಬಿಡುತ್ತಿದ್ದೆ. ಅವಳು ಬೀದಿಯಲ್ಲಿ ಬಯಲಿನಲ್ಲಿ ಚಿಮ್ಮಿದರೆ, ಚಿಗಿದರೆ, ನೆಗೆದರೆ, ಕುಣಿದರೆ ನನ್ನ ಹೃದಯವೂ ಅವಳೊಡನೆ ಚಿಮ್ಮುತ್ತಿತ್ತು, ಚಿಗಿಯುತ್ತಿತ್ತು, ನೆಗೆಯುತ್ತಿತ್ತು, ಕುಣಿಯುತ್ತಿತ್ತು. ರಾತ್ರಿಯ ವೇಳೆ ಅವಳನ್ನು ಕಟ್ಟಿಹಾಕುತ್ತಿರಲಿಲ್ಲ. ನಮ್ಮ ತಂದೆ ನನ್ನೊಡನೆ 'ವರಾಂಡಾ' ದಲ್ಲಿ ಮಲಗುತ್ತಿದ್ದರು. ಗೌರಿಯೂ ಅವರ ಪಕ್ಕದಲ್ಲಿ ಮಲಗಿಬಿಡುತ್ತಿದ್ದಳು. ಬೆಳಗಾಗುವ ವೇಳೆ ಯಾವುದೊ ಮಾಯದಲ್ಲಿ ಬಂದು ನನ್ನ ಹಾಸಿಗೆಯಲ್ಲಿ ಮಲಗಿಬಿಡುತ್ತಿದ್ದಳು. ಅವಳು ಸ್ವಲ್ಪ ದೊಡ್ಡವಳಾದ ಮೇಲೆ, ಅವಳ ಪೋಷಣೆಗಾಗಿ ನಮ್ಮ ತಂದೆ ಏನೂ ವೆಚ್ಚಮಾಡುತ್ತಿರಲಿಲ್ಲ. ಗೌರಿಯ ಅರ್ಧ ಪೋಷಣೆ ನಾನು ಮಾಡುತ್ತಿದ್ದೆ. ಇನ್ನರ್ಧ ಅವಳೇ ಗಳಿಸಿಕೊಳ್ಳುತ್ತಿದ್ದಳು. ಹೇಗೆಂದರೆ, ಗೌರಿ ಕರುವಾಗಿದ್ದಂದಿನಿಂದ ಬೀದಿಯಲ್ಲಿ ಎಲ್ಲರ ಪ್ರೇಮವನ್ನೂ ಗಳಿಸಿಬಿಟ್ಟಿದ್ದಳು. ಎಲ್ಲರಿಗೂ ಅವಳನ್ನು ಮುದ್ದಾಡಬೇಕೆಂದು ಆಸೆ. ಅವಳ ಎಳೆಯ ರೂಪು, ಬಿಳಿಯ ಬಣ್ಣ ಹಾಗಿದ್ದುವು. ಯಾರ ಕೈಗೂ ಸಿಕ್ಕುತ್ತಿರಲಿಲ್ಲ, ಮುಟ್ಟುವುದಕ್ಕೆ ಹೋದರೆ ವೈಲಿ ದೂರ ಹಾರಿಬಿಡುತ್ತಿದ್ದಳು. ಆದರೆ ನಾನಾಗಲಿ ನಮ್ಮ ತಂದೆಯಾಗಲಿ ''ಗೌರೀ'' ಎಂದು ಕೂಗಿದರೆ ಸಾಕು, ನೆಗೆನೆಗೆದು ಓಡಿಬಂದು, ಚಿಗಿಚಿಗಿದು ಹಾರಿಬಂದು, ಬಾಲ ಕೊಂಕಿಸಿ ನಮ್ಮ ಸುತ್ತ ಕುಣಿದಾಡುವಳು, ನಾಗಾಲ ಮೇಲೆ ನಲಿದಾಡುವಳು. ಬರುಬರುತ್ತ, ಅವಳು ದೊಡ್ಡವಳಾದಂತೆ, ನಮ್ಮ ಮಾತುಗಳೆಲ್ಲವನ್ನು ಅರ್ಥಮಾಡಿಕೊಳ್ಳುವಮಟ್ಟಿಗಾದಳು. ಹೋಗು ಎಂದರೆ ಹೋಗುವಳು, ಬಾ ಎಂದರೆ ಬರುವಳು; ಮಲಗಿಕೊ ಎಂದರೆ ಮಲಗುವಳು. ಗೌರಿಗೆ ಎರಡು ವರ್ಷ ತುಂಬಿದ ಮೇಲೆ ಅವಳನ್ನು ಮೇವಿಗಾಗಿ ಹೊಡೆದುಕೊಂಡು ಹೋಗಲು ದನ ಕಾಯುವವನೊಬ್ಬನನ್ನು ಗೊತ್ತುಮಾಡಿದೆವು. ಅವನು ಹನ್ನೊಂದರ ಹೊತ್ತಿಗೆ ಗೌರಿಯನ್ನು ಹೊಡೆದುಕೊಂಡು ಹೋಗಿ ಸಂಜೆಯ ಹೊತ್ತಿಗೆ ಮನೆಗೆ ಅಟ್ಟಿಬಿಡುತ್ತಿದ್ದ. ಮನೆಗೆ ಬರಬೇಕೆಂದರೆ ಗೌರಿಗೆ ತುಂಬ ಆತುರ. ಅವಳು ಓಡಿಬರುವ ರಭಸದಲ್ಲಿ ಬೀದಿಯಲ್ಲಿ ಆಡುವ

ಮಕ್ಕಳು ಎಲ್ಲಿ ಅವಳ ಕಾಲಿಗೆ ಸಿಕ್ಕಿಬಿಡುವುವೋ ಎಂದು ಮೊದಮೊದಲು ಬೀದಿಯ ಜನ ಹೆದರಿದ್ದರು. ತಾನು ಎಷ್ಟೇ ವೇಗವಾಗಿ ಓಡಿ ಬರುತ್ತಿರಲಿ, ಅಡ್ಡನಾಗಿ ಆಡುವ ಮಕ್ಕಳು ಸಿಕ್ಕಿಬಿಟ್ಟರೆ ಗೌರಿ ತಟ್ಟನೆ ನಿಂತುಬಿಡುವಳು, ಇಲ್ಲವೆ ಸರಕ್ಕನೆ ಪಕ್ಕಕ್ಕೆ ತಿರುಗಿ ಓಡಿಬರುವಳು. ಮನೆಯ ಬಾಗಿಲು ಸಮೀಪಿಸಿದ ಕೂಡಲೆ ಒಮ್ಮೆ 'ಅಂಬಾ' ಎನ್ನುವಳು. ಯಾರಾದರೂ ಬಂದು ಕರೆದೊಯ್ಯಲಿ ಇಲ್ಲದಿರಲಿ, ಒಳಕ್ಕೆ ಹೋಗಿ ತನ್ನ ಸ್ವಸ್ಥಾನದಲ್ಲಿ ನಿಂತುಬಿಡುವಳು. ದೊಡ್ಡವಳಾದ ಮೇಲೂ ಅವಳನ್ನು ನೆಪಮಾತ್ರಕ್ಕೆ ಕಟ್ಟಿಹಾಕುತ್ತಿದ್ದೆವು. ಏಕೆಂದರೆ, ಕಟ್ಟಿಹಾಕುವ ಆವಶ್ಯಕತೆಯೇ ಇರಲಿಲ್ಲ. ಮನೆಗೆ ಬಂದಮೇಲೆ, ಮಾರನೆಯ ಬೆಳಗ್ಗೆ ದನ ಕಾಯುವವನು ಬಂದು ಹೊಡೆದುಕೊಂಡು ಹೋಗುವವರೆಗೂ ಅವಳು ಎಡೆ ಕದಲುತ್ತಿರಲಿಲ್ಲ. ಮನೆಯೊಳಗಿನಿಂದ ಹಿತ್ತಿಲಿನಲ್ಲಿದ್ದ ತನ್ನ ಕೊಟ್ಟಗೆಗೆ ಹೋಗುವಾಗ ಅವಳು ಬಹಳ ಎಚ್ಚರಿಕೆಯಿಂದ ನಡೆದುಹೋಗುತ್ತಿದ್ದಳು. ಅವಳ ನಡಗೆ, ನಡತೆ– ಎರಡೂ ಗಂಭೀರ. ಮನೆಯಲ್ಲಿ ಏನೇ ಸಾಮಾನು ಅಡ್ಡನಾಗಿ ಸಿಕ್ಕಲಿ, ಅದನ್ನು ಉರುಟುತ್ತಿರಲಿಲ್ಲ; ಅದನ್ನು ಮೂಸಿನೋಡಿ ದಾಟಿಕೊಂಡು ಮುಂದೆ ಹೋಗುವಳು. ಅಕ್ಕಿ, ಬೇಳೆ, ಮುಂತಾಗಿ ತಿನ್ನತಕ್ಕ ಪದಾರ್ಥ ಏನನ್ನೆ ಆಗಲಿ ಅಂಗಳದಲ್ಲಿ ಹರವಿದ್ದರೆ, ತೊಟ್ಟಿಯಲ್ಲಿ ಇಟ್ಟದ್ದರೆ, ಅವಳು ತಿನ್ನುವ ಹಾಗೆ ಬಾಯಿ ಹಾಕಿ, ತಿನ್ನದೆ ಹಾಗೆಯೇ ಮೂಸಿನೋಡಿ ಅದನ್ನು ಬಿಟ್ಟು ಮುಂದಕ್ಕೆ ನಡೆದು ಹೋಗುವಳು. ಮನೆಯಲ್ಲಿ ಮಾತ್ರವಲ್ಲ, ಬೀದಿಯಲ್ಲೂ ಹಾಗೆಯೇ. ನಮ್ಮ ಮನೆಯ ಬೀದಿಯಲ್ಲಿ ಒಬ್ಬಿಬ್ಬರು ತೊಗರಿಬೇಳೆ ಮಾರು ವವರ ಮನೆಗಳಿದ್ದುವು. ಅವರು ಸಾಧಾರಣವಾಗಿ ಯಾವಾಗಲೂ ಮನೆಯ ಮುಂದೆ ತೊಗರಿಯ ಕಾಳನ್ನೋ ಬೇಳೆಯನ್ನೋ ಹರವಿಯೇ ಇರುತ್ತಿದ್ದರು. ನಮ್ಮ ಗೌರಿ ಅದನ್ನು ಮೂಸಿಯೂ ನೋಡುತ್ತಿರಲಿಲ್ಲ. ಇದರಿಂದಾಗಿ ಬೀದಿ ಯವರೆಲ್ಲರೂ ಅವಳಿಗೆ ಅಕ್ಕಿ, ತೆಂಗಿನಕಾಯಿ, ಹೊಟ್ಟು, ತವುಡು, ಬೇಳೆಯ ನುಚ್ಚು ಮೊದಲಾದ ತಿಂಡಿ ತಿನಿಸುಗಳನ್ನು ತಿನ್ನಿಸುವವರೇ ಆಗಿದ್ದರು. ಸಂಕ್ರಾಂತಿ, ಗೌರೀ, ಗೋಕುಲಾಷ್ಟಮಿ ಹಬ್ಬಗಳು ನಮ್ಮ ಗೌರಿಗಂತೂ ದೊಡ್ಡ ಹಬ್ಬಗಳು. ಆಗ ಅವಳಿಗೆ ಮೇವು ಉಪಚಾರಕ್ಕೆ ಮಾತ್ರ. (ಸರ್ವದಾ ಹೀಗೆ ಅವಳ ಹೊಟ್ಟೆ ತುಂಬಿರುತ್ತಿದ್ದುದರಿಂದ ಅವಳು ಸಿಕ್ಕಿದ ಪದಾರ್ಥಗಳೆಗೆಲ್ಲ ಬಾಯಿಹಾಕದೆ ಇರುತ್ತಿದ್ದಳೇನೊ, ನಾನರಿಯೆ). 5. ಹಿರಿಯರ ವಿಶ್ವಾಸ ಒಂದು ಬಗೆಯಾದರೆ, ಕಿರಿಯರದು ಇನ್ನೊಂದು ತೆರದ್ದು; ಬೀದಿಯ ಹುಡುಗರೆಲ್ಲರೂ ತಮ್ಮ ತಮ್ಮ ಇಷ್ಟಾನುಸಾರ, ಶಕ್ತ್ಯನುಸಾರ, ಹಸುರು ಹುಲ್ಲು ಕಿತ್ತು ಕೈಲಿ ಹಿಡಿ

ದಿದ್ದು, ಅವಳು ಮನೆಗೆ ಬರುವ ವೇಳೆ ಅವಳ ಮುಂದೆ ಒಡಿಯುತ್ತಿದ್ದರು. ಅವಳಿಗೆ ಹಸಿವಿದ್ದರೆ ತಿನ್ನುವಳು, ಇಲ್ಲವೆ ಸುಮ್ಮನೆ ಬಂದುಬಿಡುವಳು. ಆದರೆ ಆ ಹುಡುಗರು ತಾವು ಪ್ರೀತಿಯಿಂದ ಕಿತ್ತ ಹುಲ್ಲನ್ನು ಬಿಸಾಡದೆ, ನಮ್ಮ ಮನೆಗೆ ಬಂದು ಹಸುವಿನ ಗೊಂತಿನಲ್ಲಿ ಹಾಕಿ ಹೋಗುತ್ತಿದ್ದರು. ಹಾಗೆ ಇಪ್ಪತ್ತು ಮೂವತ್ತು ಹುಡುಗರು ತಂದುಹಾಕಿದ ಹಿಡಿ ಹುಲ್ಲು ಕೂಡಿ ಹೆಡಗೆ ತುಂಬಿ, ಅವಳ ರಾತ್ರಿಯ ಮೇವಿಗಾಗುತ್ತಿತ್ತು. ಹೀಗೆ, ಬೀದಿಯವರೆಲ್ಲರ ಮುದ್ದಿನ ಬೀದಿ ಕಡಸಾಗಿ ಬೆಳೆದ ತಬ್ಬಲಿ ಗೌರಿ, ನಮ್ಮ ಮನೆಯ ಗೌರಿ, ಮೊದಲ ಕರುಹಾಕುವ ಹೊತ್ತಿಗೆ ದೃಷ್ಟಿತಾಕುವ ಹಾಗೆ ಮೈ ತುಂಬಿ ಬೆಳೆದಿದ್ದಳು. ಅವಳ ಮೊದಲ ಕರು ಹೋರಿಗರು, ಅದಕ್ಕೆ ನಮ್ಮ ತಂದೆ ನನ್ನ ಹೆಸರು ಇಟ್ಟರು. ಗಿಣ್ಣುಹಾಲನ್ನು ಕ್ರಮವಾಗಿ ಬೀದಿಯವರಿಗೆಲ್ಲ ಹಂಚಿದೆವು. ಗೌರಿ ಹೊತ್ತಿಗೆ ಎರಡು ಸೇರು ಹಾಲು ಕರೆಯುತ್ತಿದ್ದಳು. ನಮ್ಮ ಮನಗೆ ಅಬ್ಬಬ್ಬ ಎಂದರೆ ದಿನಕ್ಕೆ ಒಂದೂವರೆ ಸೇರು ಹಾಲು ಸಾಕಾಗುತ್ತಿತ್ತು. ನಮ್ಮ ಮನೆಯ ದನಕಾಯುವವನೇ ಬಂದು ಹಸುವಿನ ಹಾಲು ಕರೆದು ಕೊಟ್ಟು ಹೋಗುತ್ತಿದ್ದ. ನಮ್ಮ ಮನೆಗೆ ಸಾಕಾಗಿ ಉಳಿದ ಹಾಲನ್ನು ತಾನು ಬೇಕಾದರೆ ಕೊಳ್ಳುವುದಾಗಿ ಅವನು ಒಪ್ಪಿಕೊಂಡ. ಇದಕ್ಕೆ ನಮ್ಮ ತಂದೆ ಒಪ್ಪುವುದರಲ್ಲಿದ್ದರು. ಆದರೆ ನಮ್ಮ ತಾಯಿ ಒಪ್ಪಲಿಲ್ಲ ; ಬೀದಿಯಲ್ಲಿ ಯಾರು ಯಾರಿಗೆ ಹಾಲಿನ ಆವಶ್ಯಕತೆ ಇತ್ತೊ ವಿಚಾರಿಸಿ, ಅವರಿಗೆಲ್ಲ ಹೇಳಿಕಳಿಸಿ, ಹೊತ್ತಿಗೆ ಒಂದು ಲೋಟ ಹಾಲನ್ನು ಉಚಿತವಾಗಿ ತೆಗೆದುಕೊಂಡು ಹೋಗುವಂತೆ ಏರ್ಪಡಿಸಿಬಿಟ್ಟರು. ಗೌರಿಯ ಮೊದಲ ಕರಾವನ್ನು ಬೀದಿಗೆ ಬೀದಿಯೇ ಸವಿದು ನಲಿಯಿತು. ನನ್ನ ಮತ್ತು ನನ್ನ ತಾಯಿಯ ನಲವಿಗಂತೂ ಪಾರವೇ ಇರಲಿಲ್ಲ.

"ಹೀಗಿದ್ದಳು ನಮ್ಮ ಗೌರಿ. ಅವಳ ವಿಚಾರ ಹೇಳುತ್ತ ಹೋದರೆ ಇನ್ನೂ ಬೇಕಾದಷ್ಟು ಹೇಳಬಹುದು. ಅವಳು ಈ ಸಲ ಹೆಂಗರು ಹಾಕೇ ಹಾಕುತ್ತಾಳೆ ಎಂದು ನಮ್ಮ ತಾಯಿ ನಂಬಿದ್ದರು. ದನಕಾಯುವವನೂ ಹಾಗೆಯೇ ಹೇಳುತ್ತಿದ್ದ. ಆದರೆ ತುಂಬುಗಬ್ಬವಾಗಿದ್ದ ಗೌರಿ ಕರು ಹಾಕುವ ಮುನ್ನ ನಮ್ಮನ್ನೆಲ್ಲ ಬಿಟ್ಟು ಹೊರಟು ಹೋದಳು. ದನಕಾಯುವವನು ಯಾರೋ ಹೊಟ್ಟೆಯಕಿಚ್ಚಿಗೆ ಮದ್ದು ಹಾಕಿದ್ದಾರೆ ಎಂದ. ಅದು ಎಂತೋ ಏನೋ ಯಾರಿಗೆ ಗೊತ್ತು ? ಅಂತೂ ಗೌರಿಯ ಸಾವು ಬಲು ವಿಚಿತ್ರದ ಸಾವು. ನಾವು ಕಂಡ ಹಾಗೆ ಅವಳಿಗೆ ಯಾವ ರೋಗವೂ ತಗುಲಿರಲಿಲ್ಲ. ಸಾಯುವ ದಿನ ಮನೆಗೆ ಬಂದ ಕೂಡಲೆ ಇದ್ದ ಬದ್ದ ಕಲಗಚ್ಚನ್ನೆಲ್ಲ ಹೀರಿಬಿಟ್ಟಳಂತೆ. ಎಂಟು ಹತ್ತು ಸಲ ಅರಚಿಕೊಂಡಳಂತೆ. ನಮ್ಮ ತಂದೆ ಬರುವ ಹೊತ್ತಿಗೆ

ಕಾಲು ಚಾಚಿ ಮಲಗಿಬಿಟ್ಟಳಂತೆ. ಹೊಟ್ಟೆ ಉಬ್ಬರಿಸಿಕೊಂಡುಬಿಟ್ಟಿತ್ತು. ನಮ್ಮ ತಂದೆ ದನಕಾಯುವವನನ್ನು ಕರೆದುಕೊಂಡು ಬಂದು ತೋರಿಸಿದರು. ಅವನು ಕೈ ಅಲ್ಲಾಡಿಸಿಬಿಟ್ಟ. ನಮ್ಮ ತಂದೆ ಕುಳಿತು, ಗೌರಿಯ ತಲೆಯನ್ನು ತಮ್ಮ ತೊಡೆಯ ಮೇಲೆ ಇರಿಸಿಕೊಂಡು, ಕಣ್ಣೀರು ಸುರಿಸುತ್ತ ಅವಳ ಗಲ್ಲ ತುರಿಸುತ್ತಿದ್ದರು. ಗೌರಿಯ ಕಣ್ಣುಗಳಿಂದಲೂ ಧಾರಾಕಾರವಾಗಿ ನೀರು ಸುರಿಯುತ್ತಿತ್ತಂತೆ. ಹೇಳಲಾರದಂಥ ಬಾಧೆಗೋ, ಅಗಲಿ ಹೋಗಲಾರದ ದುಃಖಕ್ಕೋ, ಯಾರಿಗೆ ಗೊತ್ತು? ಮಾತನಾಡಬಲ್ಲ ನಾವೇ ಕಣ್ಣೀರು ಸುರಿಸುತ್ತೇವೆ. ಮೂಕಪ್ರಾಣಿ ಕಣ್ಣೀರುಗರೆಯುವುದು ತೀರ ಸಹಜವೆಂದು ತೋರುತ್ತೆ.

"ಮಾರನೆಯ ಬೆಳಿಗ್ಗೆ, ನಮ್ಮ ಮನೆಯ ಕಕ್ಕಸು ಚೊಕ್ಕಟ ಮಾಡುವುದಕ್ಕೆ ಬರುತ್ತಿದ್ದ ಝಾಡಮಾಲಿಯ ವಶಕ್ಕೆ ಗೌರಿಯನ್ನು-ಅಲ್ಲ ಅವಳ ಕಳೇಬರವನ್ನು-ಒಪ್ಪಿಸುವುದೆಂದು ತೀರ್ಮಾನವಾಗಿಹೋಗಿತ್ತು. ಸತ್ತ ದನಗಳನ್ನು ಮಾದಿಗರು ಹೇಗೆ ಉಪಯೋಗಿಸುತ್ತಾರೆಂದು ನಾನು ಕೇಳಿದ್ದೆ. ಅದು ತಪ್ಪೋ ಸರಿಯೋ ಅದರ ವಿಚಾರ ಬೇರೆ. ಅಂತೂ ಗೌರಿಗೆ ಆ ರೀತಿಯ ಗತಿ ಕಾಣಿಸುವುದು ನನಗೆ ಘೋರವಾಗಿ ಕಂಡಿತು. ಗೌರಿಯನ್ನು ಊರಾಚೆ ಎಲ್ಲಿಯಾದರೂ ಹೂಳಿಸಬೇಕೆಂದು ನಾನು ಹಟಹಿಡಿದೆ. ನಮ್ಮ ತಂದೆ ಒಪ್ಪಿದರು. ಗೌರಿಯನ್ನು ಹೂತೆಡೆಯಲ್ಲಿ ಒಂದು ಹೊಂಗೆ ಸಸಿ ನಡಿಸಿದ್ದೇನೆ. ಗೌರಿ ಇದ್ದಾಗ ಅನೇಕರಿಗೆ ತಂಪೂಡಿದ್ದಳು. ಸತ್ತಮೇಲೂ ತಂಪು ನೀಡುವಳೆಂದು ನಮ್ಮ ತಂದೆ, ನಾನು ನಂಬಿದ್ದೇವೆ."

* * * *

ಗೌರಿಯ ವಿಚಾರ ಹೇಳಿ ಮುಗಿಸಿದಾಗ ನನ್ನ ಗೆಳೆಯನ ಮುಖ ನೋಡಿದೆ. ಅವನ ಕಣ್ಣು ನೀರು ತುಂಬಿ ಹನಿಯುವುದರಲ್ಲಿತ್ತು. ಇನ್ನು ಅವನು ನಗುವುದೆಲ್ಲಿ ಬಂತು? ನಮ್ಮೊಬ್ಬರ ಹೃದಯವೇ ಬೆಣ್ಣೆಯದು, ಇತರರದು ಕಲ್ಲಿನದು ಎಂದು ಎಣಿಸುವುದು ಎಂಥ ಮೂರ್ಖತನ?

ಗೌರಿ ಸತ್ತು ಹದಿನೈದು ವರ್ಷಗಳ ಮೇಲಾಯಿತು. ಅವಳ ಗೋರಿಯೆಡೆಯಲ್ಲಿ ನಟ್ಟ ಹೊಂಗೆಯ ಸಸಿ ಇಂದು ದೊಡ್ಡ ಮರವಾಗಿ ಬೆಳೆದು, ನಾವೆಣಿಸಿದಂತೆ, ದನ ಕಾಯುವವರಿಗೂ ದನಗಳಿಗೂ ತುಂಬ ನೆರಳು ಕೊಡುತ್ತಿದೆ. ಆ ಒಂದು ಹೊಂಗೆಯ ದೆಸೆಯಿಂದ ಅಲ್ಲಿ ಒಂದು ಸಣ್ಣ ಹೊಂಗೆಯ ತೋಪೇ ಆಗಿಹೋಗಿದೆ. ಅಲ್ಲಿನ ಪ್ರದೇಶದ ಹುಲ್ಲು ಕೂಡ ತುಂಬ ಹುಲುಸು, ಹಸುರು, ಸೊಂಪು.

ಈಗ ಬೆಂಗಳೂರಿನಲ್ಲಿ ದುಡ್ಡು ಕೊಟ್ಟರೂ ಒಳ್ಳೆಯ ಹಾಲು ಸಿಕ್ಕುವುದು ಕಷ್ಟವಾಗಿದೆ. ಬೆರಕೆಯ "ಕೈಹಾಲು" ಕೊಂಡು ಹಾಕಿ ಕೈಯಾರ ಮಕ್ಕಳನ್ನು ಕೊಲ್ಲುವ ಪರಿಸ್ಥಿತಿಯುಂಟಾಗಿದೆ. ಇಂಥ ಕಾಲದಲ್ಲಿ, ನಾವಿರುವ ಬೀದಿಯಲ್ಲಿ, ಒಬ್ಬರು ಪುಣ್ಯಾತ್ಮರಿದ್ದಾರೆ. ಮನೆಯಲ್ಲಿ ನಮ್ಮ ಗೌರಿಯಂಥ ಎರಡು ಮೂರು ಹಸುಗಳನ್ನು ಕಟ್ಟಿಕೊಂಡಿದ್ದಾರೆ. ನಮ್ಮ ಮನೆಯ ಮಗುವಿನಂತೆಯೇ ಬೀದಿಯ ಅನೇಕ ಮಕ್ಕಳು ಅವರ ಔದಾರ್ಯದ ಹಾಲು ಕುಡಿದು ಚೆನ್ನಾಗಿ ಬೆಳೆಯುತ್ತಿವೆ. ನಮ್ಮ ಮನೆಯ ಹುಡುಗಿ ಅವರ ಮನೆಯಿಂದ ಹಾಲು ತಂದಾಗಲೆಲ್ಲ ನನಗೆ ಗೌರಿಯ ನೆನಪಾಗುತ್ತದೆ. ನನ್ನ ಭಾಗಕ್ಕೆ ಗೌರಿ ಸತ್ತಿಲ್ಲ; ಗೌರಿಯ ಸಾವು ಸಾವಲ್ಲ; ನಮ್ಮ ಮಗುವಿಗೆ ಈಗ ದೊರೆಯುತ್ತಿರುವ ಹಾಲು ಕೊಡುವ ಹಸುವಾಗಿ ಗೌರಿ ಹುಟ್ಟಿದ್ದಾಳೇನೊ ಎಂದು ನನಗನ್ನಿಸುತ್ತದೆ.

## ಅಭ್ಯಾಸ

K. Shanthaveerappa III "B".

**೧. ಕಠಿಣ ಶಬ್ದಗಳ ಅರ್ಥ :—**

ತುಂಬೊಲವು—ವಿಶೇಷ ಪ್ರೀತಿ. ವಿವೇಚನಾ ಶೂನ್ಯತೆ—ಆಲೋಚನೆ ಮಾಡದಿರುವುದು. ಸೋಗೆ—ಗರಿ. ಕಳೇಬರ—ಹೆಣ. ರೋದಿಸು—ಅಳು. ತಣ್ಬೆಳಕು—ತಂಪಾದ ಬೆಳಕು. ಅರಿವೆ—ಬಟ್ಟೆ. ದಂಡೆ—ಹಾರ. ಸೂಡು—ಧರಿಸು. ಶಾಮಕ—ಸಮಾಧಾನವನ್ನುಂಟುಮಾಡುವ. ತುಸ—ಸ್ವಲ್ಪ. ಸೌರಭ—ಪರಿಮಳ. ಮಂದಮಾರುತ—ಮೆಲ್ಲಗೆ ಬೀಸುವ ಗಾಳಿ. ಪೂಸು—ಬಳಿ, ಲೇಪಿಸು. ಕಂಪು—ಸುವಾಸನೆ. ಬಾಷ್ಪಾಂಜಲಿ—ಕಣ್ಣೀರು. ಪುಷ್ಪಾಂಜಲಿ—ಹೂವಿನ ಬೊಗಸೆ (ಅರ್ಪಣೆ). ರಾಗ—ಪ್ರೇಮ. ಪಕ್ಕಾಗು—ಗುರಿಯಾಗು. ಗೊಟ್ಟ—ದನಕರುಗಳಿಗೆ ಹಾಲು ಮೊದಲಾದ ದ್ರವವಸ್ತುಗಳನ್ನು ಹುಯ್ಯುವ ಬಿದಿರಿನ ಕೊಳವೆ. ಗೋವಳಿಗ—ಗೊಲ್ಲ. ಎಡೆ—ಸ್ಥಳ. ಬೋರೆ—ಎತ್ತರವಾದ ಸ್ಥಳ. ನೀರೆರೆ—ನೀರನ್ನು ಹಾಕು. ಮರುಕೊಳಿಸು—ಮತ್ತೆ ಉಂಟಾಗು, ಚೇತರಿಸು. ಚಿಗಿ—ನೆಗೆ. ವರಾಂಡ—ಮನೆಯ ಪಡಸಾಲೆ. ನಾಗಾಲ ಮೇಲೆ—ನಾಲ್ಕು ಕಾಲಿನ ಮೇಲೆ. ಗೊಂತು—ದನಗಳಿಗೆ ಮೇವು ಹಾಕುವುದಕ್ಕಾಗಿ ಮಾಡಿರುವ ಸ್ಥಳ. ಹೆಡಗೆ—ದೊಡ್ಡ ಬುಟ್ಟಿ. ನಲವು—ಸಂತೋಷ. ತುರಿಸು—ಕೆರೆಯುವುದು.

**೨. ಇವುಗಳಿಗೆ ಸಂದರ್ಭವನ್ನು ಸೂಚಿಸಿ ಸ್ವಾರಸ್ಯವನ್ನು ವಿವರಿಸಿ :—**

೧. ಸಾವು ಯಾರಿಗೂ ತಪ್ಪಿದ್ದಲ್ಲ. ೧೯

೨. ಸಹಾನುಭೂತಿಯ ಮಾತುಗಳು ಯಾವಾಗಲೂ ದುಃಖವನ್ನು ಹೆಚ್ಚಿಸುತ್ತವೆಯೇ ಹೊರತು ತಗ್ಗಿಸುವುದಿಲ್ಲ. ೨೦

೩. ಇಂಥ ಪ್ರೀತಿ ಲೋಕಕ್ಕೇ ಅತಿಶಯವಾದದ್ದು.

೪. ನಿನ್ನ ಮೌನವೇ ಗೌರಿಯ ಕತೆ ಹೇಳುತ್ತಿದೆ.

೫. ಹಿರಿಯರ ವಿಶ್ವಾಸ ಒಂದು ಬಗೆಯಾದರೆ, ಕಿರಿಯರದು ಇನ್ನೊಂದು ತೆರದ್ದು.

೬. ನಮ್ಮೊಬ್ಬರ ಹೃದಯವೇ ಬೆಣ್ಣೆಯದು, ಇತರರದು ಕಲ್ಲಿನದು ಎಂದು ಎಣಿಸುವುದು ಎಂಥ ಮೂರ್ಖತನ?

೩. ಕೆಳಗಣವುಗಳಿಗೆ ಉತ್ತರ ಬರೆಯಿರಿ :—

೧. "ಕಥೆಗಾರನ ಬಾಯಿಂದ ಗೌರಿಯ ಸಾವಿನ ಕಥೆಯನ್ನು ಕೇಳಿದ ಶಂಕರ ಅಚ್ಚರಿಗೊಂಡಂತೆ ಓದುಗರೂ ಅಚ್ಚರಿಗೊಳ್ಳದೆ ಇರಲಾರರು"—ಇದನ್ನು ವಿವರಿಸಿ.

೨. 'ಗೌರಿಯ ಸಾವಿ' ನಲ್ಲಿ ಚಿತ್ರಿತವಾಗಿರುವ ಕಥೆಗಾರನ ಅನುಪಮ ಪ್ರೇಮವನ್ನು ಬಣ್ಣಿಸಿ.

೩. 'ಗೌರಿ ಯಾರು? ಗೌರಿಯ ವೃತ್ತಾಂತವನ್ನು ಕಥೆಗಾರನ ಮಾತಿನಲ್ಲಿ ಬರೆಯಿರಿ.

೪. 'ಗೌರಿಯ ಸಾವಿ' ನಲ್ಲಿ ಮನುಷ್ಯ ಮತ್ತು ಪ್ರಾಣಿ ಸಂಬಂಧ ಹೇಗೆ ಚಿತ್ರಿತವಾಗಿದೆ?

೫. 'ಗೌರಿಯ ಸಾವು' ಎಂಬ ಕಥೆಯ ಸ್ವಾರಸ್ಯವನ್ನು ವಿವರಿಸಿ.

# ಹಲ್ಲಿ

**ಪಂಜೆ ಮಂಗೇಶರಾವ್**

ಮಂಗಳೂರಿಗೆ ಹದಿನಾಲ್ಕು ಮೈಲಿ ದೂರದಲ್ಲಿರುವ ಬಂಟವಾಳ ಎಂಬ ಗ್ರಾಮ ಪಂಜೆ ಅವರ ಜನ್ಮಸ್ಥಳ. ಮಂಗಳೂರಿನ ಕಾಲೇಜಿನಲ್ಲಿ ಬಿ.ಎ. ಪದವೀಧರರಾದ ಮೇಲೆ ಅದೇ ಊರಿನ ಸರಕಾರಿ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿ ಕೆಲಸಕ್ಕೆ ಸೇರಿಕೊಂಡರು. ಕೆಲವು ವರ್ಷಗಳ ಕಾಲ ವಿದ್ಯಾ ಶಾಖೆಯ ಇನ್‌ಸ್ಪೆಕ್ಟರಾಗಿ ಮತ್ತು ಟ್ರೈನಿಂಗ್ ಕಾಲೇಜಿನ ಮುಖ್ಯೋಪಾಧ್ಯಾಯರಾಗಿ ಕೆಲಸ ಮಾಡಿದರು. ತಮ್ಮ ಅರುವತ್ತನಾಲ್ಕನೆಯ ವಯಸ್ಸಿನಲ್ಲಿ ಅವರು ಹೈದರಾಬಾದಿನ ತಮ್ಮ ಮಗನ ಮನೆಯಲ್ಲಿ ಸ್ವರ್ಗಸ್ಥರಾದರು.

ಕನ್ನಡ ಭಾಷೆಗಾಗಿ ದುಡಿದ ದಕ್ಷಿಣ ಕನ್ನಡ ಜಿಲ್ಲೆಯವರಲ್ಲಿ ಪಂಜೆ ಅವರು ಹಿರಿಯ ಪ್ರಮುಖರು. ಅವರನ್ನು ಕನ್ನಡದ ಸಣ್ಣ ಕಥೆಗಳ ಜನಕರೆನ್ನಬಹುದು. ನಲವತ್ತು ವರ್ಷಗಳ ಹಿಂದೆಯೇ ಅವರ ಸಣ್ಣ ಕಥೆ, ಲೇಖನ, ಲಘು ಹಾಸ್ಯಗಳು 'ಸುವಾಸಿನಿ' ಮತ್ತು 'ಸತ್ಯದೀಪಿಕೆ' ಎಂಬ ಮಾಸ ಪತ್ರಿಕೆಯಲ್ಲಿ ಪ್ರಕಟವಾದುವು. 'ನನ್ನ ಚಿಕ್ಕ ತಂದೆ', 'ನನ್ನ ಚಿಕ್ಕ ತಾಯಿ', 'ಭಾರತ ಶ್ರವಣ' ಮೊದಲಾದ ಕಥೆಗಳನ್ನೂ, 'ಕೋಟಿ ಚೆನ್ನಯ', 'ದುರ್ಗಾವತಿ' ಶೈಲಿನಿ ಮೊದಲಾದ ಐತಿಹಾಸಿಕ ಕಥೆಗಳನ್ನೂ, 'ಕಮಲ', 'ಭೀಷ್ಮ ನಿರ್ಯಾಣ', 'ಹಾವಿನ ಹಾಡು', 'ಹುತ್ತರಿ ಹಾಡು' ಮೊದಲಾದ ಕವನಗಳನ್ನೂ ರಚಿಸಿದ್ದಾರೆ. ಅನೇಕ ಮಕ್ಕಳ ಕಥೆಗಳನ್ನೂ ಮತ್ತು ಶಿಶು ಗೀತೆಗಳನ್ನೂ ಬರೆದಿದ್ದಾರೆ. ರಾಯಚೂರಿನಲ್ಲಿ ನಡೆದ ಇಪ್ಪತ್ತನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಅವರನ್ನು ಕರ್ನಾಟಕ ಗೌರವಿಸಿತು. ಕವಿಶಿಷ್ಯ ಎಂಬ ಕಾವ್ಯನಾಮದಿಂದ ಅವರು ಆಧುನಿಕ ಸಾಹಿತ್ಯ ಪ್ರಪಂಚದಲ್ಲಿ ಪ್ರಖ್ಯಾತರಾಗಿದ್ದಾರೆ.

ನಮ್ಮ ಮನೆಗೆ ದಿನಂಪ್ರತಿ ಬರುವ ಸ್ನೇಹಿತರಲ್ಲಿ ಹಲ್ಲಿಯು ಒಂದು. ಇರುಳು ನಾನು ಬೆಳಕನ್ನು ಇಟ್ಟು ಓದಲು ಕುಳ್ಳಿರುವಾಗ, ಹಲ್ಲಿಯು ಪ್ರತಿ ರಾತ್ರಿ ನನ್ನ ಭೇಟಿಗೆ ಬಾರದೆ ಇರುವುದಿಲ್ಲ. ಹಲ್ಲಿಗಳಿಗೆ ಮನೆಗಳೆಂದರೆ ಪ್ರೀತಿ. ಅವು ಪೂರ್ವಕಾಲದ ಸೇವಕರಂತೆ ಒಂದು ಮನೆಯಲ್ಲಿ ನಿಂತರೆ, ಅದನ್ನು ಬಿಟ್ಟು ಹೋಗುವುದಿಲ್ಲ. ಆದ್ದರಿಂದಲೇ ಇದನ್ನು ಸಂಸ್ಕೃತದಲ್ಲಿ 'ಗೃಹಗೋಧಿಕೆ' ಎಂದು ಕರೆಯುವರು. ಹಲ್ಲಿಯು ದೊಡ್ಡ ಮನೆತನಕ್ಕೆ ಸೇರಿದ್ದು. ಮೊಸಳೆ, ಉಡು ಮತ್ತು ಹಲ್ಲಿ ಅಕ್ಕತಂಗಿಯರು. ಇವು ಮನೆಮಾಡಿ

ಕೊಳ್ಳಲು ಎಲ್ಲವನ್ನು ಒದಗಿಸಿಕೊಂಡು ಮೊಸಳೆಯು ನೀರು ತರುವುದಕ್ಕೆ ಕಡಲಿಗೂ, ಉಡು ಕಟ್ಟಿಗೆ ಕಡಿಯುವುದಕ್ಕೆ ಕಾಡಿಗೂ, ಹಲ್ಲಿಯು ಬೆಂಕಿ ಉರಿಸುವುದಕ್ಕೆ ನಾಡಿಗೂ ಹೋದುವಂತೆ, ಅಷ್ಟರೊಳಗೆ ಕಲಿಕಾಲವು ಕಾಲು ಹಾಕಿದ್ದರಿಂದ, ಹೋದವರು ಅಲ್ಲಲ್ಲೆ ಉಳಕೊಳ್ಳಬೇಕಾಯಿತೆಂದು ನಮ್ಮ ಮುದಿ ಹೆಂಗಸರು ಆಡಿಕೊಳ್ಳುವುದುಂಟು. ಕಂಡವರ ನೆತ್ತರನ್ನು ಹೀರಿಕೊಳ್ಳುವಂತೆ, ಜನಗಳನ್ನು ನೋಡುತ್ತಲೇ ತಲೆ ಎತ್ತಿ ಕೆಂಪೇರುವ ಓತಿಯು, ಅತ್ತಿತ್ತ ಅಡ್ಡಾಡುವ ಹಾವುರಾಣಿಯು—ಇವುಗಳಿಗೆ ದೂರದ ತಮ್ಮಂದಿರಾಗಬೇಕು. ಮನೆತನದ ಆಸ್ತಿಯೆಲ್ಲಾ ಹೆಣ್ಣುಮಕ್ಕಳ ಪಾಲಾದ್ದರಿಂದ, ಈ ಓತಿಯು ಹಿತ್ತಲಿಂದ ಹಿತ್ತಲಿಗೆ ಓಡಾಡುತ್ತ ಕಂಡವರು ಎಸೆದ ಕಲ್ಲುಗಳಿಗೆ ತಲೆಕೊಟ್ಟು ಸಾಯುತ್ತಿದೆ.

ಹಲ್ಲಿಯ ವಿಷಯವಾಗಿ ಹುಡುಗರು ಇಂಥಾ ಅತ್ಯಾಚಾರವನ್ನು ನಡಿಸುವುದಿಲ್ಲ. ನಮ್ಮ ಪೂರ್ವಿಕರು ಹಲ್ಲಿಯನ್ನು ಜೋಯಿಸನೆಂದು ಭಾವಿಸುತ್ತಿದ್ದರು. ಗೌಳಿಯ ಚರ್ಯೆ ಚೇಷ್ಟೆಗಳನ್ನು ನೋಡಿ ತಮ್ಮ ಕಾರ್ಯಗಳನ್ನು ಕೈಕೊಳ್ಳುತ್ತಿದ್ದರು. ಪಯಣ ಹೊರಡುವಾಗ ಹಲ್ಲಿಯು ಚೀರಿದರೆ ಪಯಣವನ್ನು ನಿಲ್ಲಿಸಿಬಿಡುವರು. ಗಂಡಸಿನ ತಲೆಯ ಮೇಲೆ ಬಿದ್ದರೆ ಮರಣವು ಸಿದ್ಧ, ಹೆಂಗಸಿನ ಹೆಗಲ ಮೇಲೆ ಬಿದ್ದರೆ, ಬೊಟ್ಟಿನ ಕುಂಕುಮ ಉಳಿಯದು. ಇವನ್ನೆಲ್ಲಾ ಹೇಳಿತೀರದು. ಹಲ್ಲಿಶಕುನ ಎಂಬ ಹೆಸರಿನ ಅನೇಕ ಪುಸ್ತಕಗಳು ಹಲ್ಲಿಯ ಮಹಾತ್ಮೆಯನ್ನೂ ಅದರ ಮೇಲೆ ಜನಗಳಿಗಿರುವ ಮೂಢ ವಿಶ್ವಾಸಗಳನ್ನೂ ತೋರಿಸುತ್ತವೆ. ಬೇಕಾದವರು ಅಂಥ ಪುಸ್ತಕಗಳನ್ನು ಓದಿ ಓದಿ ತಲೆ ಮರುಳು ಮಾಡಿಕೊಳ್ಳಬಹುದು.

ಹಿಂದುಗಳು ಹಲ್ಲಿಯನ್ನು ಇಂಥಾ ಮೂಢಭಕ್ತಿಯಿಂದ ದುರ್ಗಾದೇವಿಯಂತೆ ಭಾವಿಸಿದರೂ, ದುರ್ಗೆಯಂತೆ ಇದಕ್ಕೆ ಎಂಟು ಕೈಗಳೂ ಇಲ್ಲ; ಭೀಕರ ಮುಖವೂ ಇಲ್ಲ. ಆದರೂ ಹಲ್ಲಿಯು ತನ್ನ ನಾಲ್ಕು ಕಾಲುಗಳಿಂದ ನಯವಾದ ಗೋಡೆಯನ್ನು ಹ್ಯಾಗೆ ಹತ್ತುತ್ತದೆಂಬುದು ಆಶ್ಚರ್ಯವಾಗಿದೆ. ಸಾವಿರ ವರ್ಷ ಗರಡೀ ಸಾಧಕ ಮಾಡಿದ ಜಟ್ಟಿಯು ಮನೆ ಅಜ್ಜಿಯ ಸೊಂಟ ಮುರಿದಾನಲ್ಲದೆ ಇಂಥಾ ಅಸಾಧ್ಯ ಕೃತ್ಯವನ್ನು ಮಾಡಲಾರನು. ಇದರ ಗುಟ್ಟನ್ನು ಅರಿಯಬೇಕೆಂದಿರುವವರು ಹಲ್ಲಿಯ ಕಾಲುಹಿಡಿಯಬೇಕು; ಆಗ ತಾನೆ ತಿಳಿದೀತು. ಆದರೆ ಹಲ್ಲಿಯು ನಮ್ಮ ಕುಲ ಸ್ತ್ರೀಯಂತೆ ಮಂದಮತಿಯಲ್ಲ, ಅದರ ಕಾಲುಗಳನ್ನು ಹಿಡಿಯಲು ಯತ್ನಿಸುವಾಗ, ನಿಮ್ಮ ಗುರಿ ತಪ್ಪಿ ಅದರ ಕಾಲು ಸಿಗದೆ ಬಾಲಕ್ಕೆ ಕೈ ಬೀಳುವುದು. ಜೀವದಾಸೆಯಿಂದ ಓಡುವ ತುರುಕನು ತಲೆಯ ಟೊಪ್ಪಿ ಕೊಟ್ಟು ಪ್ರೈ ತಪ್ಪಿಸಿಕೊಳ್ಳುವಂತೆ, ಹಲ್ಲಿಯು ಬಾಲವನ್ನು

ನಮ್ಮ ಕೈಯಲ್ಲಿ ಬಿಟ್ಟು ಜೀವ ಕಟ್ಟಿಕೊಂಡು ಓಡುವುದು. ಕಾಲುಗಳನ್ನು ಹಿಡಿದು ನೋಡಿದರೆ ಒಂದೊಂದು ಕಾಲಿನಲ್ಲಿ ಐದೈದು ಕಿರಿ ಬೆರಳುಗಳು ಕಾಣಿಸುತ್ತವೆ. ಈ ಚಿಕ್ಕ ಬೆರಳುಗಳ ತುದಿಯಲ್ಲಿ ಮೊನಚಾದ ಕೂರುಗುರುಗಳಿವೆ. ಈ ಉಗುರುಗಳನ್ನು ಹಲ್ಲಿಯು ಬೆಕ್ಕಿನಂತೆ ಪಾದದ ಒಳಗೆ ಎಳೆದುಕೊಳ್ಳಬಹುದು. ಉಗುರುಗಳ ತುದಿಗಳು ಬಲು ಹದವಾಗಿಯೂ ಮೊನಚಾಗಿಯೂ ತೆಳುವಾಗಿಯೂ ಇರುವುದರಿಂದ ನಮ್ಮ ಕಣ್ಣಿಗೆ ಅತಿ ನುಣುಪಾಗಿ ತೋರುವ ಸುಣ್ಣ ಬಳಿದ ಗೋಡೆಯಾದರೂ ಸಾವಿರಾರು ಚಿಕ್ಕ ಚಿಕ್ಕ ಹೊಂಡಗಳಿರುವ ಅಂಗಳದಂತೆ ಕರಕಲಾಗಿದ್ದು, ಉಗುರುಗಳಿಂದ ಒತ್ತಿಹಿಡಿಯುವುದಕ್ಕೆ ಅವಕಾಶವನ್ನು ಕೊಡುವುದು. ಒಂದು ವೇಳೆ ಕಾಲು ಜಾರಿದರೆ, ಕೆಳಕ್ಕೆ ಬೀಳದ ಹಾಗೆ ಗೋಡೆಯನ್ನು ಅಂಟಿಕೊಳ್ಳಲು ಹಲ್ಲಿಯು ಇನ್ನೊಂದು ಉಪಾಯವನ್ನು ಮಾಡುತ್ತದೆ. ಮಕ್ಕಳು ಪಂಚಪಾತ್ರೆಯನ್ನು ಬಾಯಿಯ ಬಳಿಯಲ್ಲಿ ಅಮುಕಿ ಹಿಡಿದು ಒಳಗಿನ ಗಾಳಿಯನ್ನು ಸೇದಿಕೊಂಡು ಪಾತ್ರೆಯನ್ನು ಬಿಗಿ ಹಿಡಿದು ಆಡುವುದನ್ನು ನಾವು ನೋಡುತ್ತೇವೆ. ಕರಡೆಯೊಳಗಿನ ಗಾಳಿಯನ್ನು ಯಂತ್ರದ ಮೂಲಕವಾಗಿ ಪೂರಾ ತೆಗೆದು ಬಿಟ್ಟರೆ, ಮುಚ್ಚಳವನ್ನು ತೆಗೆಯಬೇಕಾದರೆ, ಹಲವು ಜನಗಳು ಇಕ್ಕಡೆಯಿಂದ ಎಳೆದರೂ ಕರಡಿಗೆಯು ಬಾಯಿ ಬಿಡಲಾರದು. ಹಲ್ಲಿಗೆ ಪಾದದ ಕೆಳಕ್ಕೆ ಸಿಂಬಿಯಂತಿದೆ. ಹಲ್ಲಿಯು ಈ ದುಂಡಗಾದ ಸಿಂಬಿಯನ್ನು ಗೋಡೆಗೆ ಒತ್ತಿಟ್ಟು ಅದರ ಕೇಂದ್ರವನ್ನು ಮೇಲಕ್ಕೆ ಎಳೆದು ಬಿಡುತ್ತಲೆ, ಗೋಡೆಗೂ ಸಿಂಬಿಗೂ ನಡುವಿನಲ್ಲಿದ್ದ ಗಾಳಿಯು ಹೋಗಿಬಿಡುತ್ತದೆ. ಆಗ ಸಿಂಬಿಯು, ಮಗುವಿನ ಮೋರೆಯಲ್ಲಿ ಪಂಚಪಾತ್ರೆಯು ಅಂಟಿಕೊಳ್ಳುವಂತೆ, ಗೋಡೆಯನ್ನು ಬಿಗಿ ಹಿಡಿಯುತ್ತದೆ. ಮಗುವು ಒಳಗಿನಿಂದ ಉಸಿರು ಬಿಡುತ್ತಲೇ ಪಾತ್ರೆಯು ಬೀಳುವ ಹಾಗೆ ಹಲ್ಲಿಯು ಸಿಂಬಿಯ ಕೇಂದ್ರವನ್ನು ತನಗೆ ಬೇಕಾದಾಗ ಸಡಲಿಸಿಬಿಟ್ಟು ಮುಂದರಿಸುತ್ತದೆ. ಓಡುವಾಗ ಕಾಲುಗಳ ಹಿಡಿತಕ್ಕೆ ಅನುಕೂಲವಾಗುವಂತೆ ಮೈಯನ್ನು ತಿರುವು ಮುರುವು ಮಾಡಿ ಸರಾಗವಾಗಿ ಹೋಗುತ್ತದೆ. ಚುಕ್ಕಾಣಿಯು ದೋಣಿಯನ್ನು ಬೇಕಾದ ಕಡೆಗೆ ತಿರುಗಿಸುವಂತೆ ಬಾಲವು ಹಲ್ಲಿಗೆ ಓಡಾಟದಲ್ಲಿ ಸಹಾಯವಾಗುತ್ತದೆ.

ಹಲ್ಲಿಯ ಆಟವನ್ನು ಇರುಳು ನೋಡಬೇಕು. ಅದು ನಮ್ಮ ನಾಟಕದ ವೇಷಗಾರರಂತೆ ಹಗಲೆಲ್ಲ ಕತ್ತಲು ಮೂಲೆಯಲ್ಲಿ ಅವಿತುಕೊಂಡು ನಿದ್ದೆಮಾಡಿ, ದೀಪ ಹಚ್ಚುತ್ತಲೇ ರಂಗಭೂಮಿಗೆ ಇಳಿಯುತ್ತದೆ. ಶಲಭವಧೆಯಲ್ಲಿ ಮುಖ್ಯಪಾತ್ರವು ಮುಸಲಿಯೆ. ಮೊತ್ತಮೊದಲು ಮುಸಲಿಯು ಧ್ಯಾನಾರೂಢನಾ

ದಂತೆ ನಿಶ್ಚಲಿತವಾಗಿದ್ದು ಸುತ್ತಲೂ ಹರಿದು ಹಾರಿ ಪ್ರಪಂಚಕ್ಕೆ ಬಾಧೆಯನ್ನುಂಟುಮಾಡುವ ಸಾವಿರಾರು ಶಲಭಾಸುರರನ್ನು ತಲೆಯಲ್ಲಿ ಕೆತ್ತಿದಂತಿರುವ ದೊಡ್ಡದಾದ ಅಲುಗು ಕಣ್ಣುಗಳಿಂದ ಹೊಂಚಿ ನೋಡುವುದು. ಮುಸಲಿಗೆ ನಮ್ಮ ಹಾಗೆ ಕಿವಿಯಿಲ್ಲದಿದ್ದರೂ, ಕಣ್ಣುಗಳ ಹಿಂದುಗಡೆಯಲ್ಲಿ ಎರಡು ರಂಧ್ರಗಳಿವೆ. ಇವುಗಳ ಮೂಲಕವಾಗಿ ಹಲ್ಲಿಗೆ ತುಸು ಸದ್ದಾದರೂ ಕೇಳಿಸುತ್ತದೆ. ಕೂಡಲೇ ಮುಸಲಿಯು ಕತ್ತನ್ನು ನೀಡಿ ಕಣ್ಣನ್ನು ಕೆರಳಿಸಿ ಬಾಯನ್ನು ಅಗಲಿಸಿ ಬಿರ್ರೆಂದು ಮಂಡಳಿಸುತ್ತಲಿರುವ ಶಲಭಗಳ ಮೇಲೆ ಧೀಂಕಿಟ್ಟು ಅವನ್ನು ಸಂಹಾರಮಾಡುವುದು. ಬಳಿಕ ತನ್ನ ತಲೆಗಿಂತಲೂ ಗಾತ್ರವಾಗಿರುವ ಹುಳಗಳನ್ನು ಆದರೂ ತುತ್ತುತುತ್ತಾಗಿ ನುಂಗಿಬಿಡುವುದು.

ಹಲ್ಲಿಯು ಸತ್ತ ಹುಳಗಳನ್ನು ಮುಟ್ಟದು; ಅದು ಕ್ರಿಮಿಕೀಟಗಳನ್ನೇ ಕೊಂದು ತಿನ್ನುವದು. ಈ ಕೃತ್ಯವು ಮಹಾ ಹಿಂಸೆ ಎಂದು ತೋರಬಹುದಾದರೂ, ಹಲ್ಲಿಯು ಹೀಗೆ ಹುಳಗಳನ್ನು ಸಂಹರಿಸದಿದ್ದರೆ, ಕೀಟದ ಕಾಟವು ಮನೆಯಲ್ಲಿ ಎಷ್ಟಾಗುತ್ತಿತ್ತೋ ಹೇಳಬರುವುದಿಲ್ಲ. ಹಲ್ಲಿಯು ವಿಷಕರ ಜಂತುವೆಂದು ಅದರ ಉಚ್ಚಿಷ್ಟವು ಮರಣಕರವೆಂದೂ ಹೇಳುವ ಮಾತು ಸುಳ್ಳಾಗಿದೆ. ಅದು ಆಕಾರದಲ್ಲಿ ಕುರೂಪಿಯೆಂಬುದೇನೋ ನಿಜ. ಅದರ ಮುಸುಕಾದ ಬಣ್ಣ, ವಿಕಾರವಾದ ತಲೆ, ತಣ್ಣಗಾದ ಮೈ, ಇವುಗಳಿಂದ ಹಲ್ಲಿಯು ಜನಗಳಿಗೆ ಅಷ್ಟು ಪ್ರೀತಿಪಾತ್ರವಾಗಿಲ್ಲ. ಅದರಲ್ಲಿ ಒಂದು ದುರ್ಗುಣವಿದೆ. ಹಲ್ಲಿಯು ಸುಮ್ಮನೆ ಬಿದ್ದುಕೊಂಡಿರುವಾಗ ಕೂಡಾ ಏನನ್ನೊ ನುಂಗುವಂತೆ ಬಾಯಿಂದ ಮುಕ್ಕುತ್ತಿರುವ ದುರಭ್ಯಾಸವೂ ಅದಕ್ಕುಂಟು. ಇದರಲ್ಲಿ ವಿಚಿತ್ರವೇನೂ ಇಲ್ಲ. ನಾವು ಉಸಿರು ಸೇದಿಕೊಳ್ಳುವಾಗ ಹೀಗೆಯೆ ಮಾಡುತ್ತೇವೆ. ಹೊರಗಣ ವಾಯುವನ್ನು ನಾವು ಸೊಳ್ಳೆಗಳ ಅಥವಾ ಬಾಯಿಯ ಮೂಲಕ ಸೇದಿಕೊಳ್ಳುತ್ತಲೇ ಗಾಳಿಯು ಒಳಗಿನ ಶ್ವಾಸ ಕೋಶಗಳಲ್ಲಿ ಸೇರಿ ಎದೆಯು ಉಬ್ಬೇರುತ್ತದೆ. ಗಾಳಿಯನ್ನು ಸೇದಿ ಹೊರಬಿಡುವಾಗ ಎದೆಯು ಮುದುಡಿಕೊಳ್ಳುತ್ತದೆ. ಹಲ್ಲಿಗೆ ಪಕ್ಕೆಲುಬುಗಳು ಇಲ್ಲದಿದ್ದುದರಿಂದ, ನಮ್ಮ ಹಾಗೆ ಫುಪ್ಫುಸಗಳನ್ನು ಉಬ್ಬಿಸಲಾರದೆ ಗಾಳಿಯನ್ನು ಗುಟುಕು ಗುಟುಕಾಗಿ ಹೀರುತ್ತದೆ. ಹಲ್ಲಿಯು ಬಾಯಿಯನ್ನು ಮುಚ್ಚಿಕೊಂಡು ಸೊಳ್ಳೆಗಳ ಮೂಲಕವಾಗಿ ಗಾಳಿಯನ್ನು ಸೇದಿಕೊಂಡು ಒಂದೊಂದೇ ಗುಟುಕನ್ನು ಕೆಳಕ್ಕೆ ತಳ್ಳಿಬಿಡುತ್ತದೆ. ಇಷ್ಟು ಪ್ರಯತ್ನಪಟ್ಟರೂ ಅದು ಒಳಕೊಳ್ಳುವ ಗಾಳಿಯು ಅದರ ನೆತ್ತರನ್ನು ಬಿಸಿಮಾಡಲು ಸಾಕಾಗುವುದಿಲ್ಲ. ನಮ್ಮ ನೆತ್ತರು ಬೆಚ್ಚಗಿರಲು ನಾವು ಉಸಿರಾಡುವುದೇ ಕಾರಣವಾಗಿದೆ. ನಾವು ಎತ್ತರವಾದ ಗುಡ್ಡ

ವನ್ನು ಹತ್ತುವಾಗ ಉಸಿರಾಡುವದು ಹೆಚ್ಚಾಗಿ, ಒಲೆಯ ಮೇಲಿಟ್ಟ ನೀರಿನಂತೆ ಮೈಯ ನೆತ್ತರು ಬೆಚ್ಚನಾಗುವದು. ಹಲ್ಲಿಯು ಎಳಕೊಳ್ಳುವ ಗಾಳಿಯು ಅದರ ಜೀವನಾಧಾರಕ್ಕೆ ಮಾತ್ರ ಸಾಲುವದಲ್ಲದೆ ಅದರ ತಣ್ಣಗಾದ ನೆತ್ತರನ್ನು ಬೆಚ್ಚಗಾಗಿಸಲು ಸಾಕಾಗುವದಿಲ್ಲ.

## ಅ ಭ್ಯಾ ಸ

**೧. ಕಠಿಣ ಶಬ್ದಗಳ ಅರ್ಥ :—**

ಗ್ರಹಗೋಧಿಕೆ—ಹಲ್ಲಿ. ಉಡು—ಹಲ್ಲಿಯ ಜಾತಿಗೆ ಸೇರಿದ ಹಲ್ಲಿಗಿಂತ ದೊಡ್ಡದಾಗಿದ್ದು ಕಾಡಿನಲ್ಲಿ ವಾಸಿಸುವ ಪ್ರಾಣಿ. ಹಿಂದಿನ ಕಾಲದಲ್ಲಿ ಕೋಟೆಯನ್ನು ಹತ್ತಲು ಇದನ್ನು ಉಪಯೋಗಿಸುತ್ತಿದ್ದರು. ನೆತ್ತರು—ರಕ್ತ. ಚುಕ್ಕಾಣಿ—ದೋಣಿಯನ್ನು ಬೇಕಾದ ಕಡೆಗೆ ತಿರುಗಿಸುವ ಸಾಧನ. ಶಲಭ—ಪತಂಗ. ಮುಸಲಿ—ಹಲ್ಲಿ. ಮಂಡಳಿಸು—ಸುತ್ತು. ಉಚ್ಛಿಷ್ಟ—ಎಂಜಲು. ಫುಪ್ಪಸ—ಶ್ವಾಸಕೋಶ. ಮರುಳು—ಹುಚ್ಚು, ಭ್ರಾಂತಿ. ಟೊಪ್ಪಿ—ಟೋಪಿ. ಕೂರುಗುರು—ಹರಿತವಾದ ಉಗುರು. ಕರಕಲು—ನುಣುಪು ಇಲ್ಲದ, ಸುಟ್ಟುಹೋದ, ಹರುಕು ಬುರುಕಾದ. ಕರಡಿ—ಪಾತ್ರವಿಶೇಷ, ಭರಣಿ (ಒಂದು ಬಗೆಯ ವಾದ್ಯ).

**೨. ಇವುಗಳ ಸಂದರ್ಭ ಮತ್ತು ಅರ್ಥಗಳನ್ನು ವಿವರಿಸಿ :—**

೧. ನಮ್ಮ ಪೂರ್ವಿಕರು ಹಲ್ಲಿಯನ್ನು ಜೋಯಿಸನೆಂದು ಭಾವಿಸಿದ್ದರು.
೨. ದುರ್ಗೆಯಂತೆ ಇದಕ್ಕೆ ಎಂಟು ಕೈಗಳೂ ಇಲ್ಲ; ಭೀಕರ ಮುಖವೂ ಇಲ್ಲ.
೩. ಶಲಭ ವಧೆಯಲ್ಲಿ ಮುಖ್ಯ ಪಾತ್ರವು ಮುಸಲಿಯೆ.

**೩. ಪ್ರಶ್ನೆಗಳು :—**

೧. ಹಲ್ಲಿಯು ಯಾವ ಮನೆತನಕ್ಕೆ ಸೇರಿದ್ದು? ಜನಗಳಿಗೆ ಅದರ ಮೇಲಿರುವ ನಂಬಿಕೆಯನ್ನು ವಿವರಿಸಿ.
೨. ಹಲ್ಲಿ ಗೋಡೆ ಹತ್ತುವುದನ್ನು ವಿವರಿಸಿ.
೩. ಹಲ್ಲಿ ಹೇಗೆ ಆಹಾರವನ್ನು ಹಿಡಿಯುತ್ತದೆ?
೪. ಹಲ್ಲಿಯ ವಿಷಯವಾಗಿ ಒಂದು ಪ್ರಬಂಧ ಬರೆಯಿರಿ.

# ಧರ್ಮಸಾರಥಿ

## ಸಿದ್ದವನಹಳ್ಳಿ ಕೃಷ್ಣಶರ್ಮ

ಸಿ. ಕೃಷ್ಣಶರ್ಮರು ಚಿತ್ರದುರ್ಗ ಜಿಲ್ಲೆಯ ಸಿದ್ದವನ ಹಳ್ಳಿಯಲ್ಲಿ ಹುಟ್ಟಿದವರು. ಸುಮಾರು ಮೂವತ್ತು ವರ್ಷಗಳಿಂದ ತಮ್ಮ ಬರವಣಿಗೆಯ ಮೂಲಕ ಕನ್ನಡಕ್ಕೆ, ಕನ್ನಡ ನಾಡಿಗೆ ಸೇವೆ ಸಲ್ಲಿಸುತ್ತಿದ್ದಾರೆ. ಕೆಲವು ಕಾಲ ಶಿಕ್ಷಣ ವೃತ್ತಿಯಲ್ಲಿದ್ದು, ಅನಂತರ ಸ್ವಾತಂತ್ರ್ಯಸಂಗ್ರಾಮದಲ್ಲಿ ದುಮುಕಿದರು. ಸ್ವಲ್ಪ ಕಾಲ ಸೇವಾಗ್ರಾಮದಲ್ಲಿ ಗಾಂಧೀಜಿಯ ಹತ್ತಿರ ಇದ್ದು, ಗಾಂಧೀ ಸಾಹಿತ್ಯವನ್ನು ಚೆನ್ನಾಗಿ ಅಭ್ಯಸಿಸಿದರು. ಗಾಂಧೀಜಿಯವರ ತತ್ತ್ವವಿಚಾರವನ್ನು ಸುಲಭವಾಗಿ ಗ್ರಹಿಸಿಕೊಂಡಿರುವ, ತಾವು ಗ್ರಹಿಸಿದುದನ್ನು ಸರಳವಾಗಿ ಸಾಮಾನ್ಯರಿಗೂ ಗ್ರಾಹ್ಯವಾಗುವಂತೆ ಬರೆಯಬಲ್ಲ, ಹೇಳಬಲ್ಲ, ಅತ್ಯಲ್ಪ ಸಂಖ್ಯೆಯ ಸಾಹಿತಿಗಳಲ್ಲಿ ಇವರೂ ಒಬ್ಬರು. ಅವರಲ್ಲಿ ಪ್ರಮುಖರೆಂದರೂ ತಪ್ಪಾಗಲಾರದು. 'ವರ್ಧಾಯಾತ್ರೆ,' 'ಪರ್ಣಕುಟಿ', 'ದೀಪಮಾಲೆ'—ಇವೇ ಮೊದಲಾದ ಗ್ರಂಥಗಳು ಅವರ ವಿದ್ವತ್ತಿಗೆ, ವಿಚಾರಪರತೆಗೆ ಸಾಕ್ಷಿಯಾಗಿವೆ. ಅವರ ಶೈಲಿಯಲ್ಲಿ ಆಡಂಬರವಿಲ್ಲ, ಸೌಂದರ್ಯವಿದೆ; ವಿಚಾರ ಗಹನವಾಗಿದ್ದರೂ ಭಾಷೆ ಸರಳವಾಗಿದೆ. ಆಂಗ್ಲಭಾಷೆಯಲ್ಲಿ ಗಾಂಧೀಜಿ ಎಷ್ಟು ಸುಲಭವಾಗಿ ಸರಳವಾಗಿ ಬರೆಯಬಲ್ಲರೋ ಹಾಗೆಯೇ ಇವರು ಕನ್ನಡದಲ್ಲಿ ಅಷ್ಟು ಸುಲಲಿತವಾಗಿ, ನಿರರ್ಗಳವಾಗಿ, ಸರಳವಾಗಿ ಬರೆಯಬಲ್ಲರು.

'ಧರ್ಮಸಾರಥಿ' ಪ್ರಬಂಧವನ್ನು ಅವರ 'ಪರ್ಣಕುಟಿ' ಯಿಂದ ಉದ್ಧರಿಸಲಾಗಿದೆ.

ಸೀತಾದೇವಿ ವಿನೋದಕ್ಕಾಗಿ ನಾರುಡೆ ಉಟ್ಟಿದಾಳೆ. ಶ್ರೀರಾಮಚಂದ್ರ ಅದನ್ನು ನೋಡಿ ನಕ್ಕು ತಾನೂ ಉಡುತ್ತಿದಾನೆ. ಮುಂದೆ ತಮಗೆ ವನವಾಸ ಕಾದಿದೆ. ಈ ನಾರುಡೆ ರಾಮಾಯಣಕ್ಕೆ ಪೀಠಿಕೆಯೇ ಆಗಲಿದೆ. ಅದು ಯಾವುದನ್ನೂ ರಾಘವನು ಯೋಚಿಸುತ್ತಿಲ್ಲ. ಹರ್ಷದಿಂದ ನಾರುಡೆಯನ್ನು ವರ್ಣಿಸುತ್ತಿದಾನೆ.

**ತಪಸ್ಸಂಗ್ರಾಮ ಕವಚಂ ನಿಯಮದ್ವಿರದಾಂಕುಶಃ ।**
**ಖಲೀನಮಿಂದ್ರಿಯಾಶ್ವಾನಾಂ ಗೃಹ್ಯತಾಂ ಧರ್ಮಸಾರಥಿಃ ॥**

ಇದು ತಪಸ್ಸೆಂಬ ಯುದ್ಧಕ್ಕೆ ಕವಚ; ನಿಯಮವೆಂಬ ಆನೆಗೆ ಅಂಕುಶ; ಇಂದ್ರಿಯಗಳೆಂಬ ಕುದುರೆಗಳಿಗೆ ಕಡಿವಾಣ; ಧರ್ಮಕ್ಕೆ ಸಾರಥಿ. ಸರಲ ಜೀವನ ದೀಕ್ಷಾಜೀವನ. ದೀಕ್ಷೆಜೀವನಕ್ಕೆ ಶಾರೀರ ತಪವೂ ಅಗತ್ಯ. ಈ

ಮಾತನ್ನು ರಾಘವನು ತನ್ನ ಸತಿಗೆ ತಿಳಿಸುತ್ತಾನೆ. ಭಾಸ ಕವಿಯ ಪ್ರತಿಮಾ ನಾಟಕದಲ್ಲಿ ಈ ಸನ್ನಿವೇಶ ತುಂಬ ಹೃದ್ಯವಾಗಿದೆ.

ಗಾಂಧೀಜೀ ಶ್ರೀರಾಮುನನ್ನು ನಂಬಿದವರು. ವ್ರತಜೀವನದಲ್ಲಿ ಪೂರಾ ನಿಷ್ಠೆಯುಳ್ಳವರು. ಜೀವನವೇ ಅವರಿಗೊಂದು ವ್ರತ; ಒಂದು ದೀಕ್ಷೆ. ಆದುದರಿಂದ ಅವರಿಗೆ ಬಾಳಿನಲ್ಲಿ ತಪಸ್ಸೇ ಪ್ರಧಾನ. ಅಂಥವರಿಗೆ ಖಾದೀ ಬಟ್ಟೆಯಲ್ಲಿ ಪವಿತ್ರತೆ ನಿಯಮ ನಿಷ್ಠೆಗಳು ಕಂಡರೆ ಏನಾಶ್ಚರ್ಯ? ರಾಘವನಿಗೆ ಇದ್ದಂತೆ ಗಾಂಧೀಜಿಗೂ ಖಾದಿ ತಮ್ಮ ತಪಸ್ಸಂಗ್ರಾಮದ ಕವಚ; ಪವಿತ್ರ ಜೀವನದ ಅಂಕುಶ; ಸ್ವಾರ್ಥ ಲೋಭಗಳಿಗೆ ಕಡಿವಾಣ; ಅಹಂಕಾರ ಮಮಕಾರಗಳಿಗೆ ಮುಳ್ಳು. ಖಾದಿ ಇಲ್ಲದೆ ಅವರಿಗೆ ಬಾಳೇ ಶೂನ್ಯ. ರಾಟಿಯಿಂದಲೇ ಅವರಿಗೆ ಮುಕ್ತಿ. ಆಗ ನಾರು; ಈಗ ದಾರ. ಎರಡೂ ಸಂದರ್ಭಗಳಲ್ಲಿ ಕಾಣುವುದು ಒಂದೇ ಮನೋವೃತ್ತಿ.

ಶ್ರೀರಾಮಚಂದ್ರನಿಗಿಂತ ಮಹಾತ್ಮರ ಕೈ ಒಂದು ಮೊಳ ದೂರ ಬಂದಿದೆ. ರಾಮನಿಗೆ ನಾರುಡೆ ವೈಯಕ್ತಿಕ ನಿಷ್ಠೆಯಾಗಿತ್ತು. ಇವರು ಇಡೀ ಸಮಾಜಕ್ಕೇ ಆ ನಿಷ್ಠೆಯನ್ನು ಕೊಡುತ್ತಿದ್ದಾರೆ; ಆ ವ್ರತವನ್ನು ತೊಡಿಸುತ್ತಿದ್ದಾರೆ. ಖಾದಿಯೇ ಸಮಾಜಸೌಭಾಗ್ಯದ ತಳಹದಿ ಎನ್ನುತ್ತಾರೆ. ರಾಮನಿಗೆ ವನವಾಸಕ್ಕೆ ಮಾತ್ರ ಅದರ ಉಪಯೋಗ. ಗಾಂಧೀಜಿಗೆ ಯಾವಜ್ಜೀವವೂ ಅದೇ ಆಸರೆ. ನಿಜವಾಗಿಯೂ ಗಾಂಧೀ ಧರ್ಮಕ್ಕೆ–ಅಂಥದೊಂದು ಇದ್ದರೆ–ಖಾದಿಯೇ ಸರಿಯಾದ ಸಾರಥಿ!

ಖಾದಿಯ ಬಗ್ಗೆ ಗಾಂಧೀಜಿಗೆ ಎಷ್ಟು ನಂಬಿಕೆ ಇದೆ ಎಂಬುದನ್ನು ನಾಡಿಗೆ ನಾಡೇ ಬಲ್ಲದು. ಖಾದಿ ಬಡಬಗ್ಗರ ಸ್ವರಾಜ್ಯಮಂತ್ರ! ಲೋಕಮಾನ್ಯ ಟಿಳಕರು 'ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕು' ಎಂದು ಸ್ವರಾಜ್ಯ ಮಂತ್ರದ ಮೊದಲ ಅರ್ಧವನ್ನು ಹೇಳಿದರೆ, 'ರಾಟಿಯೇ ಸ್ವರಾಜ್ಯಹಾದಿ' ಎಂದು ಗಾಂಧೀಜೀ ಉತ್ತರಾರ್ಧವನ್ನು ಹೇಳಿದರು. ಸ್ವಾತಂತ್ರ್ಯ ಸಾಧನೆಗಾಗಿ ನಾನಾ ದೇಶಗಳಲ್ಲಿ ನಾನಾ ಕಾರ್ಯಕ್ರಮಗಳನ್ನು ಅವಲಂಬಿಸಿದಾರೆ. ನಮ್ಮ ದೇಶದಲ್ಲೇ ಬೇರೆ ಬೇರೆ ಗುಂಪುಗಳು ಬೇರೆ ಬೇರೆ ಹಾದಿಗಳನ್ನು ಹುಡುಕುತ್ತಿವೆ. ಗಾಂಧೀಜಿಗೆ ಮಾತ್ರ ರಾಟಿ ಇಲ್ಲದೆ ಸ್ವರಾಜ್ಯವಿಲ್ಲ. ಸ್ವರಾಜ್ಯವೆಂದರೆ ಇಂಗ್ಲೀಷರ ಅಧಿಕಾರ ತಪ್ಪಿಸಿ, ದೇಶೀಯರಲ್ಲಿ ಶ್ರೀಮಂತರಾದವರ, ಬಲಿಷ್ಠರಾದವರ ಕೈಗೆ ರಾಜ್ಯ ಕೊಡುವುದು ಅಲ್ಲ. ರಾಗಿ ಬೀಸುವ ಕೈಗೂ ಸ್ವತಂತ್ರತೆ ಬೇಕು; ಬರಿಯ ರಾಯರಿಗಷ್ಟೆ ಅಲ್ಲ ರೈತರಿಗೆ, ಬಡಬಗ್ಗರಿಗೆ ಸ್ವಾತಂತ್ರ್ಯವಿಲ್ಲದ ಸ್ವರಾಜ್ಯ ಸ್ವರಾಜ್ಯವಲ್ಲ, ರಾವಣರಾಜ್ಯ ತಪ್ಪಿ ಕುಂಭಕರ್ಣ

ರಾಜ್ಯ ಆದೀತು. ಗಾಂಧೀಜಿಗೆ ಅಂಥದು ಬೇಕಿಲ್ಲ. ಹಾಗೆ ಮಾಡುವುದು 'ಜನರಿಗೆ ದ್ರೋಹವಾದೀತು.' ಅವರು ಮೂಕ ಜನಜಂಗುಳಿಯ ಪ್ರತಿನಿಧಿ. ಎಲ್ಲ ತರದ ಅನ್ಯಾಯಗಳಿಂದ ತುಳಿಯಲ್ಪಟ್ಟ ಬಡ ಕುರಿಗಳಿಗಾಗಿಯೇ ಅವರ ಇಡೀ ಬಾಳು ದತ್ತವಾಗಿದೆ. ಬಾಳಿನಲ್ಲಿ ಗಳಿಗೆ ಗಳಿಗೆಯೂ ಅವರಿಗೆ ಅದೇ ಚಿಂತೆ. 'ಅವರಿಗಾಗಿ ಬದುಕಬೇಕು; ಅವರಿಗಾಗಿ ಮಡಿಯಬೇಕು. ಎಲ್ಲ ವಿಶ್ವಾಸ ಭಕ್ತಿಗಳಿಗಿಂತ ಬಡವರ ಮೇಲಿನ ಭಕ್ತಿ ವಿಶ್ವಾಸಗಳೇ ನನಗೆ ಹೆಚ್ಚಿನವು. ನೀವೆಲ್ಲರೂ ನನ್ನನ್ನು ಕೈಬಿಟ್ಟರೂ ಸರಿ, ಕೊಂದರೂ ಸರಿ. ಅವರಿಗಾಗಿ ನಾನು ಈ ರಾಟೆಯನ್ನು ಹಿಡಿದೇನು; ಬಿಡಲಾರೆ. ರಾಟೆಯನ್ನು ಬಿಟ್ಟರೆ ಆ ಕೋಟ್ಯನುಕೋಟಿ ಮೂಕಜನ ನಾಶವಾದಾರು. ದೇವರ ಮುಂದೆ ನಾನು ಅದಕ್ಕೆ ಉತ್ತರ ಕೊಡಬೇಕಾದೀತು.'

'ಒರಿಸ್ಸಾಕ್ಕೆ ಹೋಗಿ ಅಲ್ಲಿನ ಜೀವಚ್ಛವಗಳನ್ನು ನೋಡಿ. ಎಂಥ ಭೀಷಣ ದಾರಿದ್ರ್ಯದಲ್ಲಿ ಮುಳುಗಿದಾರೆ ಅವರು. ಆ ಲಕ್ಷೋಪಲಕ್ಷ ಜನರಿಗೆ ಒಂದು ಹಿಡಿ ಅನ್ನ ದೊರೆವ ಮಾರ್ಗ ಹುಡುಕುವುದಲ್ಲವೆ ನಮ್ಮ ಮೊದಲ ಕೆಲಸ?' ಖಾದಿಯೇ ಆ ಮಾರ್ಗ. ಅದು ಬಡವರ ಕಾಮಧೇನು. ಅನಾಥ ವಿಧವೆಯರ ಜೀವನೋಪಾಯ. ಅದಕ್ಕೆ ಬೇಕಾದ ಬಂಡವಾಳವೂ ಅಷ್ಟರಲ್ಲೇ ಇದೆ.

ಹಿಂದೂಸ್ಥಾನದ ಜನ ನಿರುದ್ಯೋಗದ ನರಕದಲ್ಲಿ ಬಿದ್ದಿದಾರೆ. ಮೊದಲು ಅವರಿಗೆ ರಾಟೆಯೇ ಧನವಾಗಿತ್ತು. ನಾಡಿನಲ್ಲಿ ಬಂಗಾರದ ಹೊಗೆ ಆಡುತ್ತಿದ್ದಾಗ ನಮಗೆ ಆಸರೆ ಆಗಿದ್ದುದು ರಾಟೆ. ಮತ್ತೆ ನಾಡಿಗೆ ಆ ಸ್ಥಿತಿ ಬರಲು ಅದೇ ಉಪಾಯ. ಹಿಂದೂಸ್ಥಾನದ ಸ್ವಾತಂತ್ರ್ಯ ಯುದ್ಧಭೂಮಿಯಲ್ಲಿ ಹೋಗಲಿಲ್ಲ. ನಮ್ಮ ರಾಜ್ಯ ಹಾಳಾದುದು ಇಂಗ್ಲೀಷರು ನಮ್ಮ ಕೋಟೆಗಳ ಮೇಲೆ ಗುಂಡಿನ ಮಳೆ ಸುರಿಸಿದಾಗಲಲ್ಲ. ನಮ್ಮ ನೂಲುವ ಜನರ ಹೆಬ್ಬೆರಳನ್ನು ಅವರು ಕತ್ತರಿಸಿದಾಗ; ಅವರಿಗೆ ಸಣ್ಣ ಪುಟ್ಟ ಸಾಲಗಳನ್ನು ಕೊಟ್ಟು ಅವರ ಕಸಬನ್ನು ಹಾಳು ಮಾಡಿದಾಗ. ಹಿಂದೂಸ್ಥಾನದ ಪಾರತಂತ್ರ್ಯದ ಕತೆ ಎಂದರೆ ದಲಾಲಿಗಳ ದರೋಡೆ; ಕಲಿಗಳ ಕದನವಲ್ಲ. ಇದೆಲ್ಲ ಗಾಂಧೀಜಿಯ ಕಣ್ಣಿಗೆ ಕಟ್ಟಿದ ಹಾಗೆ ಮತ್ತೊಬ್ಬರ ಕಣ್ಣಿಗೆ ಕಟ್ಟಿಲ್ಲ.

'ರಾಟೆಯೇ ಜನರ ಸರ್ವಸ್ವ. ಅದು ಮಾಯವಾದಾಗಲೇ ಜನರ ಸ್ವಾತಂತ್ರ್ಯ ಮಾಯವಾಯಿತು. ಬೇಸಾಯಕ್ಕೆ ಜೊತೆಯಾಗಿ, ಆಸರೆಯಾಗಿ ರಾಟೆ ಬೇಸಾಯಕ್ಕೆ ಒಂದು ಗೌರವ ಕೊಟ್ಟಿತು. ವಿಧವೆಯ ಗೆಳತಿ, ಹಸಿದವನಿಗೆ ಅನ್ನ, ಸೋಮಾರಿತನಕ್ಕೆ ಮದ್ದು; ರಾಟೆ ಗ್ರಾಮ ಜೀವನದ

ತಿರುಗಲಿ. ಏಳು ಸಾವಿರ ಹಳ್ಳಿ ಅದರಿಂದ ಸ್ವಸಂಪೂರ್ಣವಾಗಿದ್ದವು. ರಾಟೆ ಹೋದಾಗ ಅದರೊಡನೆ ಕೋಟಿ ವಿದ್ಯೆ ಹೋದವು. ಹಳ್ಳಿಯ ಕೈಗಾರಿಕೆ ಅರಸನಿಲ್ಲದ ಸೇನೆಯಂತೆ ಆಯಿತು. ಇತರ ದೇಶಗಳಲ್ಲಿ ರಾಟೆ ಹೋಯಿತಲ್ಲ. ಅಲ್ಲಿನ ಜನರು ಹೇಗೆ ಸುಖವಾಗಿದಾರೆ? ಎಂದು ಕೇಳಬಹುದು. 'ಅಲ್ಲಿ ಆ ಜನಕ್ಕೆ ಅದರ ಬದಲು ಬೇರೆ ಉದ್ಯೋಗ ಸಿಕ್ಕಿತು. ನಮ್ಮಲ್ಲಿ ಏನಿದೆ?' ಅಲ್ಲಿ ಅವರು ರಾಟೆಯನ್ನು ತಾವೇ ಬಿಟ್ಟರು. ಇನ್ನೊಂದು ಸಿಕ್ಕಮೇಲೆಯೇ ಬಿಡುವ ಯತ್ನಮಾಡಿದ್ದು. ಇಷ್ಟೆಲ್ಲ ಆದರೂ ಅವರಿಗೆ ಸುಖವಿದೆಯೇ ಎಂಬ ಪ್ರಶ್ನೆ ಇದ್ದೇ ಇದೆ. ಅರ್ಥಶಾಸ್ತ್ರವು ಮುರಾರಿಯ ಹಾಗೆ ಮೂರಾಬಟ್ಟೆ ಹಿಡಿಯಬಾರದು. 'ಖಾದೀ ಅರ್ಥಶಾಸ್ತ್ರ, ರಾಜಕಾರಣ, ಸಮಾಜ ಶಾಸ್ತ್ರಗಳಿಗೆ ತೀರಾ ಹತ್ತಿರ ಸಂಬಂಧವುಳ್ಳದ್ದು. ಆ ಸಂಬಂಧ ತರ್ಕ-ವಿಚಾರಕ್ಕೆ ಸಿಗದಂಥದು ಅಲ್ಲ. ರಾಟೆ ಒಂದೇ ಜಗತ್ತಿನಲ್ಲೆಲ್ಲ ಹರಡಿ ಶಸ್ತ್ರಾಸ್ತ್ರಗಳನ್ನು ಮೂಲೆಗೆ ಕೂಡಿಸಬಲ್ಲ ಮಹಾಶಕ್ತಿ!'

ಆಗಲೇ ನಿಜವಾದ ಮಾನವ-ಸಂಸ್ಕೃತಿ ಪ್ರಪಂಚದಲ್ಲಿ ಹರಡೀತು. ಹಿಂಸೆಯ ರಾಕ್ಷಸ ಹತವಾಗಿ ಹೋದಾನು. ಹಿಂದೂಸ್ಥಾನದ ಸಂಸ್ಕೃತಿ ಧರ್ಮವನ್ನು ನಂಬಿ ಅಂಥದೊಂದು ಸ್ವರ್ಣಯುಗವನ್ನು ಕಂಡಿತ್ತು. ಮತ್ತೆ ಬಂದೀತೇನು ಆ ಕಾಲ?

'ಹಿಂದೂಸ್ಥಾನದ ಸಂಸ್ಕೃತಿ ಹಿಂದೂಸ್ಥಾನದ ಹಳ್ಳಿಗಳಲ್ಲಿದೆ. ಯೂರೋಪು ಅಮೆರಿಕಗಳ ನಾಗರಿಕತೆ ನಮ್ಮ ನಾಡಿನ ನಾಲ್ಕು ನಗರಗಳಲ್ಲಿ ಕಂಡೀತಾಗಲಿ, ಅದು ಪರದೇಶೀಯರು ಕಟ್ಟಿದ ಗಾಳಿಗೋಪುರ. ಅದು ಬಹಳ ದಿನ ಬಾಳಲಾರದು. ಕಾಲಗತಿಗೆ ಮಣಿಯದೆ ನಿಲ್ಲಬಲ್ಲ ಸಂಸ್ಕೃತಿ ಎಂದರೆ ಹಳ್ಳಿಗಳ ಕೈಗಾರಿಕೆಯದೇ. ನಮ್ಮ ತ್ರಿಕರಣಸಂಕಲ್ಪ ಇಲ್ಲದೆ ಅದು ಮತ್ತೆ ಮೂಡುವುದು ಸಾಧ್ಯವಿಲ್ಲ. ನನ್ನ ಕಣ್ಣಿಂದ ನೋಡಿದರೆ, ನಿಮಗೆ ಖಾದಿಯ ಬೆಲೆ ತಿಳಿದೀತು. ಹಳ್ಳಿಹಳ್ಳಿಗೂ ಹೋಗಿ ರಾಟೆಯನ್ನೂ ಹಳ್ಳಿಯ ಕೈಗಾರಿಕೆಯನ್ನೂ ಹರಡಿ, ನಿಜವಾದ ಸಂಸ್ಕೃತಿಯನ್ನು ಬಿತ್ತಿರಿ.'

ಈ ಸಂಸ್ಕೃತಿಯಲ್ಲಿ ದೊಡ್ಡ ದೊಡ್ಡ ಯಂತ್ರಗಳಿಗೆ ಸ್ಥಾನವಿಲ್ಲ. ಭಾರೀ ಯಂತ್ರ ಭಸ್ಮಾಸುರನಂತೆ! ಮುಟ್ಟಿದುದನ್ನೆಲ್ಲ ಸುಡುತ್ತದೆ. ತನಗೂ ಸಾವು ತಪ್ಪಿದಲ್ಲ. ತನ್ನಿಂದಲೇ ತಾನು ನಾಶವಾದೀತು. ಸುಖಭೋಗದ ಮೋಹಿನಿ ಆಗಲೇ ಆ ಅಸುರನ ಕಣ್ಣಮುಂದೆ ಸುಳಿದಿದಾಳೆ. ಗಾಂಧೀಜಿಗೆ ಭಾರೀಯಂತ್ರ 'ಮಹಾಪಾಪ'; ಹಾವಿನ ಹುತ್ತದಂತೆ. ಅದರಲ್ಲಿ-ಒಂದೇನು ನೂರೇನು-ಹಾವು ಇದ್ದಾವು. ಆ ಹುತ್ತ ಹೋದಾಗಲೆ ಜಗತ್ತಿಗೆ ಶಾಂತಿ.

ಸಾಮ್ಯವಾದದ ಸಮವಿಭಾಗ ಪದ್ಧತಿ ಅದಕ್ಕೆ ಸರಿಯಾದ ಮದ್ದಲ್ಲ. ಹುತ್ತದಲ್ಲಿ ಹಾವಿರಲು ಕೋಲಿನಿಂದ ಹುತ್ತದ ಬಾಯನ್ನು ಬಡಿದರೆ ಹಾವು ಸತ್ತೀತೆ? * ಯಂತ್ರವು ನಮ್ಮ ಕಾಮದಾಟ ಇದ್ದಹಾಗೆ. ಕಾಮಕ್ಕೆ ಬಲಿಯಾದವರಿಗೆ ಒಂದು ತಾಳಿ ಕಟ್ಟಿದರೆ ಅವರ ಜೀವಕ್ಕೆ ಸರ್ವಾನುಕೂಲವೂ ಆಯಿತೇ? ಹಣ ಸಮವಿಭಾಗ ಮಾಡಿದ ಮಾತ್ರಕ್ಕೆ ಆತ್ಮ ಸ್ವಾತಂತ್ರ್ಯ ಸಿಕ್ಕೀತೇ? 2

ಹಾಗಾದರೆ ಮನುಷ್ಯ ಮೃಗದಂತೆ ಇರಬೇಕೆ? ಅವನಿಗೆ ಯಾವ ಉಪಕರಣವೂ ಬೇಡವೇ? ಅಡಿಗೆ ಮಾಡುವ ಒಲೆ, ಹೊಲ ಉಳುವ ನೇಗಿಲು, ದಾರ ತೆಗೆವ ರಾಟಿ–ಇವೆಲ್ಲ ಯಂತ್ರಗಳಲ್ಲವೆ? ನೀರು ಸೇದಲು ಗಾಲಿ, ಕಟ್ಟಿಗೆ ಒಡೆಯಲು ಕೊಡಲಿ, ಹುಲ್ಲು ಕುಯ್ಯಲು ಕುಡಗೋಲು ಇಲ್ಲದಿದ್ದರೆ ಬದುಕು ಹೇಗೆ ಸಾಗಬೇಕು?

ಹೌದು, ಈ ಉಪಕರಣ ಬೇಕೇಬೇಕು. ಮನುಷ್ಯ ಜೀವನವನ್ನು ಉತ್ತಮಗೊಳಿಸಲು ಸಾವಿರಾರು ವರ್ಷಗಳಿಂದ ಮಾಡಿದ ಸಾಧನೆಯ ಫಲ ಅವು. ಗಾಂಧೀಜೀ ಹುಚ್ಚುಹುಚ್ಚಾಗಿ ಯಾವ ಯಂತ್ರವೂ ಬೇಡ ಎನ್ನುವುದಿಲ್ಲ. 'ಉಂಟೀ? ನಮ್ಮ ಮೈಯೇ ಒಂದು ಕುಶಲವಾದ ಯಂತ್ರವಲ್ಲವೆ! ರಾಟಿಯೂ ಯಂತ್ರ. ಹಲ್ಲಿನ ಸಂದಿಯೊಳಗೆ ಸೇರಿದ ಕಸ ತೆಗೆವ ಕಡ್ಡಿಯೂ ಒಂದು ಯಂತ್ರವೇ. ಯಂತ್ರವನ್ನಲ್ಲ ನಾ ಬೇಡ ಎನ್ನುವುದು; ಯಂತ್ರವೆಂಬ ಮಾಯಾಮೃಗದ ಭ್ರಾಂತಿಯನ್ನು. ಶರೀರ ಶ್ರಮವನ್ನು ಕಡಿಮೆಮಾಡಬೇಕೆಂಬ ಭ್ರಾಂತಿ ಬೆಳೆದುಹೋಗುತ್ತಿದೆ. ದುಡಿತ ಕಡಿಮೆ ಆಗಿ ಆಗಿ, ಜನ ಹಸಿವಿನಿಂದ ಸಾಯಲಾಗಿ ಬೀದಿಯಲ್ಲಿ ಬೀಳುತ್ತಾರೆ. ಸಾವಿರಾರು ಜನರ ಬೆನ್ನಿನ ಮೇಲೆ ಒಂದು ಹಿಡಿ ಜನ ಸವಾರಿ ಮಾಡಲು ಇಂದು ಯಂತ್ರ ಅನುಕೂಲ ಸಾಧನವಾಗಿದೆ. ಇದೆಲ್ಲದರ ಮೂಲ ಉದ್ದೇಶ ದುಡಿತ ಕಡಿಮೆ ಮಾಡುವ ಔದಾರ್ಯವಲ್ಲ; ಲೋಭ. ಇದನ್ನು ನಾನು ಸಹಿಸಲಾರೆ. ನನಗೆ ಮುಖ್ಯವಾದುದು ಮಾನವ ಜೀವನ. ಯಂತ್ರ ತಾನು ಮನುಷ್ಯನ ಕೈಕಾಲು ಕಟ್ಟಿಹಾಕಿದರೆ ಅದು ಸರಿಯಲ್ಲ.'

ಯಂತ್ರಗಳಲ್ಲೂ ನಾನಾ ರೀತಿ. 'ಬಟ್ಟೆ ಹೊಲಿವ ಯಂತ್ರ ಜನರಿಗೆ ಉಪಕಾರಿ! ಅಂಥದು ಬೇಕು. ಹಾಗಾದರೆ ಬೈಸಿಕಲ್ ಮೋಟಾರುಗಳು ವೇಗದಿಂದ ಓಡಾಡಬೇಕಾದ ಅಗತ್ಯವೇನಿದೆ? 'ಸೂಜಿಯೋ, ಅದು

---

* ಒಡಲ ದಂಡಿಸಿ ಮುಕ್ತಿ ಪಡೆವನೆಂಬುವ ಹೆಡ್ಡ ।
ಬಡಿಗೆಯಲ್ಲಿ ಹುತ್ತ ಹೊಡೆಯಲಡಗಿಹ ಸರ್ಪ ।
ಮಡಿಯುವುದೇ ಹೇಳು ಸರ್ವಜ್ಞ ॥

ಹಾಗಲ್ಲ. ಬಹಳ ಮುಖ್ಯ.' ಈ ಸೂಜಿಗಳನ್ನೂ ಹೊಲಿವ ಯಂತ್ರಗಳನ್ನೂ ಮಾಡಲು ಕಾರಖಾನೆಗಳು ಬೇಡವೆ ಮತ್ತೆ? ಇದೊಂದು ಕೌಪೀನ ಸಂರಕ್ಷಣಾರ್ಥದ ಪಟಾಟೋಪದ ಕತೆಯೇ ಆದೀತಲ್ಲ. 'ನಿಜ. ಕಾರಖಾನೆ ಬೇಕಾದೀತು. ಅದನ್ನು ರಾಷ್ಟ್ರದ ಆಡಳಿತಕ್ಕೆ ಒಳಪಡಿಸಿ ನಡಿಸಬಹುದು. ಲೋಭ ದುರಾಸೆಗಳಲ್ಲದೆ ಮನುಷ್ಯನಿಗೆ ಸಹಾಯವಾಗುವುದು ಯಂತ್ರದ ಉದ್ದೇಶವಾಗಿರಬೇಕು. ಮೈಯೇ ಯಂತ್ರ. ಯಂತ್ರವಾಗಲಿ ಮೈಯಾಗಲಿ ಆತ್ಮವಿಕಾಸಕ್ಕೆ ಅನುಕೂಲವಾಗಬೇಕು. ಪ್ರತಿಕೂಲವಾದರೆ ತ್ಯಾಜ್ಯವೇ ಸರಿ.'

ಗಾಂಧೀಜಿಗೆ ಅಹಿಂಸೆಯೇ ಧರ್ಮ. ಭಾರೀ ಕಾರಖಾನೆಗಳು ಅಹಿಂಸೆಯ ಹಾದಿಗೆ ಹೊಂದುವುದಿಲ್ಲ. ಅದು ಆರ್ಥಿಕ ಹಿಂಸೆಯ ರಾಕ್ಷಸ. ಕಾರಖಾನೆಗಳ ತಳಪಾಯವೇ ಹಿಂಸೆ, ಆಕ್ರಮಣ. ಪಡುವಣ ನಾಗರಿಕತೆಗೆ ಅಂಟಿದ ರೋಗ ಇದು. ಅದನ್ನು ದೂರ ಇರಿಸಬೇಕು. ಅದಕ್ಕೆ ಬೆರಳೇ ಕೊಡಬಾರದು.

ಆದರೆ ದಿನದಿನಕ್ಕೆ ಯಂತ್ರ ನಮ್ಮನ್ನು ಸೆಳೆಯುತ್ತಿದೆ. ನಮ್ಮ ಅನುಕೂಲಕ್ಕಾಗಿ ಹೊಸ ಹೊಸ ಯಂತ್ರ ಬರುತ್ತಲೇ ಇವೆ. ಈ ಪ್ರವಾಹವನ್ನು ನಿಲ್ಲಿಸಲು ಸಾಧ್ಯವೆ? ಎಲ್ಲರೂ ಜಾಣರಾಗಿ ಉಣ್ಣುತ್ತಿರಲು ನಾವು ಮಾತ್ರ ಉಪವಾಸ ಬೀಳಬೇಕೇ ಈ ದರಬಾರಿನಲ್ಲಿ? ಈ ಉಪವಾಸ ಯಾವ ದೇವರಿಗೆ ಪ್ರೀತಿ? ಗಾಂಧೀಜಿಗೆ 'ಈ ದಾಳಿ ನಿಲ್ಲಿಸಲು ಅಸಾಧ್ಯವೆನಿಸಿಲ್ಲ. ಅದಕ್ಕೆ ಹಿಂದುಸ್ಥಾನಕ್ಕಿಂತ ಹೆಚ್ಚಿನ ಪುಣ್ಯಭೂಮಿ ಇಲ್ಲ. ಇಲ್ಲಿಯೂ ಆ ಹುಚ್ಚು ಹೊಳೆಗೆ ಅಡ್ಡ ಕಟ್ಟುವುದಾಗದಿದ್ದರೆ ಹಿಂದುಸ್ಥಾನವೂ ಅದರ ಹಿಂದೆಯೇ ಇಡೀ ಜಗತ್ತೂ ನಾಶವಾಗಿ ಹೋದೀತು.' ಗಾಂಧೀಜಿಗೆ ನಿಷ್ಠೆಯೇ ಗುರಿ. ಕೇವಲ ಕರ್ಮ ಸಾಕು, ಫಲದ ಗೋಜಿಲ್ಲ. 'ಶ್ರದ್ಧೆಯಿಂದ ಮಾಡಿದ ಕಲ್ಯಾಣಕೃತಿ ಎಂದಿಗೂ ಬರಡಾಗಲಾರದು. ಇಂದಿಲ್ಲ ನಾಳೆ ಫಲಿಸಿಯೇ ತೀರಬೇಕು.'

ಪ್ರಪಂಚವೆಲ್ಲ ಕುದುರೆ ಸವಾರಿ ಮಾಡುತ್ತಿರುವಾಗ ನಮ್ಮ ಹುಡುಗರು ಮಾತ್ರ ಕೋಣದ ಬೆನ್ನಿನ ಮೇಲೆ ಮಲಗಬೇಕೆ? ಯಂತ್ರಯುಗದಲ್ಲಿ ಖಾದಿಯ ಮಾತು ನಮ್ಮ ಸುತ್ತ ಸಾವೇ ಲಕ್ಷ್ಮಣನ ಗೆರೆ ಎಳೆದಂತಾಗದೇ? ಎಣ್ಣೆ ಬಂದಾಗ ಕಣ್ಣು ಮುಚ್ಚುವ ಆಟ ಇದು. ಹೀಗೆ ನಮ್ಮಲ್ಲಿ ಅನೇಕರಿಗೆ ಅನುಮಾನ ಇದೆ. ಗಾಂಧೀಜಿಗೆ ಹಾಗೆ ಅನಿಸುವುದಿಲ್ಲ. ಖಾದಿ ಸಾಮ್ರಾಜ್ಯದಲ್ಲೂ ದೇಶದೇಶಗಳ ನಡುವೆ ಕೊಡತಕ್ಕೊಳ್ಳುವ ವ್ಯವಹಾರ ಉಂಟು. ಅವರಲ್ಲಿ ಇಲ್ಲದುದು ಇವರಿಂದ, ಇವರಲ್ಲಿ ಇಲ್ಲದುದು ಅವರಿಂದ

ತೆಗೆದುಕೊಂಡಾರು–ಕೊಟ್ಟಾರು.

ಆದರೆ ಬದುಕನ್ನು ಅತಿ ಸರಳವಾಗಿ ಮಾಡಿದರೆ ಪರದೇಶದಿಂದ ನಮಗೆ ಬೇಕಾಗುವುದಾದರೂ ಏನು? ಈ ಸರಳತೆಯಲ್ಲಿ ಇಂದ್ರಾಯ ತಕ್ಷಕಾಯ ಸ್ವಾಹಾ ಎಂಬಂತೆ ಯಂತ್ರೋಪಕರಣಗಳನ್ನೇ ಹೊಡೆದು ಹಾಕುವಂತಿದೆ ಯಲ್ಲ. ಸರಳತೆಯ ಬಾಣದಿಂದ ಯಂತ್ರಕ್ಕೆ ಗುರಿಯಿಟ್ಟ ಹಾಗಿದೆ. ಅಮೆರಿಕದ ಅಧ್ಯಕ್ಷನಾಹೂವರ್ ಮನೆಗೆರಡು ರೇಡಿಯೋ ತಲೆಗೆರಡು ಕಾರು ತನ್ನ ಗುರಿ ಎನ್ನುತ್ತಿದ್ದ. ಎರಡು ಬೇಡ, ಒಂದಾದರೂ ಬರುವ ದಿನ ಇದಿರು ನೋಡಬಾರದೆ?

ಗಾಂಧೀಜಿಗೆ ಈ ಮಾತಿನಲ್ಲಿ ಹುರುಳಿಲ್ಲ. ಪ್ರಪಂಚವೆಲ್ಲ ಕಾರೇ ತುಂಬಿ ಹೋದರೆ ನಮ್ಮ ಕಾಲೇ ನಮಗೆ ಬೇಡವಾದಾವು. ಉಪಯೋಗ ವಿಲ್ಲದೆ ಮೂಲೆಗೆ ಬಿದ್ದಂತಾಗಿ ವಿಜ್ಞಾನಿಗಳ ತತ್ವದಂತೆ ಅವು ಉದುರಿಹೋಗ ಬೇಕಾಗಿ ಬಂದೀತು. (ನಿರುಪಯೋಗವಾದ್ದರಿಂದ ನಮ್ಮ ಬಾಲ ಸವೆದು ಹೋಗಿ ನಾವು ಮನುಷ್ಯರಾಗಿಲ್ಲವೆ?) 'ಹಿಂದುಸ್ಥಾನದಲ್ಲಿ ಹಳ್ಳಿ ಹಳ್ಳಿಗೂ ರೇಡಿಯೋ ಆಗುವ ದಿನ ನನ್ನ ಕಾಲದಲ್ಲೇನು ಬಾರದು. ಮೂರು ಕೋಟಿ ಜನ ಮಾಡುವ ಕೆಲಸವನ್ನು ಮೂವತ್ತು ಸಾವಿರ ಜನ ಮಾಡಿದರೆ ನನಗೇನು ಆಕ್ಷೇಪಣೆ ಇಲ್ಲವಾಗಲಿ, ಇದರಿಂದ ಆ ಮೂರು ಕೋಟಿ ಜನ ಸುಮ್ಮನೆ ಕಾಲು ಚಾಚಿಕೊಂಡು ನಿರುದ್ಯೋಗಿಗಳಾಗಬಾರದು. ಅದೇ ಮುಖ್ಯ.'

'ಯಂತ್ರ ಬಂದರೆ ಆ ಮೂರು ಕೋಟಿ ಜನಕ್ಕೆ ಕೆಲಸ ಹಗುರಾಗಿ ಬೇಕಾದಷ್ಟು ವಿರಾಮ ಸಿಗುತ್ತದೆ.' ಯಾರೋ ಹೇಳಿದರು.

5 'ಯಾಕೆ ವಿರಾಮ? ಏನು ಹಾಕಿ ಆಡಬೇಕೆ?' ಎಂದರು ಗಾಂಧೀಜಿ.

ಯಂತ್ರಗಳಿಂದ ಸಮೃದ್ಧಿಯ ಕಾಲ ಬರುತ್ತದೆ ಎಂದು ಬಂದವರು ಸೂಚಿಸಿದರು. ಗಾಂಧೀಜಿ ಅವರ ಮೇಲೆಯೇ ತಿರುಗಿಬಿದ್ದರು. ಬಂದವರು ಅಮೆರಿಕದವರು. 'ಏನು ಸಮೃದ್ಧಿ ಸಮೃದ್ಧಿ? ಕೋಟಿಗಟ್ಟಲೆ ಚೀಲ ಗೋಧಿ ಬೆಳೆದು ಅದನ್ನು ನಿಶ್ಚಿಂತೆಯಿಂದ ಸುಟ್ಟು ಬೂದಿಮಾಡುವುದು, ನಿಮ್ಮಲ್ಲಿ ಮಾಡಿದ ಹಾಗೆ. ಇದೇ ಅಲ್ಲವೇ ಸಮೃದ್ಧಿ?' ಗಾಂಧೀಜಿ ಕೇಳಿದರು.

'ಸುಡುವುದು ನಿಂತುಹೋಗಿದೆ.' ಅವರು ಹೇಳಿದರು. 'ಗೋಧಿ ಬೆಳೆಯ ಬೇಡಿರೆಂದು ರೈತರಿಗೆ ಲಂಚ ಕೊಡುತ್ತಿದಾರೆ ಈಗ. ಬಂಡವಾಳ ಸಿದ್ಧಾಂತ ತಂದ ವಿಪರೀತಕಾಲ ಅದು. ಈಗ ಕೋಳಿಯ ಮೊಟ್ಟೆಯ ದರ ಇಳಿಯುದ

ರಿಂದ ಜನರು ಹೊಡೆದಾಡುವಾಗ ಮೊಟ್ಟೆಯೇ ಕಲ್ಲಿನಂತೆ ಹಾರಾಡುತ್ತದೆ.'

'ಈ ಅವಸ್ಥೆಯೇ ನಾನು ಬೇಡ ಎನ್ನುವುದು. ಎಲ್ಲರಿಗೂ ಹೊಟ್ಟೆ ತುಂಬ ಹಿಟ್ಟು, ಮೈತುಂಬ ಬಟ್ಟೆ, ತಕ್ಕಮಟ್ಟಿಗೆ ವಿದ್ಯೆ–ಇಷ್ಟಾದರೆ ಸಮೃದ್ಧಿ, ಇದನ್ನೇ ಸಮೃದ್ಧಿ ಎಂದು ನೀವೂ ಕರೆದರೆ ಸರಿ. ಅದು ಬಿಟ್ಟು ಹೊಟ್ಟೆ ಒಡೆಯುವಂತೆ ಅನ್ನ ಕೂರುವುದು, ಉಪಯೋಗವಿಲ್ಲದಿದ್ದರೂ ಮನೆ ತುಂಬ ಸಾಮಾನು ಕೂಡಿ ಹಾಕುವುದು ಸರಿಯಲ್ಲ. ಹಾಗೆಯೆ ಹಿಂದುಸ್ಥಾನದಲ್ಲಿ ಬಡತನ ಕೊಳಕು ಧೂಳು ಯಾವುದೂ ಬೇಕಾಗಿಲ್ಲ.'

ಈ ದೃಢ ಮನಸ್ಸಿಗೆ ನಮ್ಮ ಹೆಂಗಸರ ತೆಳುವಾದ ಸೀರೆ ನಮ್ಮ ಗಿರಣಿ ಪಂಚೆ ಎಲ್ಲಾ ನಮ್ಮ ನಾಡಿನ ಗುಲಾಮಗಿರಿಯ ಗುರುತು – 'ಅವಮಾನದ ಬಾವುಟ' ಆಗಿ ಕಾಣುತ್ತದೆ. 'ನನ್ನ ದುಃಖದ ಆಳವನ್ನು ನಿಮಗೆ ತಿಳಿಸ ಲಾರೆ. ನನಗೆ ಮುಪ್ಪಿನ ಮರುಳು ಕವಿದಿದೆ ಎನ್ನುತ್ತೀರಾ? ನಾನು ನಡೆದಿರುವ ದಾರಿ ತಪ್ಪು ಎನ್ನುತ್ತೀರಾ? ಯಾರಾದರೂ ಹಾಗೆ ಪ್ರಮಾಣಿಸಿ ಕೊಡಿ. ನನ್ನ ಹೆಮ್ಮೆಯನ್ನೆಲ್ಲ ನುಂಗಿಕೊಂಡು ಅವರ ಕಾಲಿಗೆ ಬೀಳುತ್ತೇನೆ. ನಿಮಗೆ ಧೈರ್ಯ ಇದ್ದರೆ ನನ್ನನ್ನು ಸೋಲಿಸಿ ಇಲ್ಲದಿದ್ದರೆ ನನ್ನ ದಾರಿಗೆ ಬನ್ನಿ. ಖಾದೀ ಚಳುವಳಿಯಲ್ಲಿ ಸೇರಿಕೊಳ್ಳಿ.'

ಖಾದಿಯ ವಿಷಯವಾಗಿ ಗಾಂಧೀಜೀ ಇಪ್ಪತ್ತು ವರ್ಷದಿಂದ ಮಾತಾ ಡುತ್ತಿದಾರೆ, ದುಡಿಯುತ್ತಿದಾರೆ. 'ನಾನು ಇಲ್ಲಿಗೆ ಬಂದಿರುವುದು ಖಾದೀ ಮಾರಲಿಕ್ಕೆ, ಖಾದಿಗಾಗಿ ಭಿಕ್ಷೆ ಬೇಡಲಿಕ್ಕೆ' ಎಂದು ಮನಸು ಬಿಚ್ಚಿ ಹೇಳಿ ದಾರೆ. ಒಂದುಕಡೆ ಖಾದಿ ಭಂಡಾರ ಪ್ರಾರಂಭಿಸಬೇಕಾಗಿತ್ತು. ಗಾಂಧೀಜೀ ಬಂದರು. ಬಂದವರೇ ಗಜಕಡ್ಡಿ ಕತ್ತರಿ ಲೆಕ್ಕದ ಪುಸ್ತಕ ಮುಂದಿಟ್ಟು ಕೊಂಡು ಮಾರಲಿಕ್ಕೆ ಕೂತರು. ಭಾಷಣವಿಲ್ಲ ಸಂಭಾಷಣೆ ಇಲ್ಲ. ಮುಂದಿನ ಊರಿಗೆ ಹೋದಮೇಲೆ ಅಲ್ಲಿ ಹೇಳಿದರು. **6** 'ಕೆಲಸವೇ ಮಾತು. ಅದ ಕ್ಕಾಗಿಯೇ ಅಲ್ಲಿ ಮಾತಾಡಲಿಲ್ಲ.' ಯಾರಾದರೂ ತಮ್ಮ ಹಸ್ತಾಕ್ಷರ– (autograph) ಕೇಳಿದರೆ ಸರಿ; ಖಾದೀ ಉಟ್ಟುಕೊಂಡು ಬನ್ನಿ ಕೊಡುತ್ತೇನೆ ಎಂದು ಹೇಳಿ ಅವರಿಗೆ ಖಾದೀ ಉಡಿಸಿ ಬಿಡುತ್ತಿದ್ದರು. ಎಷ್ಟೋ ಜನ ಶ್ರೀಮಂತಿನಿಯರು ಅಧಿಕಾರಿಗಳ ಮನೆಯವರು ಗಾಂಧೀಜಿಯ ಬಳಿಗೆ ಬಂದು ಹಿಂದಿರುಗುವಾಗ ಖಾದೀ ಉಡಿಸಿ ಬಿಡುತ್ತಿದ್ದರು. ಎಷ್ಟೋ ಜನ ಹೋದ ಕಡೆ ಗಾಂಧೀಜೀ ಖಾದಿಯ ಬಗ್ಗೆ ಹಟಹಿಡಿದು ಸಾಧಿಸಿದಾರೆ. ಮೆತ್ತೆಗೆ ಖಾದೀಚೀಲ ತೊಡಿಸಿದ್ದರೆ, ಕೂತಕಡೆ ಅದನ್ನು ಹರಿದು ಒಳಗಿನ ಮೆತ್ತೆ ಖಾದಿಯೋ ಅಲ್ಲವೋ ಪರೀಕ್ಷಿಸಿ ನೋಡಿದಾರೆ. ಬೇರೆ ಬೇರೆ ತರಗಳಲ್ಲಿ

ಅದನ್ನು ನೆಡುತ್ತ ಬಂದಿದಾರೆ.

ಇಷ್ಟಾದರೂ ಈ ಖಾದಿಯ ಮಾತು ಸಾಕುಮಾಡಬಾರದೆ? ಏಕೆ ಈ ಗಂಟಲು ಸೋವು ಎಂದವರಿದಾರೆ. ಅವರಿಗೆ ಇದೆಲ್ಲ ಭ್ರಾಂತಿಯಾಗಿ ಕಂಡಿದೆ. ಗಾಂಧೀಜಿಗೆ ಅದು ಸಾಧ್ಯವೇ? 'ಸಾವಿನ ದವಡೆಯೊಳಗೇ ಸಿಕ್ಕಿದಾಗಲೂ ಪ್ರಹ್ಲಾದ ಹರಿಯ ನಾಮ ಬಿಟ್ಟನೇ? ನನ್ನ ಇಷ್ಟಮಂತ್ರವನ್ನು ನಾನು ಬಿಡಲೇ? ಪ್ರಹ್ಲಾದನಿಗೆ ಬಂದ ಬಾಧೆ ನನಗೆ ಯಾವುದೂ ಇಲ್ಲವಲ್ಲ! ನನ್ನ ಒಲವಿನ ದೇಶದ ಗೋಳು ನನಗೆ ಉಸಿರುತ್ತಿರುವ ಈ ಒಂದೇ ಮಂತ್ರವನ್ನು ನಾನು ಬಿಟ್ಟು ಬಿಡಲೇ? ನಾಡು ನಿರುದ್ಯೋಗದಲ್ಲಿ ಮುಳುಗಿದೆ. ಈ ಸೋಮಾರಿತನ ನಾಡಿನ ಜೀವಾಳವನ್ನೇ ಕೊರೆಯುತ್ತಾ ಇದೆ. ಒಳನಾಡಿನ ಹಳ್ಳಿಗಳಿಗೆ ಹೋದಾಗ ಅಲ್ಲಿನ ಜನರ ಕಳೆಯಿಲ್ಲದ ಬರಿಗಣ್ಣು ನೋಡಿ ಬೆದರಿದ್ದೇನೆ. ಬೇರೆ ಏನೂ ಮಾಡಲು ಕೆಲಸ ಇಲ್ಲದೆ ದನದ ಜೊತೆಯಲ್ಲಿ ದುಡಿದು ದುಡಿದು ದನಗಳ ಹಾಗೆಯೇ ಆಗಿದಾರೆ ಜನ. ಕೋಟಿಗಟ್ಟಲೆ ಜನ ತಮ್ಮ ಕೈಯನ್ನೇ ಮರೆತಿದಾರೆ. ಎಂಥ ದಾರುಣ ಚಿತ್ರ! ಪಶುಗಳಿಗೂ ನಮಗೂ ನಡುವೆ ಇಷ್ಟು ದೊಡ್ಡ ಭೇದ ಹೇಗೆ ಬಂತು? ಕೈ ಅಲ್ಲವೆ ಅದಕ್ಕೆ ಕಾರಣ. ಕಾಲಿನ ಹಾಗೆಯೆ ಅದನ್ನೂ ಬರೀ ಯಂತ್ರದ ಅಂಗದಂತೆ ಉಪಯೋಗಿಸುತ್ತಿದೇವೆಯಲ್ಲ. ಪ್ರಕೃತಿಮಾತೆ ಕೊಟ್ಟ ವರವನ್ನು ಜರಿದಿದೇವೆ. ಫಲವಾಗಿ ನಮ್ಮ ಮೈ ಮನಸ್ಸುಗಳೆರಡೂ ಒಣಗಿಹೋಗುತ್ತಿವೆ. ರಾಟೆಯೊಂದೇ ಈ ಅನಾಹುತವನ್ನು ತಡೆಯಬಲ್ಲ ಸಾಧನೆ. ನಾಡಿನಲ್ಲಿ ಉದ್ಯೋಗ ಪ್ರಿಯತೆಯನ್ನು ಬೆಳೆಸಿ ಹಳ್ಳಿಗಳನ್ನು ಉದ್ಧಾರಮಾಡಿ ಬಡಬಗ್ಗರಿಗೆ ಒಂದು ಹೊತ್ತಿನ ಹಿಟ್ಟಾದರೂ ಕೊಡುವ ಉಪಾಯ ಬೇರೆ ಏನಿದೆ?'

ಒಂದು ಸಲ ಗಾಂಧೀಜಿಗೆ ಕಾಯಿಲೆ ಆದಾಗ ವೈದ್ಯರು ಸಂಪೂರ್ಣ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿದರು. ಎಂದರೆ ನೂಲುವುದು ಕೂಡ ಬೇಡ ಎಂದು ಅವರ ಸಲಹೆ. 'ನೂಲುವುದನ್ನು ಬಿಡುವುದೇ? ನೂಲದೆ ನಾನು ಬದುಕಲಾರೆನಲ್ಲ. ತಿಂದು ಉಂಡು ಬದುಕಬೇಕಾದರೆ ನೂಲಲೇ ಬೇಕು ನಾನು.' ಇದರಿಂದ ರೋಗ ಬಲವಾದೀತು ಎಂದು ವೈದ್ಯರ ಅಂಜಿಕೆ. 'ಒಂದುವೇಳೆ ನೂಲುತ್ತ ನೂಲುತ್ತ ಹಾಗೆಯೇ ನಾನು ಕಣ್ಣುಮುಚ್ಚಿದರೆ ಅದಕ್ಕಿಂತ ದಿವ್ಯಮರಣ ಉಂಟೇ? ವೈದ್ಯರೆ! 'ನೂಲಬೇಡ ಎಂದರೆ ಹೊಟ್ಟೆಗೆ ಏನೂ ತಿನ್ನಬೇಡ ಎಂದ ಹಾಗೆಯೇ ನನ್ನ ಪಾಲಿಗೆ.'

ನೂಲುವುದು ಯಜ್ಞಕರ್ಮ. ಯಜ್ಞಮಾಡದೆ ತಿನ್ನುವವನು ಕಳ್ಳ. ಪ್ರತಿಯೊಬ್ಬನೂ ತನ್ನ ಅನ್ನ ನೀರಿಗಾಗಿ ಅಷ್ಟೋ ಇಷ್ಟೋ ದುಡಿಯಲೇ

ಬೇಕು. ಶರೀರಶ್ರಮವಿಲ್ಲದೆ ತಿಂದ ಅನ್ನ ಕಳ್ಳತನದ್ದು. ಎಂಥ ಶ್ರೀಮಂತನೇ ಇರಲಿ ತನ್ನ ಆಹಾರಕ್ಕಾಗಿ ಶರೀರಶ್ರಮ ಗೆಯ್ಯಬೇಕು. ಗಾಂಧೀಜಿಗೆ ಶರೀರ ಶ್ರಮ ಒಂದು ವ್ರತ. ರಷ್ಯಾದೇಶದ ಬೊಡ್ಕಿನ್‌ನ–Bread Labour–ಅನ್ನಕ್ಕಾಗಿ ದುಡಿತ ಎಂಬ ಸಿದ್ಧಾಂತದ ಹಾಗೆ ಈ ವ್ರತ. ಈ ಹಾದಿಯ ಮೇಲೆಯೇ ಕಾಂಗ್ರೆಸ್ಸಿಗೆ ನೂಲುವವರೇ ಸದಸ್ಯರಾಗಬಹುದು ಎಂದು ಏರ್ಪಾಡು ಮಾಡಿದ್ದುದು. No work, no vote - ಕೆಲಸವೂ ಇಲ್ಲ, ಓಟೂ ಇಲ್ಲ ಎಂಬ ತತ್ವ ಅದು.

ಖಾದೀ ಖಾದೀ ಎಂದು ಕೂಗಿದರೆ ಉಪಯೋಗವಿಲ್ಲ ಎಂದು ಪರದೇಶೀ ವಸ್ತ್ರ ಬಹಿಷ್ಕಾರವನ್ನು ಉಪದೇಶಿಸಿದರು. ಅದಕ್ಕೆ ಸಭೆ ಸೇರಿಸಿ ವಿದೇಶೀ ಬಟ್ಟೆಗಳನ್ನು ಸುಟ್ಟರು. ಇದು ಸರಿಯೇ ? ಅವರ ಬಟ್ಟೆ ಬೇಡ ಎಂದರೆ ಅವರ ದೇಶದ ಕೂಲಿಜನಕ್ಕೆ ಉಪವಾಸ ತಾನೆ ?

'ನಮ್ಮ ಕೈಗಾರಿಕೆಗೆ ಉದ್ಯೋಗಕ್ಕೆ ಮುಳುವಾಗಬಹುದಾದ ಎಲ್ಲ ಪರದೇಶೀ ವಸ್ತುಗಳಿಗೂ ಬಹಿಷ್ಕಾರವೇ. ನಮ್ಮ ದೇಶದಲ್ಲೇ ಉತ್ಪತ್ತಿಯಾಗಬಹುದಾದ ಯಾವ ಪದಾರ್ಥವೂ ಹೊರನಾಡಿನಿಂದ ನಮ್ಮಲ್ಲಿ ಬರಬಾರದು. ನಮ್ಮಲ್ಲಿಯೇ ಹೇರಳವಾಗಿ ಗೋಧಿ ಬೆಳೆಯುತ್ತಿರುವಾಗ ಆಸ್ಟ್ರೇಲಿಯಾ ದೇಶದಿಂದ ಗೋಧಿ ತರಿಸಿದರೆ ಅದು ಮಹಾಪಾಪ. ನಮ್ಮಲ್ಲಿ ಬೆಳೆಯದೆ ಇರುವ ದವಸ ನಮಗೆ ಅಗತ್ಯವಾದರೆ ಅದನ್ನು ತಪ್ಪದೆ ಹೊರಗಿನಿಂದ ತರಿಸಬೇಕು. ಈ ನಿಷೇಧದಲ್ಲಿ ಸ್ವಲ್ಪವೂ ದ್ವೇಷಭಾವನೆ ಇಲ್ಲ. ಹಾಗೆ ದ್ವೇಷಕ್ಕಾಗಿ ಯಾವ ಪದಾರ್ಥವನ್ನು ಬಹಿಸ್ಕರಿಸಿದರೂ ನಾನು ಅದನ್ನು ಒಪ್ಪುವುದಿಲ್ಲ. ಅದೇ ರೀತಿ ನಮ್ಮಲ್ಲಿ ತಯಾರಾಗುವ ವಸ್ತುವನ್ನು ಹೊರಗಿನಿಂದ ತರಿಸಿದರೆ ನಾನು ಸಹಿಸಲಾರೆ. ನಮ್ಮಲ್ಲಿ ಚರ್ಮಕ್ಕೇನು ಕಡಮೆ? ನಮ್ಮ ದೇಶದ ತೊಗಲಿನಿಂದ ಮಾಡಿದ ಕೆರ ಉಪಯೋಗಿಸುವುದೇ ನನ್ನ ಧರ್ಮ. ಪರದೇಶದ ಕೆರ ನಮ್ಮದಕ್ಕಿಂತ ಅಗ್ಗ ನಯ ಆಗಿದ್ದರೂ ಅಷ್ಟೇ. ನಮ್ಮ ದೇಶದಲ್ಲಿ ಸಾಕಷ್ಟು ಸಕ್ಕರೆ ಉತ್ಪತ್ತಿ ಆದರೆ ಹೊರಗಿನ ಸಕ್ಕರೆಗೆ ಬಹಿಷ್ಕಾರ ಹಾಕಬೇಕಾದುದೇ'. ಬಟ್ಟೆಯ ಮಾತು ಹೇಳುವ ಹಾಗೆಯೆ ಇಲ್ಲ.

ರವೀಂದ್ರನಾಥ ಠಾಕೂರರಿಗೆ ಈ ಬಹಿಷ್ಕಾರದ ಕಾರ್ಯ ಸಹಿಸಲಿಲ್ಲ. ಖಾದಿಯೋ ಒರಟು; ಅದರಲ್ಲಿ ಅಂದವಿಲ್ಲ. ಈ ಬಹಿಷ್ಕಾರವಂತೂ ಖಾದೀ ಚಳುವಳಿಯ ಒರಟುತನಕ್ಕೆ ಕಳಸವಿಟ್ಟ ಹಾಗೆ. ಹೀಗೆ ಯೋಚಿಸಿ ಅವರಿಗೆ ತುಂಬಾ ನೋವಾಯಿತು. ಗಾಂಧೀಜೀ ತಮಗೆ ಗೆಳೆಯರು; ಹಿಂದುಸ್ಥಾನದ ಪುಣ್ಯಫಲ. ಅಂಥವರು ಹೀಗಾದರಲ್ಲ ಎಂದು ಕಲೆಯ ಅವತಾರವೇ ಆದ

ರವೀಂದ್ರರಿಗೆ ಎನಿಸಿತು. ಗಾಂಧೀಜಿಗೆ ಆ ನೋವನ್ನು ತಿಳಿಸಿದರು.

"ಇದೇನು ಸ್ವದೇಶಿ ಇದೇನು ದ್ವೇಷ? ಈ ಕಿಚ್ಚಿನಿಂದ ಎಲ್ಲವೂ ಉರಿದುಹೋಯಿತಲ್ಲ. ಬೆಳಗ್ಗೆ ಎದ್ದರೆ ಹಕ್ಕಿಗೆ ತಿನ್ನುವ ಯೋಚನೆಗಿಂತ ಮೊದಲು ಮುಗಿಲಿಗೆ ಹಾರುವ ಹಂಬಲವಲ್ಲವೆ? ಇದು ಒಂದು ಸಂಧಿಕಾಲ, ಅರುಣೋದಯ. ಹೊಸ ಜಗತ್ತು ಹುಟ್ಟುವ ಕಾಲ. ಇಂಥ ಹೊತ್ತಿನಲ್ಲಿ ಭಿನ್ನಭಾವವೇಕೆ?" ಹೀಗೆ ರವೀಂದ್ರರು ಬರೆದರು.

ಗಾಂಧೀಜಿಗೆ ನಾಡಿನ ಬಡತನ ಕಣ್ಣಿಗೆ ಕಟ್ಟಿದೆ. ರವೀಂದ್ರರಿಗೆ ಆತ್ಮದ ಹಸಿವು. ಗಾಂಧೀಜೀ ಬಹಳ ವಿನಯದಿಂದ ರವೀಂದ್ರರಿಗೆ ಹೇಳಿದರು. 'ನೀವು ಕವಿ. ಭವಿಷ್ಯದಲ್ಲಿ ವಿಹರಿಸುವವರು; ನಾವು ಹಾಗೆ ಮಾಡಬಲ್ಲೆವೆ? ನಸುಕಿನಲ್ಲಿ ನನ್ನಿವಾಡುಗಳನ್ನು ಉಲಿಯುತ್ತ ಮುಗಿಲಿಗೆ ಹಾರುವ ಹಕ್ಕಿಗಳ ಸೊಗಸಾದ ಚಿತ್ರವನ್ನು ತೋರಿಸುತ್ತೀರಿ. ನಮಗೂ ಅದು ಕಣ್ಣು ತುಂಬುತ್ತದೆ. ಆ ಹಕ್ಕಿ ಹಿಂದಿನದಿನ ಹೊಟ್ಟೆ ತುಂಬ ತಿಂದು ಹಾಯಾಗಿ ಇರುಳು ಮಲಗಿ, ಅವಕ್ಕೆ ಹೊಸ ಬಲ ಹೊಸ ರಕ್ತ ಬಂದಿದೆ. ಹಾರಲು ಆ ಬಲ ನೆರವಾಗುತ್ತದೆ. ನಾನು ನೋಡಿರುವ ಹಕ್ಕಿಗಳಿಗೆ ಹಾರಲು ಹಾಗಿರಲಿ, ರೆಕ್ಕೆ ಬಡಿಯಲೂ ಬಲವಿಲ್ಲ. ಆ ನೋಟ ತುಂಬಾ ನೋಯಿಸಿದೆ. ಹಿಂದುಸ್ಥಾನದ ಮುಗಿಲ ಕೆಳಗೆ ನರಪಕ್ಷಿಗೆ ನಿದ್ದೆ ವಿಶ್ರಾಂತಿ ಎಲ್ಲಿಯದು? ಅದೊಂದು ಸೋಗು, ಸುಳ್ಳುನಾಟಕ. ಆ ನಾಟಕ ಮುಗಿಸಿ ಬೆಳಗ್ಗೆ ಎದ್ದಾಗ ಈ ನರಪಕ್ಷಿಗೆ ಮುನ್ನಾದಿನಕ್ಕಿಂತ ಬಲ ಇಳಿದು ಹೋಗಿರುತ್ತದೆ. ಕೋಟ್ಯನುಕೋಟಿ ಜನರಿಗೆ ಬಾಳು ನಿತ್ಯ ಜಾಗರಣೆ ಅಥವಾ ಶಾಶ್ವತ ಸಮಾಧಿ. ಆ ಸಂಕಟ ಅವರ್ಣನೀಯ. ಅದನ್ನು ಅರಿತುಕೊಳ್ಳಲು ಅನುಭವಿಸಬೇಕಲ್ಲದೆ ಬೇರೆ ಹಾದಿಯಿಲ್ಲ. ಸಂಕಟಪಡುವ ರೋಗಿಗಳಿಗೆ ಕಬೀರನ ಹಾಡು ಹಾಡಿ ಸಮಾಧಾನ ಕೊಡಬಂದೀತೇ? ಹಸಿವಿನಿಂದ ತಲ್ಲಣಿಸುವ ಈ ಅಸಂಖ್ಯ ಜನರು ಬೇಡುವ ಕಾವ್ಯ ಒಂದೇ; ಪುಷ್ಟಿಕರವಾದ ಅನ್ನ!

'ಸುತ್ತಲೂ ಜನ ಹಸಿವಿನಿಂದ ಸಾಯುತ್ತಿರುವಾಗ ಅವರಿಗೆ ಅನ್ನ ಕೊಡುವುದಕ್ಕಿಂತ ಬೇರೆ ಏನು ಉದ್ಯೋಗ ಇದ್ದೀತು ನನಗೆ? ಬೇರೆ ಮಾಡಬಹುದೇ? ಭಾರತಕ್ಕೆ ಬೆಂಕಿಹತ್ತಿದೆ. ಹೊಟ್ಟೆಗಾಗಿ ದುಡಿಯೋಣ ಎಂದರೆ ಕೆಲಸವಿಲ್ಲ. ದತ್ತಮಂಡಲಕ್ಕೆ ಇದು ನಾಲ್ಕನೆಯ ವರ್ಷದ ಬರ. ಖುಲ್ನಿ ಉಪವಾಸ. ಉತ್ಕಲವಂತೂ ಸದಾ ಕ್ಷಾಮದ ದೇಶ. ಹಿಂದುಸ್ಥಾನ ದಿನೇ ದಿನೇ ಬಡವಾಗುತ್ತಿದೆ. ಕಾಲು ಆಗಲೇ ತಣ್ಣಗೆ ಆಗಿದೆ. ಹೀಗೆಯೇ ಬಿಟ್ಟರೆ ಪೂರಾ ತಣ್ಣಗೆ ಆದೀತು.

'ಬಡತನದಲ್ಲಿ ಮುಳುಗಿ ನಿರುದ್ಯೋಗದಿಂದ ಸವೆದುಹೋಗುತ್ತಿರುವ ಜನಕ್ಕೆ ದೇವರೇ ಪ್ರತ್ಯಕ್ಷವಾದರೂ ಅನ್ನಾವತಾರಮಾಡಿ ಬರಬೇಕು. ಅವರಿಗೆ ಹಿಟ್ಟುಕೊಡುವ ಕೂಲಿಯ ರೂಪದಲ್ಲಿ ಬರಬೇಕು. ಬೇರೆ ರೀತಿಯಲ್ಲಿ ಬರಲು ಅವನಿಗೆ ಧೈರ್ಯ ಬರಲಾರದು. ದೇವರು ಮನುಷ್ಯನನ್ನು ಸೃಷ್ಟಿಸಿದಾಗ ಹೊಟ್ಟೆಗಾಗಿ ದುಡಿಯಲು ಹೇಳಿದ; ದುಡಿಯದೆ ತಿನ್ನುವವರು ಕಳ್ಳರು ಎಂದ. ಇಂದು ಕೋಟಿ ಕೋಟಿ ಜನ ದನಕ್ಕಿಂತ ಕಡೆಯಾಗಿ ಸಾಯುಲಾಗಿದಾರೆ. ಅವರ ಹಸಿವೇ ಹಿಂದೂಸ್ಥಾನಕ್ಕೆ ಕೋಟಿ ವಿದ್ಯೆಗಿಂತ ರಾಟಿ ಲೇಸು ಎಂಬ ಹಾದಿಗೊಯ್ಯುತ್ತಿದೆ.

'ಕವೀಂದ್ರನನ್ನೂ ಋಷಿಯನ್ನೂ ಯಜ್ಞಾರ್ಥವಾಗಿ ನೂಲಲು ಬೇಡುತ್ತೇನೆ. ಯುದ್ಧಕಾಲದಲ್ಲಿ ಕವಿ ತನ್ನ ಕೊಳಲು ಕೆಳಗಿಡುತ್ತಾನೆ. ವಕೀಲ ತನ್ನ ಪುಸ್ತಕಗಳನ್ನು ಬಿಡುತ್ತಾನೆ. ಮನೆಗೆ ಬೆಂಕಿ ಹತ್ತಿದಾಗ ಮನೆಯ ಜನರೆಲ್ಲ ಹೊರಗೆ ಓಡಿಬಂದು ಪ್ರತಿಯೊಬ್ಬರೂ ನೀರು ತರಲು ಹೋಗುತ್ತಾರೆ. ನನ್ನ ಸುತ್ತಲೂ ಜನ ಹೊಟ್ಟೆಗಿಲ್ಲದೆ ಸಾಯುತ್ತಿರುವಾಗ ನನಗೆ ಒಂದೇ ಉದ್ಯೋಗ–ಅವರಿಗೆ ಹಿಟ್ಟು ದೊರಕಿಸುವುದು. ಅದೇ ವರ್ತಮಾನ ಧರ್ಮ. ನಾಳೆಯ ಚಿಂತೆ ದೇವರಿಗೆ ಸೇರಿದುದು.'

ರವೀಂದ್ರರೆಂದರೆ ಗಾಂಧೀಜಿಗೆ ತುಂಬ ಆದರ. ಅವರನ್ನು ಗುರುದೇವ ಎನ್ನುತ್ತಾರೆ. ಶಾಂತಿನಿಕೇತನ ತಮಗೆ ಶಾಂತಿ ಸಿಗುವ ಸ್ಥಳ ಎಂದು ತಿಳಿದಿದಾರೆ. ಅಲ್ಲದೆ ರವೀಂದ್ರರು ಭಾರತ ಸಂಸ್ಕೃತಿಯ ಕಣ್ಣು. ಅವರ ಹಿತವಚನಕ್ಕೆ ಬಹಳ ಬೆಲೆಯಿದೆ. ಆದರೂ ಗಾಂಧೀಜಿಗೆ ಹಿಂದುಸ್ಥಾನದ ದಾರಿದ್ರ್ಯ ಕಣ್ಣಿಗೆ ಕಟ್ಟಿಕೊಂಡು ಕೂತಿದೆ. ಆ ಹಸಿವಿನ ನೋವು ತನಗೇ ಆಗುತ್ತಿದೆ. ತಾನೇ ದೇಶ; ದೇಶದ ಸುಖ ದುಃಖ ತನ್ನದು. ಭಕ್ತನ ಬೆನ್ನ ಮೇಲೆ ಬಿದ್ದ ಹೊಡೆತಕ್ಕೆ ದೇವರ ಬೆನ್ನ ಮೇಲೆ ಬಾಸಾಳ ಮೂಡಿದ್ದವಂತೆ. ಹಾಗೆಯೇ ಭಾರತದ ದರಿದ್ರಕೋಟಿಯ ಹಸಿವು ನೋವು ಗಾಂಧೀಜಿಗೆ.

ದರಿದ್ರರಿಗೆಲ್ಲಿಯ ಧರ್ಮ? ವಿವೇಕಾನಂದಸ್ವಾಮಿ ಹೇಳುತ್ತಿದ್ದರು: 'ನಾನು ವೇದಾಂತಿಯಲ್ಲ, ತತ್ವಜ್ಞಾನಿಯಲ್ಲ, ಸಾಧುವೂ ಅಲ್ಲ. ನಾನು ದೀನ, ದರಿದ್ರ. ಅಂಥವರನ್ನೇ ನಾನು ಪ್ರೀತಿಸುತ್ತೇನೆ. ಬಡತನದಲ್ಲಿ ಹೂತುಹೋಗಿರುವ ಕೋಟ್ಯಂತರ ಜನ ಭಾರತೀಯರಿಗಾಗಿ ಮರುಗುವವರು ಯಾರು? ಅವರಿಗೆ ದಾರಿ ಏನು? ಯಾರು ಅವರಿಗೆ ಬೆಳಕು ತೋರಿಯಾರು? ಈ ಜನರೇ ನಿಮ್ಮ ದೈವವಾಗಲಿ. ಬಡವರಿಗಾಗಿ ತನ್ನ ಎದೆಯ ರಕ್ತ ಹಿಂಡಬಲ್ಲ ಧೀರನೇ ಮಹಾತ್ಮ. ಈ ಕೋಟ್ಯನುಕೋಟಿ

ಜನ ಹಸಿವಿನಿಂದ ಬಳಲುತ್ತಿರುವತನಕ, ಅವರ ದುಡಿತದ ಬಲದಿಂದ ಓದು ಬರೆಹ ಗಳಿಸಿಕೊಂಡು ಅವರ ಬಗ್ಗೆ ಸ್ವಲ್ಪವೂ ಕನಿಕರ ತೋರದ ಪ್ರತಿಯೊಬ್ಬ ಮನುಷ್ಯನೂ ದ್ರೋಹಿ ವಿಶ್ವಾಸಘಾತಕ ಎನ್ನುತ್ತೇನೆ. ಸರ್ವ ಚೇತನಸ್ತೋಮವೇ ದೇವರು ಎಂದು ನನ್ನ ನಂಬಿಗೆ. ಪಾಪಿ ದೀನ ಪತಿತರೇ ಎಲ್ಲ ದೇಶದ ದರಿದ್ರರೇ ನನ್ನ ದೇವರು. ಆ ದೇವರನ್ನು ಆರಾಧಿಸ ಬಲ್ಲೆನಾದರೆ ಸಾವಿರ ಸಂಕಟಗಳನ್ನು ಸಹಿಸಿಯೂ ನಾನು ಪುನಃಪುನಃ ಜನ್ಮವೆತ್ತಲು ಬಯಸುತ್ತೇನೆ.'

ಇನ್ನೊಮ್ಮೆ ಬರಿಯ ಜಪತಪದ ಗಾಳಿಗಂಟನ್ನು ನೋಡಿ ಗರ್ಜಿಸಿದರು: 'ಏಳಿರಿ, ನಿಮ್ಮಲ್ಲಿ ಜನತೆಯ ಸೇವೆಗಾಗಿ ಬಾಳನ್ನು ಮುಡಿಪಾಗಿ ಸಲ್ಲಿಸ ಬಲ್ಲವರು ಯಾರೂ ಇಲ್ಲವೆ? ವೇದಾಂತ ಪಠನೆ, ಜಪಧ್ಯಾನಗಳನ್ನು ಕಟ್ಟಿಡಿ. ಮುಂದಿನ ಜನ್ಮದಲ್ಲಿ ನೋಡಿಕೊಳ್ಳೋಣ. ಈ ಜನ್ಮ ಈ ದೇಹ ಜನತಾ ಸೇವೆಗಾಗಿ ಮೀಸಲಾಗಲಿ.'

ಗಾಂಧೀಜಿಯ ಮನೋಭಾವಕ್ಕೆ ದರಿದ್ರನಾರಾಯಣ ಸೇವೆಯ ಹಂಬಲಕ್ಕೆ ವೇದಾಂತ ಸಿಂಹದ ಈ ವಾಣಿಗಿಂತ ಬೇರೆ ವ್ಯಾಖ್ಯಾನ ಏಕೆ? ವಿವೇಕಾನಂದಸ್ವಾಮಿ ಅಂದು ಬಯಸಿದ ಧೀರತೆ ಇಂದು ಇಲ್ಲಿ ಹೊಳೆದಿದೆ. ಅವರು ಕೋರಿದ ಮಹಾತ್ಮ ಇಂದು ಅವತರಿಸಿದಾನೆ.

ಗಾಂಧೀಜೀ ಬರೀ ಹಿಂದೂಸ್ಥಾನಕ್ಕೆ ಮಾತ್ರವೇ ಖಾದೀ ಮಂತ್ರೋಪ ದೇಶ ಮಾಡಿಲ್ಲ. ಇಡೀ ಜಗತ್ತಿಗೆ ಅವರು ರಾಟೆಯ ದೀಕ್ಷೆ ಕೊಡಬಯಸು ತ್ತಾರೆ. ಚೀನಾದ ಮುಖಂಡರು ಬಂದರೆ ಅವರಿಗೆ ಅದನ್ನೇ ಹೇಳಿದರು. ಪಡುವಲ ಜನರಿಗೂ ಅದನ್ನೇ ಹೇಳುತ್ತಾರೆ. ಮಹಾ ಯುದ್ಧದ ಬಾಂಬು ಯುಗವಾದ ಮೇಲೆ ಮತ್ತೆ ರಾಟೆಯ ಕಾಲ ಬಂದೀತೆಂಬ ನಂಬಿಕೆ ಅವರಿಗೆ ಇದೆ. ಪಡುವಲ ಅರ್ಥಶಾಸ್ತ್ರ ಬಹುಜನರ ಸುಖ ಸಾಧನೆಯ ನಿಟ್ಟಿನಲ್ಲಿ ನಡೆದಿದೆ. 'ರಾಟೆ ಬಹುಜನರ ಅಧಿಕಸುಖದ ಮಾರ್ಗವಲ್ಲ; ಸರ್ವಜನರ ಸುಖದ ಹಾದಿ. ಇಂದು ಹಿಂದೂಸ್ಥಾನದ ಜನರ ಪಾಲಿಗೆ ಮಾತ್ರ ಅದು ಸಂಜೀವಿನಿ. ನಾಳೆ ಪ್ರಪಂಚಕ್ಕೇ ಆದೀತು. ಯಾರಾದರೂ ತಪ್ಪು ಮಾಡುವವರನ್ನು ಕಂಡರೆ ನಾನು ತಪ್ಪು ಮಾಡಿದೆ ಎಂದುಕೊಳ್ಳುತ್ತೇನೆ. ಕಾಮಿಯಾದವನನ್ನು ಕಂಡಾಗ ನಾನೂ ಹಿಂದೆ ಹಾಗೆ ಇದ್ದೆನೆಂದು ನೆನಪು ಗೊಳ್ಳುತ್ತೇನೆ. ಹೀಗೆ ಪ್ರಪಂಚದಲ್ಲಿ ಎಲ್ಲರೊಡನೆಯೂ ನನ್ನ ಬಳಗವನ್ನು ಕಟ್ಟಿಕೊಳ್ಳುತ್ತೇನೆ. ದೀನದರಿದ್ರರಿಗೆ ಸುಖವಿಲ್ಲದೆ ನಾನು ಸುಖವಾಗಿರಲಾರೆ ಎನಿಸುತ್ತದೆ. ಈ ದೃಷ್ಟಿಯಿಂದ ರಾಟೆಯ ಕಡೆಗೆ ನೋಡಿರಿ. ತುಲಸೀ

ದಾಸನಿಗೆ ಕೃಷ್ಣವಿಗ್ರಹದಲ್ಲೂ ರಾಮನೇ ಕಾಣುತ್ತಿದ್ದನಂತೆ. ನಮ್ಮ ವಿಜ್ಞಾನ ಕಲೆ ಅರ್ಥಶಾಸ್ತ್ರ ಎಲ್ಲಾ ಬಡವರ ಪಾಲಿಗೆ ರಾಟಿಯನ್ನು ಆಧಾರವಾಗಿ ಮಾಡಲು ಉಪಯೋಗವಾಗಲಿ.'

ಗಾಂಧೀಜೀ ಸೆರೆಮನೆಯಿಂದ ಒಂದು ಸಲ ಹೊರಗೆ ಬಂದಾಗ ಜನರೆಲ್ಲ ಅವರನ್ನು ಮುತ್ತಿದರು. ದೇಶಕ್ಕೆ ಏನು ಸಂದೇಶ ಎಂದು ಕೇಳಿದರು. ಅಂಥ ಹೊತ್ತಿನಲ್ಲಿ ಒಂದೇ ಮಾತು: 'ಮನೆಗೆ ಹೋಗಿ ದಾರ ತೆಗೆಯಿರಿ.' ಅವರಿಗೆ ಬೇಕಾದ ಕೋಟ್ಯಾಧೀಶರೊಬ್ಬರು ಅವರನ್ನು ಕೇಳಿದರು, ಒಂದು ದಿನ: 'ನಿಮಗೆ ನನ್ನ ಹಣ ಬೇಕೋ ನಾನೇ ಬೇಕೋ ನಾಡಿನ ಸೇವೆಗೆ?' 'ನೀನೇ ಬೇಕು' ನೇರಾಗಿ ಬಂತು ಉತ್ತರ. 'ನನ್ನ ಉದ್ಯೋಗ ವ್ಯವಹಾರ ಎಲ್ಲಾ ಬಿಟ್ಟುಬಂದರೆ ಏನು ಕೆಲಸ ಹೇಳುತ್ತೀರಿ ನನಗೆ?' 'ನೂಲುವುದು.' ಆ ಲಕ್ಷ್ಯಶುದ್ಧಿಗೆ ಏಟು ತಪ್ಪುವುದೇ ಇಲ್ಲ.

ರಾಮಕೃಷ್ಣ ಪರಮಹಂಸರು ಅನ್ನುತ್ತಿದ್ದರಂತೆ: 'ಹಸಿದ ಹೊಟ್ಟೆಗೆ ತತ್ವಬೋಧೆಯೇಕೆ?' ನಿಜ. ಧರ್ಮವು ಅರ್ಥವನ್ನು ಬಿಟ್ಟರೆ ಕುಂಟನಾದೀತು. ಅರ್ಥನೀತಿಗೆ ಹೊಂದದ ಧರ್ಮ ಧರ್ಮವಲ್ಲ. ಗಾಂಧೀಜಿಗೆ ಧರ್ಮದಲ್ಲಿ ಅರ್ಥವಿದ್ದ ಹಾಗೆಯೆ ಅರ್ಥದಲ್ಲಿ ಧರ್ಮವಿರಬೇಕು. 'ಧರ್ಮಕ್ಕೆ ಹೊಂದದ ಅರ್ಥ ಕಾಸಿಗೆ ತರವಲ್ಲ. ಅರ್ಥವು ಧರ್ಮಾವಿರೋಧಿಯಾಗಿರಬೇಕು. ಸುಲಿಗೆ ಕೊಳ್ಳೆ ಪರಶೋಷಣೆಗೆ ಅದರಲ್ಲಿ ಎಡೆಯಿಲ್ಲ. ಅಂತಲೇ ನಾನು ಖಾದೀ ಮಂತ್ರವನ್ನು ನಂಬಿರುವುದು.'

ಅದು ಸತ್ಯಾಗ್ರಹಿಯ ದೃಢವಿಶ್ವಾಸ. ಈಗಂತೂ ಪ್ರಪಂಚ ಸುಂದೋಪಸುಂದರ ಮಲ್ಲಯುದ್ಧದಲ್ಲಿ ತೊಡಗಿದೆ. ಇಂಥ ಹೊತ್ತಿನಲ್ಲಿಯೂ ಗಾಂಧೀಜೀ ಖಾದಿಯನ್ನೇ ಶರಣುಹೋಗಿದಾರೆ. 'ಕೈನೂಲಿನ ಉಂಡೆಗಳೇ ನಮ್ಮ ಸಿಡಿಗುಂಡು, ಹಂಜಿಗಳೇ ಬಿಲ್ಲುಬಾಣ; ಖಾದಿಯೇ ಸ್ವರಾಜ್ಯದ ಹಾದಿ' ಎನ್ನುತ್ತಿದಾರೆ. ಖಾದಿಯಲ್ಲಿ ನಂಬಿಗೆ ಇಲ್ಲದವರನ್ನು ನೂಲಲು ಬಾರದವರನ್ನು ಸತ್ಯಾಗ್ರಹಕ್ಕೆ ಅನಧಿಕಾರಿಗಳೆನ್ನುತ್ತಾರೆ.

ಕೇವಲ ಸ್ವರಾಜ್ಯ ಸಂಗ್ರಾಮ ಶಸ್ತ್ರವಲ್ಲ ಖಾದೀ. ಅಹಿಂಸೆ ಸತ್ಯಗಳ ತಳಹದಿಯ ಮೇಲೆ ಕಟ್ಟಿದ ಮಾನವ ಜೀವನದ ಕುರುಹು. ಗಾಂಧೀ ಧರ್ಮಕ್ಕೆ ಅದು ಸಾರಥಿ.

## ಅಭ್ಯಾಸ

೧. ಕಠಿಣ ಶಬ್ದಗಳ ಅರ್ಥ :—

ದತ್ತ—ಅರ್ಪಿತವಾದ, ಕೊಡಲ್ಪಟ್ಟ. ಜೀವಚ್ಛವ—ಜೀವದಿಂದಿರುವ ಹೆಣ. ತಿರುಗಲಿ—ಕೀಲು, ಕೇಂದ್ರ. ಮುರಾರಿ—ಕೃಷ್ಣ, ವಿಷ್ಣು. ಮೂರಾಬಟ್ಟೆ—ಮೂರು ದಾರಿ. ಅಸುರ—ರಾಕ್ಷಸ. ಬಾಸಾಳ—ಬಾಸುಂಡೆ. ನಸುಕು—ಮಬ್ಬು, ಬೆಳಕು. ಪಟಾಟೋಪ—ಪ್ರದರ್ಶನ, ತೋರಿಕೆ, ಆಡಂಬರ. ಮುಳುವು—ನಾಶಕ್ಕೆ ಕಾರಣ ವಾಗು, ಸಂಚಕಾರವಾಗು ಮುಳ್ಳು. ನನ್ನಿಪಾಡು—ಭವಿಷ್ಯ ಸೂಚಿಸುವ ಹಾಡು. (ನನ್ನಿ-ಸತ್ಯ)

ಟಿಪ್ಪಣಿಗಳು :—

1. ಸೇಂದ್ರಾಯ ತಕ್ಷಕಾಯ ಸ್ವಾಹಾ ಎಂಬಂತೆ—ಜನಮೇಜಯನು ಸರ್ಪ ಯಜ್ಞ ವನ್ನು ಮಾಡುವಾಗ ಎಲ್ಲ ಸರ್ಪಗಳೂ ಯಜ್ಞ ಕುಂಡದಲ್ಲಿ ಬಂದು ಬಿದ್ದುವು. ಆದರೆ ತಕ್ಷಕನೆಂಬ ಸರ್ಪ ಇಂದ್ರನ ಸಿಂಹಾಸನಕ್ಕೆ ಸುತ್ತಿಕೊಂಡಿತು. ಆಗ ಪುರೋಹಿತರು ಇಂದ್ರನ ಸಮೇತವಾಗಿ ತಕ್ಷಕನು ಆಹುತಿಯಾಗಲಿ ಎಂದರು. ಅದನ್ನು ಕೇಳಿದ ಇಂದ್ರ ತಕ್ಷಕನನ್ನು ಬಿಡಬೇಕಾಯಿತು. ಅಂದರೆ ಎಲ್ಲವೂ ನಾಶವಾಗಲಿ ಎಂದಂತೆ.
2. ಲೋಕಮಾನ್ಯ ಟಿಳಕರು—ಮಹಾರಾಷ್ಟ್ರದವರು. ಅವರು ೧೮೫೬ರಲ್ಲಿ ಜನಿಸಿ ಸ್ವರಾಜ್ಯ ಸ್ಥಾಪನೆಗಾಗಿ ವಿಶೇಷವಾಗಿ ಶ್ರಮಿಸಿ ೧೯೨೦ರಲ್ಲಿ ಸ್ವರ್ಗಸ್ಥರಾದರು.
3. ಹೂವರ್—ರೂಸ್‌ವೆಲ್ಟನಿಗೆ ಹಿಂದಿದ್ದ ಅಮೆರಿಕದ ಅಧ್ಯಕ್ಷ. ಅವನಾದ ಮೇಲೆ ಕ್ರಮವಾಗಿ ರೂಸ್‌ವೆಲ್ಟ್, ಟ್ರೂಮನ್ ಮತ್ತು ಐಸೆನ್ ಹೋವರ್ ಅಧ್ಯಕ್ಷರಾದರು.
4. ರವೀಂದ್ರನಾಥ ಠಾಕೂರರು—ಕಲ್ಕತ್ತೆಯಲ್ಲಿ ಠಾಕೂರರು ಕ್ರಿ.ಶ. ೧೮೬೧ರಲ್ಲಿ ಜನಿಸಿದರು. ಬಂಗಾಳಿ ಭಾಷೆಯಲ್ಲಿ ಅನೇಕ ದೇಶಗೀತೆ, ಭಕ್ತಿಗೀತೆ, ಕಾವ್ಯ, ಕಾದಂಬರಿ, ನಾಟಕಗಳನ್ನು ರಚಿಸಿ ಪ್ರಸಿದ್ಧರಾಗಿದ್ದಾರೆ. ಅವರ ಗೀತಾಂಜಲಿಗೆ ನೋಬಲ್ ಬಹುಮಾನ ಬಂದಿದೆ. ಶಾಂತಿನಿಕೇತನವೆಂಬ ಗುರುಕುಲ ಅವರು ಸ್ಥಾಪಿಸಿದುದು. ೧೯೪೧ರಲ್ಲಿ ಕಾಲವಶವಾದರು.
5. ಕಬೀರ—ಹದಿನೈದನೆಯ ಶತಮಾನದ ಕೊನೆಯಲ್ಲಿದ್ದ ಸಂತ. ಸ್ಥಳ ಡೆಲ್ಲಿ. ಮುಸಲ್ಮಾನನಾದರೂ ರಾಮ ಭಕ್ತ. ಅನೇಕ ಕೀರ್ತನೆಗಳನ್ನು ಹಾಡಿದ್ದಾನೆ.
6. ಸ್ವಾಮಿ ವಿವೇಕಾನಂದ—ಕ್ರಿ.ಶ. ೧೮೬೩ನೆಯ ಇಸವಿಯಲ್ಲಿ ಕಲ್ಕತ್ತದಲ್ಲಿ ಜನಿಸಿ ದರು. ಶ್ರೀರಾಮಕೃಷ್ಣ ಪರಮಹಂಸರ ಶಿಷ್ಯರು. ಪರಿವ್ರಾಜಕ ಸನ್ಯಾಸಿ ವೇಷದಲ್ಲಿ ಅಮೆರಿಕ, ಯೂರೋಪ್ ದೇಶಗಳಲ್ಲೆಲ್ಲ ಸಂಚರಿಸಿ ಹಿಂದೂ ಧರ್ಮದ ತತ್ತ್ವಗಳನ್ನು ಸಾರಿದರು. ಶ್ರೀರಾಮಕೃಷ್ಣ ಸಂಘವನ್ನು ಸ್ಥಾಪಿಸಿದರು. ೧೯೦೨ನೆಯ ಇಸವಿ ಯಲ್ಲಿ ಸ್ವರ್ಗಸ್ಥರಾದರು.
7. ಶ್ರೀರಾಮಕೃಷ್ಣ ಪರಮಹಂಸರು—ಬಂಗಾಲದಲ್ಲಿರುವ ಹೂಗ್ಲಿ ಜಿಲ್ಲೆಯ ಕಾಮಾರಪುಕುರದಲ್ಲಿ ೧೮೩೬ನೆಯ ಫೆಬ್ರವರಿ ೧೮ನೆಯ ತಾರೀಖು ಜನಿಸಿದರು.

ದಕ್ಷಿಣೇಶ್ವರದಲ್ಲಿ ನೆಲಸಿ ಬ್ರಹ್ಮಸಾಕ್ಷಾತ್ಕಾರವನ್ನು ಮಾಡಿಕೊಂಡ ಮಹಾ ಪುರುಷರು. ಸ್ವಾಮಿ ವಿವೇಕಾನಂದರೇ ಮೊದಲಾದ ಸಾವಿರಾರು ಜನಗಳು ಇವರ ಶಿಷ್ಯರಾಗಿದ್ದರು. ೧೮೮೬ನೆಯ ಆಗಸ್ಟ್ ೧೬ನೆಯ ತಾರೀಖು ಮಹಾ ಸಮಾಧಿಯಲ್ಲಿ ಬ್ರಹ್ಮಲೀನವಾದರು.

8. ದತ್ತಮಂಡಲ—ಅನಂತಪುರ, ಕಡಪ, ಕರ್ನೂಲು ಮತ್ತು ಬಳ್ಳಾರಿ—ಈ ಸೀಡೆಡ್ ಡಿಸ್ಟ್ರಿಕ್ಟ್‌ಗಳು.



9 ಉತ್ಕಲ—ಒರಿಸ್ಸದೇಶ.

16. ಸುಂದೋಪಸುಂದರ—ಸುಂದ ಉಪಸುಂದರರು ನಿಕುಂಭನೆಂಬ ರಾಕ್ಷಸನ ಮಕ್ಕಳು. ಅನ್ಯೋನ್ಯವಾಗಿ ಒಬ್ಬೊರನ್ನೊಬ್ಬರು ಕೊಲ್ಲಬೇಕೇ ಹೊರತು ಮತ್ತಾರಿಂದಲೂ ಸಾವು ಬರದಿರುವಂತೆ ಬ್ರಹ್ಮನಿಂದ ವರವನ್ನು ಪಡೆದಿದ್ದರು. ಅವರ ಹಾವಳಿಯನ್ನು ತಡೆಯಲಾರದೆ ಇಂದ್ರ ವಿಶ್ವಕರ್ಮನಿಂದ ತಿಲೋತ್ತಮೆಯನ್ನು ಸೃಷ್ಟಿ ಮಾಡಿಸಿ ಅವರ ಬಳಿಗೆ ಕಳುಹಿಸಿದ. ಅವಳನ್ನು ಕಂಡು ಮೋಹಿತರಾಗಿ ತಮ್ಮತಮ್ಮಲ್ಲೆ ಅವರು ಕಾದಾಡಿ ಮಡಿದರು.

10 ಸಾಮ್ಯವಾದ—ಆರ್ಥಿಕ ಮತ್ತು ರಾಜಕೀಯ ಸಮಾನತೆಯೇ ಸಾಮ್ಯವಾದದ ತಿರುಳು.

11 ಲಕ್ಷ್ಮಣನ ಗೆರೆ—ರಾಮನು ಸೀತೆಗಾಗಿ ಚಿನ್ನದ ಜಿಂಕೆಯನ್ನು ಹಿಡಿದು ತರಲು ಹೋದನು. ಲಕ್ಷ್ಮಣನು ಆಶ್ರಮದಲ್ಲಿದ್ದನು. ಆಗ 'ಓ ಲಕ್ಷ್ಮಣಾ' ಎಂಬ ರಾಮ ಸದೃಶವಾದ ಧ್ವನಿ ಕೇಳಿ ಬಂದುದರಿಂದ ಸೀತೆಯ ಇಷ್ಟಾನುಸಾರ ಲಕ್ಷ್ಮಣನು ರಾಮನನ್ನು ಹುಡುಕಿಕೊಂಡು ಹೋಗುವ ಮೊದಲು ಆಶ್ರಮದ ಮುಂದೆ ಮೂರು ಗೆರೆಗಳನ್ನು ಬರೆದು ಅದನ್ನು ದಾಟ ಬರಬಾರದೆಂದು ಸೀತೆಗೆ ಹೇಳಿ ಹೋದನು.

12 ಕೌಪೀನ ಸಂರಕ್ಷಣಾರ್ಥದ ಪಟಾಟೋಪದ ಕತೆ—ಒಬ್ಬ ಸನ್ಯಾಸಿಯಿದ್ದ. ಅವನ ಕೌಪೀನವನ್ನು ದಿನವೂ ಇಲಿ ಕತ್ತರಿಸಿ ಹಾಕುತ್ತಿತ್ತು. ಕೌಪೀನವನ್ನು ರಕ್ಷಿಸುವುದಕ್ಕಾಗಿ ಅವನು ಒಂದು ಬೆಕ್ಕನ್ನು ಸಾಕತೊಡಗಿದ. ಬೆಕ್ಕಿನ ಸಲುವಾಗಿ ಹಸುವನ್ನು ಅವನು ಸಾಕಬೇಕಾಯಿತು. ಹೀಗೆ ಕ್ರಮೇಣ ಅವನು ಸಂಸಾರವನ್ನೇ ಕಟ್ಟಿಕೊಂಡ.

13 ಶಾಂತಿನಿಕೇತನ—ಕಲ್ಕತ್ತೆಗೆ ಸುಮಾರು ನೂರು ಮೈಲಿ ದೂರದಲ್ಲಿರುವ ಬೋರ್‌ಪುರ ರೈಲ್ವೆ ನಿಲ್ದಾಣಕ್ಕೆ ಎರಡು ಮೈಲಿ ದೂರದಲ್ಲಿ ಶಾಂತಿನಿಕೇತನ ಇದೆ. ರವೀಂದ್ರನಾಥ ಠಾಕೂರರು ಇಲ್ಲಿ ಗುರುಕುಲವನ್ನು ಸ್ಥಾಪಿಸಿದರು. ಅದು ಈಗ ಬೆಳೆದು ವಿಶ್ವವಿದ್ಯಾನಿಲಯವಾಗಿದೆ. ಪ್ರಪಂಚದ ನಾನಾ ಭಾಗಗಳಿಂದ ವಿದ್ಯಾರ್ಥಿಗಳು ಬಂದು ಇಲ್ಲಿ ಶಿಕ್ಷಣವನ್ನು ಪಡೆಯುತ್ತಾರೆ.

14 ಭಸ್ಮಾಸುರ—ಪೂರ್ವದಲ್ಲಿ ಭಸ್ಮಾಸುರನೆಂಬ ರಾಕ್ಷಸ ತಾನು ಮುಟ್ಟಿದುದೆಲ್ಲವೂ ಭಸ್ಮವಾಗಲಿ ಎಂಬ ವರವನ್ನು ಪಡೆದು ಲೋಕವನ್ನು ಹಿಂಸಿಸುತ್ತಿದ್ದ. ವಿಷ್ಣು ಮೋಹಿನಿವೇಷವನ್ನು ತಾಳಿ ಭಸ್ಮಾಸುರನು ತನ್ನ ತಲೆಯಮೇಲೆ ತಾನೇ ಕೈಯಿಟ್ಟುಕೊಂಡು ಭಸ್ಮವಾಗುವಂತೆ ಮಾಡಿದ.

15. ರಷ್ಯಾದೇಶದ ಬೊಂಡ್ರಿನ್—ರಷ್ಯಾದೇಶದಲ್ಲಿ ೧೮೧೧–೧೮೬೯ರ ವರೆಗೆ ಜೀವಿಸಿದ್ದ ಒಬ್ಬ ವಿಮರ್ಶಕ. ಅವನು ಕೊನೆಯಲ್ಲಿ ಬಹಳ ಪ್ರತಿಗಾಮಿಯಾದ. ಜೀವನಕ್ಕೆ ಸಾಕಾಗುವಷ್ಟು ಮಾತ್ರ ಕೂಲಿ ಕೊಡಬೇಕೆನ್ನುವುದು ಅವನ ಮತ.

ಖುಲ್ನಿ—ಬಂಗಾಳ ಪ್ರಾಂತ್ಯದ ಒಂದು ಜಿಲ್ಲೆ.

೨. ಇವುಗಳ ಸಂದರ್ಭ ಮತ್ತು ಅರ್ಥವನ್ನು ವಿವರಿಸಿ:—

೧. ರಾವಣ ರಾಜ್ಯ ತಪ್ಪಿ ಕುಂಭಕರ್ಣ ರಾಜ್ಯ ಆದೀತು.
೨. ರಾಟೆ ಗ್ರಾಮಜೀವನದ ತಿರುಗಲಿ.
೩. ಅರ್ಥಶಾಸ್ತ್ರವು ಮುರಾರಿಯ ಹಾಗೆ ಮೂರಾಬಟ್ಟೆ ಹಿಡಿಯಬಾರದು.
೪. ಭಾರೀ ಯಂತ್ರ ಭಸ್ಮಾಸುರನಂತೆ.
೫. 'ಯಾಕೆ ವಿರಾಮ? ಏನು ಹಾಕಿ ಆಡಬೇಕೆ'?
೬. 'ಕೆಲಸವೇ ಮಾತು ಅದಕ್ಕಾಗಿಯೇ ಅಲ್ಲಿ ಮಾತಾಡಲಿಲ್ಲ'.
೭. 'ನೂಲಬೇಡ ಎಂದರೆ ಹೊಟ್ಟೆಗೆ ಏನೂ ತಿನ್ನಬೇಡ ಎಂದ ಹಾಗೆಯೆ ನನ್ನ ಪಾಲಿಗೆ'
೮. ಬಡವರಿಗಾಗಿ ತನ್ನ ಎದೆಯ ರಕ್ತ ಹಿಂಡಬಲ್ಲ ಧೀರನೇ ಮಹಾತ್ಮ.
೯. ಧರ್ಮಕ್ಕೆ ಹೊಂದದ ಅರ್ಥ ಕಾಸಿಗೆ ತರವಲ್ಲ.
೧೦. ಯಂತ್ರವಾಗಲಿ ವ್ಯೆಯಾಗಲಿ ಆತ್ಮವಿಕಾಸಕ್ಕೆ ಅನುಕೂಲವಾಗಬೇಕು.

೩. ಪ್ರಶ್ನೆಗಳು:—

೧. ಖಾದಿ ಮತ್ತು ರಾಟೆಯಲ್ಲಿ ಗಾಂಧೀಜಿ ಅವರಿಗಿರುವ ನಂಬಿಕೆಯನ್ನು ವಿವರಿಸಿ.
೨. ಯಂತ್ರಗಳ ವಿಷಯವಾಗಿ ಗಾಂಧೀಜಿ ಅವರ ಅಭಿಪ್ರಾಯವೇನು?
೩. ರವೀಂದ್ರನಾಥ ಠಾಕೂರರು ಖಾದಿ ಬೇಡವೆನ್ನಲು ಕಾರಣವೇನು? ಅವರನ್ನು ಗಾಂಧೀಜಿ ಹೇಗೆ ಸಮಾಧಾನಪಡಿಸಿದರು?
೪. ಗಾಂಧೀಜಿ ಅವರು ಖಾದಿ ಚಳುವಳಿಯನ್ನು ಹೇಗೆ ಕೈಗೊಂಡರು?

ರಣರಂಗಸಿಂಗನಾದ

# ಕುಮಾರ ರಾಮ

## ಆಲೂರ ವೆಂಕಟರಾಯ

ಕನ್ನಡ ಭಾಷೆಯ ಹಿರಿಯ ವೀರಾಭಿಮಾನಿಗಳಲ್ಲಿ ಶ್ರೀ ಆಲೂರ ವೆಂಕಟ ರಾಯರು ಅಗ್ರಗಣ್ಯರು. ಕನ್ನಡನುಡಿ ಮತ್ತು ನಾಡಿಗಾಗಿ ಶ್ರಮಿಸಿದವರಲ್ಲಿ ಅವರೊಬ್ಬರು. ೧೩ನೆಯ ಜುಲೈ ೧೮೮೦ ರಲ್ಲಿ ಬಿಜಾಪುರದಲ್ಲಿ ಜನಿಸಿದರು. ೧೯೦೫ರ ಹೊತ್ತಿಗೆ ಬಿ.ಎ., ಎಲ್.ಎಲ್.ಬಿ. ಪದವೀಧರರಾದರು. ಇತಿಹಾಸ, ಸಾಹಿತ್ಯ, ರಾಜಕಾರಣ ಮೊದಲಾದ ಕ್ಷೇತ್ರಗಳಲ್ಲಿ ದುಡಿದಿದ್ದಾರೆ. ಕರ್ನಾಟಕ ಗತವೈಭವ, ಕರ್ನಾಟಕದ ವೀರರತ್ನಗಳು, ನನ್ನ ಜೀವನ ಸ್ಮೃತಿಗಳು, ಗೀತಾ ರಹಸ್ಯ, ಗೀತಾಪ್ರಕಾಶ ಮೊದಲಾದ ಗ್ರಂಥಗಳನ್ನು ಬರೆದಿದ್ದಾರೆ. ಜಯ ಕರ್ನಾಟಕ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ— ಇವುಗಳನ್ನು ಸ್ಥಾಪಿಸಿದ್ದಾರೆ. ಧಾರವಾಡದ ವಿದ್ಯಾವರ್ಧಕ ಸಂಘ, ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಸಂಘಗಳಲ್ಲಿ ಸೇವೆ ಮಾಡಿದ್ದಾರೆ. "ಕರ್ನಾಟಕ ಕುಲ ಪುರೋಹಿತ" ಎಂಬ ಬಿರುದು ಅವರಿಗೆ ಇದೆ. ಈಗ ೭೬ ವರ್ಷದ ತಪಸ್ವಿಗಳಾಗಿದ್ದಾರೆ. 'ಕರ್ನಾಟಕದ ವೀರ ರತ್ನಗಳು' ಎಂಬ ಗ್ರಂಥದಿಂದ 'ಕುಮಾರ ರಾಮ' ಎಂಬ ಐತಿಹಾಸಿಕ ಕಥೆಯನ್ನು ಆರಿಸಿಕೊಳ್ಳಲಾಗಿದೆ.

1 ಕದಂಬ, 2 ಚಾಳುಕ್ಯ, 3 ರಾಷ್ಟ್ರಕೂಟ, 4 ಗಂಗ, 5 ಹೊಯ್ಸಳ ಮುಂತಾದ ರಾಜಮನೆತನಗಳು ಸಾವಿರಾರು ವರ್ಷ ಪರಮೋತ್ಸವದಿಂದ ಆಳಿ, ಕಾಲವಶ ದಿಂದ ಅಸ್ತವಾಗಿ ಹೋಗಿದ್ದವು. ಮುಸಲ್ಮಾನರು ದಕ್ಷಿಣದಲ್ಲಿ ಪ್ರವೇಶಿಸಿ, 6 ದೇವಗಿರಿ, 7 ಒರಂಗಲ್ಲ, 8 ದ್ವಾರಸಮುದ್ರ ಮುಂತಾದ ರಾಜಧಾನಿಗಳನ್ನು ಸೂರೆ ಗೊಂಡಿದ್ದರು. ಇಂತಹ ದುರ್ಧರವಾದ ಸಂಕಟ ಸಮಯದಲ್ಲಿ, 9 ಆನೆಗೊಂದಿ ಯಲ್ಲಿರುವ ಚಿಕ್ಕದೊಂದು ರಾಜ್ಯವು ರಾಷ್ಟ್ರ ರಕ್ಷಣೆಗಾಗಿ ಜೀವಗಳನ್ನು ಮುಡಿಪಾ ಗಿಟ್ಟು ಮುಸಲ್ಮಾನರೊಡನೆ ಕಾದಿ ಅವರಿಗೆ ಆಹುತಿಯಾಯಿತು. ಆ ಆಹು ತಿಯ ವೀರನೇ ಕುಮಾರ ರಾಮನೆಂಬವನು. ಆ ಆಹುತಿಯ ಪುಣ್ಯಬಲ ದಿಂದಲೇ ಸುಪ್ರಸಿದ್ಧವಾದ ವಿಜಯನಗರ ಸಾಮ್ರಾಜ್ಯದ ಉದಯ.

೧೪ನೆಯ ಶತಮಾನದ ಪ್ರಾರಂಭದಲ್ಲಿ ಆನೆಗೊಂದಿಯಲ್ಲಿ ಕಂಪಿಲ ನೆಂಬೊಬ್ಬ ಅರಸನು ಆಳುತ್ತಿದ್ದನು. ಆತನಿಗೆ ಹರಿಹರದೇವಿಯೆಂಬಾಕೆ ಹಿರಿಯ ಹೆಂಡತಿ, ರತ್ನಾಜಿ ಎಂಬಾಕೆ ಕಿರಿಯ ಹೆಂಡತಿ. ಹಿರಿಯಳ ಹೊಟ್ಟೆಯಲ್ಲಿ ಹುಟ್ಟಿದವನೇ ಕುಮಾರ ರಾಮನಾಥನು. ಈತನು ಪ್ರಬಲ

ಪರಾಕ್ರಮಿಯು. ಗೋವೆಯಲ್ಲಿ ಒಬ್ಬ ವರ್ತಕನ ಹತ್ತಿರ ಒಂದು ಸುಂದರವಾದ ಮತ್ತು ಎಡವಟ್ಟಾದ ಕುದುರೆಯಿತ್ತು. ಕುದುರೆಯನ್ನೇರುವುದು ಎಂತೆಂಥ ಸಾಹಣಿಗಳಿಗೂ ಸಾಧ್ಯವಾಗಿದ್ದಿಲ್ಲ. ಅದನ್ನು ಏರಿದವರಿಗೆ ಹತ್ತು ಸಾವಿರ ಟಂಕೆಗಳು ಇನಾಮಾಗಿ ಇಡಲ್ಪಟ್ಟಿದ್ದುವು. ತೀರ ಚಿಕ್ಕವನಿರುವಾಗಲೇ ಕುಮಾರ ರಾಮನು ಗೋವೆಗೆ ಹೋಗಿ ಧೀರತನದಿಂದ ಆ ಕುದುರೆಯನ್ನೇರಿ ಅದನ್ನು ರಾಜಧಾನಿಗೆ ಓಡಿಸಿಕೊಂಡು ಬಂದನು. ಕಂಪಿಲನಿಗೂ ಹೊಯ್ಸಳರಿಗೂ ಮೇಲಿಂದ ಮೇಲೆ ಕಾಳೆಗಗಳಾಗುತ್ತಿದ್ದುವು. ಒಂದು ಸಲ, ಕುಮಾರ ರಾಮನು ಹೊಯ್ಸಳ ರಾಜ್ಯವನ್ನು ಒಳಹೊಕ್ಕು ಒಂದು ಅಗ್ರಹಾರವನ್ನು ಸುಟ್ಟನು. ಕೂಡಲೆ ಹೊಯ್ಸಳ ಅರಸನಾದ ವೀರಬಲ್ಲಾಳನು ಕಂಪಿಲನೊಡನೆ ಯುದ್ಧಮಾಡಿದನು. ಕಂಪಿಲನು ರಾಮನಾಥನನ್ನು ದಂಡಿಗೆ ಅಧಿನಾಯಕನನ್ನಾಗಿ ನೇಮಿಸಿದನು. ಕುಮಾರ ರಾಮನಾಥನು ಅಕ್ಕಸಾಲೆಯ ಚಿಕ್ಕ, ಒಕ್ಕಲಿಗ ನಾಗಣ್ಣ, ಮಾದಿಗ ಹಂಪ, ಹೊಲೆಯರ ಹುಲ್ಲ ಮುಂತಾದ ಶೂರ ದಳವಾಯಿಗಳನ್ನೊಡಗೊಂಡು ಯುದ್ಧಕ್ಕೆ ಹೊರಟನು. ರಾಮನಾಥನ ದಂಡಿನಲ್ಲಿ ಅನೇಕ ತುರುಕ ರಾವುತರೂ ಕನ್ನಡರಾಯ ರಾವುತರೂ ಗುರ್ಜರ ರಾವುತರೂ ಇದ್ದರು. ಹೀಗೆ ಒಂದು ಲಕ್ಷ ಕಾಲಾಳುಗಳು, ೫ ಸಾವಿರ ರಾವುತರು, ಒಂದು ನೂರು ಆನೆಗಳುಳ್ಳ ರಾಯಪಡೆಯನ್ನೂ ಬೇಡರ ದಂಡನ್ನೂ ತೆಗೆದುಕೊಂಡು ಬಿಸಿಲಹಳ್ಳಿಯ ಮಾರ್ಗವಾಗಿ ಹೊರಟು ಆತನು ಹೊಯ್ಸಳರ ಸೈನ್ಯಕ್ಕೆ ಇದಿರಾದನು. ಹೊಯ್ಸಳರ ಸೈನ್ಯದಲ್ಲಿ ೩ ಲಕ್ಷ ಕಾಲಾಳುಗಳು, ೨೦ ಸಾವಿರ ಕುದುರೆಗಳು, ನಾಲ್ಕು ನೂರು ಆನೆಗಳೂ ಇದ್ದವು. ಆ ಯುದ್ಧದಲ್ಲಿ ರಾಮನಾಥನು ಹೊಯ್ಸಳ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿದನು. ಆತನ ಶೌರ್ಯಕ್ಕೆ ಅರಿಗಳು ಕಳವಳಿಸಿದರು. ಆದರೆ, ಮುಸಲ್ಮಾನರು ಹಿಂದುಸ್ಥಾನದಲ್ಲಿ ಹಾವಳಿಯನ್ನು ಮಾಡುತ್ತಿದ್ದ ಆಗಿನ ಕಾಲದಲ್ಲಿ, ಹಿಂದೂ ಅರಸರು ಹೀಗೆ ತಮ್ಮ ತಮ್ಮೊಳಗೆ ಕಲಹಮಾಡುವುದು ಲೇಸಲ್ಲವೆಂದು ಸುಜ್ಞರಾದ ಮಂತ್ರಿಗಳು ಉಪದೇಶಮಾಡಿದ್ದರಿಂದ, ಆ ಇಬ್ಬರು ಅರಸರಲ್ಲಿ ಒಪ್ಪಂದವಾಯಿತು. ರಾಜಧಾನಿಗೆ ಬಂದ ಬಳಿಕ, ಕಂಪಿಲನು ರಾಮನಾಥನಿಗೆ ರಾಜ್ಯವನ್ನೊಪ್ಪಿಸಿ, ತಾನು ಸ್ವಸ್ಥಚಿತ್ತದಿಂದಿದ್ದನು.

ಆ ಕಾಲಕ್ಕೆ ಒರಂಗಲ್ಲಿನಲ್ಲಿ, ವೀರರುದ್ರದೇವನೆಂಬವನು ಆಳುತ್ತಿದ್ದನು. ರಾಮನಾಥನು ತೆಲುಗರ ಗಂಡ, ಮೂವರು ರಾಯರ ಗಂಡ ಮುಂತಾದ ಬಿರುದುಗಳನ್ನು ಧರಿಸಿದ್ದನ್ನು ಕೇಳಿ ಪ್ರತಾಪರುದ್ರದೇವನು ಕೋಪಗೊಂಡನು. ಒಂಬತ್ತು ಲಕ್ಷ ಕಾಲಾಳುಗಳು, ಒಂದು ಲಕ್ಷ ರಾವುತರು,

ಒಂದು ನೂರು ಆನೆಗಳುಳ್ಳ ಮಹಾಸೈನ್ಯವನ್ನು ತೆಗೆದುಕೊಂಡು ಬಂದು, ಆತನು ಕಂಪಿಲನ ರಾಜ್ಯದ ಮೇಲೆ ದಾಳಿ ಇಟ್ಟನು. ಕಂಪಿಲನು ೨ ಲಕ್ಷ ಕಾಲಾಳುಗಳು, ೧೨ ಸಾವಿರ ರಾವುತರು, ೪೦೦ ಆನೆಗಳುಳ್ಳ ಸೈನ್ಯದೊಂದಿಗೆ ಆತನ ಸೈನ್ಯದ ಮೇಲೆ ಏರಿ ಬಿದ್ದನು. ಕುಮಾರ ರಾಮನು ಆಗ ೧೮ ವರ್ಷದ ಬಾಲಕನು. ಆದರೂ ಆತನು ಸೈನ್ಯದ ಮುಖಂಡತ್ವವನ್ನು ತಾನೇ ವಹಿಸಿ, ಉರುವಣೆಯಿಂದ ಕಾದು, ಪ್ರತಾಪರುದ್ರನ ಸೈನ್ಯವನ್ನು ಓಡಿಸಿಬಿಟ್ಟನು. ಆಗ ಪ್ರತಾಪರುದ್ರದೇವನು ಶರಣು ಬಂದು ಕಂಪಿಲನೊಡನೆ ಒಪ್ಪಂದಮಾಡಿಕೊಂಡನು.

ಕಾಕತೀಶ್ವರನಾದ ಪ್ರತಾಪರುದ್ರದೇವನನ್ನು ಕಂಪಿಲನು ಸೋಲಿಸಿದ ಸುದ್ದಿಯನ್ನು ಗಜಪತಿಯರಸನಾದ "ಕರಿಪತಿ ಕಪಿಲೇಶ್ವರನು" ಕೇಳಿ, ರಾಮನಾಥನೊಡನೆ ಯುದ್ಧಕ್ಕೆ ಅನುವಾದನು. ೩ ಲಕ್ಷ ಕಾಲಾಳುಗಳು, ೮ ಸಾವಿರ ಕುದುರೆಗಳು, ೮೦೦ ಆನೆಗಳನ್ನು ತೆಗೆದುಕೊಂಡು ಆ ಗಜಪತಿ ಅರಸನು ಕೃಷ್ಣವೇಣಿಯನ್ನು ದಾಟಿ ಕಂಪಿಲನೊಡನೆ ಕಾಳಗವಾಡಿದನು. ಗಜಪತಿಯ ಸೈನಿಕರು ರಾಮನಾಥನನ್ನು ಸುತ್ತುಗಟ್ಟಲು ಯತ್ನಿಸಿದರು. ಆದರೆ, ಕುಮಾರ ರಾಮನು ಅವರಲ್ಲಿಯ ಪ್ರಮುಖರೆಲ್ಲರನ್ನೂ ಕೊಂದು, ಗಜಪತಿಯನ್ನು ಗಂಡುಗೆಡಿಸಿದನು. ಅರಿಭೀಕರನಾದ ರಾಮನಾಥನು ಪರಸೈನ್ಯವನ್ನು ಅಟ್ಟಿ ರಾಜಧಾನಿಗೆ ಮರಳಿದನು.

ದಿಲ್ಲಿಯ ಸುಲ್ತಾನನಾದ ಮಹಮುದ್ ತಗಲಖನು ಕುಮಾರ ರಾಮನ ಕೊಲ್ವಚಲವನ್ನೂ ಗೆಲ್ವಬಿಡಗನ್ನೂ ಕೇಳಿದ್ದನು. ಆತನು ತನ್ನ ಮಗಳಿಗೆ ತಕ್ಕ ವರನನ್ನು ಹುಡುಕುವುದಕ್ಕೆ ನಾನಾ ದೇಶಗಳಿಗೆ ಬೇಹಿನವರನ್ನು ಕಳುಹಿಸಿದ್ದನು. ಆ ಬೇಹಿನವರು ಕುಮಾರ ರಾಮನ ಚಿತ್ರವೊಂದನ್ನು ದೊರಕಿಸಿ, ಅದನ್ನು ಸುಲ್ತಾನನ ಮಗಳಿಗೆ ಕೊಟ್ಟರು. ಕುಮಾರ ರಾಮನ ಆ ಸುಂದರವಾದ ರೂಪವನ್ನು ಚಿತ್ರದಲ್ಲಿ ನೋಡಿದೊಡನೆ, ಅವಳು ಆತನನ್ನು ವರಿಸಬೇಕೆಂದು ನಿಶ್ಚಯಿಸಿದಳು. ಸುಲ್ತಾನನು ಬಿದರೆ, ನಿಂಬಾಪುರ, ಜಂಬುಖಂಡಿ, ರಾಯಚೂರು ಮುಂತಾದ ಊರುಗಳನ್ನು ವರದಕ್ಷಿಣೆಯಾಗಿ ಸ್ವೀಕರಿಸಿ, ರಾಮನು ತನ್ನ ಮಗಳ ಪಾಣಿಗ್ರಹಣವನ್ನು ಮಾಡಬೇಕೆಂದು ಕಂಪಿಲನನ್ನು ಕೇಳಿಕೊಂಡನು. ಅದಕ್ಕೆ ಕಂಪಿಲನು ಒಪ್ಪಲಿಲ್ಲ. ಆಗ, ಸುಲ್ತಾನನು ತನ್ನ ಶಕ್ತಿಬಲದಿಂದ ಕುಮಾರ ರಾಮನನ್ನು ಕರೆದೊಯ್ಯಬೇಕೆಂದು ಮನಮಾಡಿದನು. ಅಷ್ಟರಲ್ಲಿ, ಬಾಹುದ್ದೀನನೆಂಬ ಸುಲ್ತಾನನ ಅಣ್ಣನ ಮಗನು ಬಂಡೆಬ್ಬಿಸಿ, ದಕ್ಷಿಣ ದೇಶಕ್ಕೆ ಬಂದು ಹೆದ್ದೊರೆಯನ್ನು ಎಂದರೆ ಕೃಷ್ಣಾನದಿಯನ್ನು ದಾಟಿ

ಕಂಪಿಲನ ರಾಜ್ಯವನ್ನು ಹೊಕ್ಕನು. ಕಂಪಿಲನು ತನಗೆ ಆಶ್ರಯವನ್ನು ಕೊಡಬೇಕೆಂದು ಆತನು ಬೇಡಿಕೊಂಡನು. ಕುಮಾರ ರಾಮನು ಶರಣಾಗತರನ್ನು ರಕ್ಷಿಸುವುದು ಕರ್ತವ್ಯವೆಂದೂ ಸುಲ್ತಾನನ ರೋಷವನ್ನು ಲೆಕ್ಕಿಸದೆ ಬಾಹ-ಉದ್ದೀನನಿಗೆ ಆಶ್ರಯ ಕೊಡಲೇಬೇಕೆಂದೂ ತಂದೆಗೆ ಅರುಹಿದನು. ಅದಕ್ಕೆ ಕಂಪಿಲನು ಒಪ್ಪಿ ಬಾಹ-ಉದ್ದೀನನನ್ನು ತನ್ನ ರಾಜಧಾನಿಯಲ್ಲಿ ಇಟ್ಟುಕೊಂಡನು. ಈ ಸುದ್ದಿಯನ್ನು ಕೇಳಿದೊಡನೆ ಸುಲ್ತಾನನು ಮತ್ತಷ್ಟು ಕ್ರೋಧಸಂತಪ್ತನಾಗಿ ಕಂಪಿಲನ ಮೇಲೆ ದಂಡನ್ನು ಕಳುಹಿಸಿದನು. ನೇಮೀಖಾನನೆಂಬ ಸರದಾರನು ಸುಲ್ತಾನನ ಅಪ್ಪಣೆಯನ್ನು ತೆಗೆದುಕೊಂಡು, ೪ ಲಕ್ಷ ಕುದುರೆದಳ, ೩ ಸಾವಿರ ಆನೆದಳ, ೨ ಸಾವಿರ ಒಂಟೆದಳಗಳೊಂದಿಗೆ ಕರ್ನಾಟಕದ ಮೇಲೆ ದಾಳಿಯೆತ್ತಿ ಬಂದನು. ಒಕ್ಕಲಿಗ ಮತ್ತು ಬೇಡರ ಪಡೆಯನ್ನು ಹುರಿದುಂಬಿಸಿಕೊಂಡು ಬೈಚಪ್ಪನೆಂಬ ಮಂತ್ರಿಯು ಅವರೊಡನೆ, ಕುಮ್ಮಟದುರ್ಗಕ್ಕೆ ಹೋಗಿ ನಿಂತನು. ನೇಮೀಖಾನನು ಒರೆಗಲ್ಲು, ಬಾದಾಮಿ, ಮುದಗಲ್ಲು ಮುಂತಾದ ಕೋಟೆಗಳನ್ನು ತೆಗೆದುಕೊಂಡು ಹೆದ್ದೊರೆಗೆ ಬಂದನು. ಇದನ್ನು ಕೇಳಿ, ಕುಮಾರ ರಾಮ ಮತ್ತು ಬಾಹ-ಉದ್ದೀನ ಇವರೊಂದಿಗೆ ಕಂಪಿಲನೂ ಕುಮ್ಮಟ ದುರ್ಗಕ್ಕೆ ಬಂದನು. ಅಲ್ಲಿ, ಕರ್ನಾಟಕ ಸೈನ್ಯಕ್ಕೂ ಸುಲ್ತಾನನ ಸೈನ್ಯಕ್ಕೂ ಘೋರವಾದ ಸಂಗ್ರಾಮವಾಯಿತು. ಗಂಡುದೋರ್ಪರಿಗೆ ಮಾರಿಯಾದ ಕುಮಾರ ರಾಮನೂ ಬಲ್ಲಿದರಿಗೆ ಘಟಸರ್ಪನಾದ ಕಂಪಿಲನೂ ಮೊದಲನೆಯ ದಿವಸದ ಕಾಳಗದಲ್ಲಿ ಶತ್ರುಗಳನ್ನು ಗೆದ್ದರು. ಮರುದಿವಸ ನೇಮೀಖಾನನು ಕುಮ್ಮಟದುರ್ಗದ ಮೇಲೆ ಲಗ್ಗೆ ಹತ್ತಿದನು. ಆದರೆ, ಕುಮಾರ ರಾಮನು ಅತ್ಯಂತ ದೋರ್ವಿಕ್ರಮಾಡಂಬರದಿಂದ ಕಾದಿ, ನೇಮೀಖಾನನನ್ನು ಹಿಮ್ಮೆಟ್ಟಿಸಿದನು. ಕಂಪಿಲನೂ ಕುಮಾರ ರಾಮನೂ ತಮ್ಮ ರಾಜಧಾನಿಯಾದ ಹೊಸದುರ್ಗಕ್ಕೆ ಬಂದರು. ನೇಮೀಖಾನನು ದಿಲ್ಲಿಗೆ ಓಡಿಹೋಗಿ, ತನ್ನ ಸೋಲಿನ ಸುದ್ದಿಯನ್ನು ಸುಲ್ತಾನನಿಗೆ ಅರುಹಿದನು. ಸುಲ್ತಾನನು ಅದನ್ನು ಕೇಳಿ ಅಂಗುಷ್ಟದಿಂದ ಮಸ್ತಕದವರೆಗೆ ಬೆಂಕಿಯಾದನು.

ಇಷ್ಟರಲ್ಲಿ, ಹಿಮಋತುವು ಹೋಗಿ ಚೈತ್ರಮಾಸವು ಪ್ರಾರಂಭವಾಗಿತ್ತು. ಆ ಮಾಸದಲ್ಲಿ ಸ್ಥೂಲಬ್ರಹ್ಮನ ಪೂಜೆಯೆಂಬ ಉತ್ಸವವು ಕಂಪಿಲನ ರಾಜಧಾನಿಯಲ್ಲಿ ನಡೆಯಿತು. ಆ ಉತ್ಸವಕ್ಕೆ ಕಂಪಿಲನು ತನ್ನ ರಾಜ್ಯದೊಳಗಿನ ಯಾವತ್ತು ಬಂಟರನ್ನು ಕರೆಯಿಸಿದ್ದನು. ವೀರರ ಆಟನೋಟಗಳು ನಡೆದಿದ್ದವು. ಕಂಪಿಲನ ಕಿರಿಯ ಹೆಂಡತಿಯಾದ ರತ್ನಾಜಿ ಎಂಬವಳು ತನ್ನ

ಅರಮನೆಯೊಳಗೆ ನಿಂತುಕೊಂಡು ಆ ಆಟಗಳನ್ನು ನೋಡುತ್ತಿದ್ದಳು. ಅವಳ ಕಣ್ಣು ಆಟವಾಡುವ ಕುಮಾರ ರಾಮನ ಮೇಲೆ ಬಿದ್ದಿತು. ಕೂಡಲೆ, ಅವಳು ಆತನಿಗೆ ಮೋಹಿಸಿದಳು. ಹೊತ್ತು ಸಾಧಿಸಿ ಕುಮಾರ ರಾಮನನ್ನು ಒಲಿಸುವುದನ್ನು ನಿಶ್ಚಯಿಸಿದಳು. ಒಂದು ದಿನ ಕುಮಾರ ರಾಮನು ಮುತ್ತಿನ ಚೆಂಡಿನಿಂದ ಆಡುತ್ತಿರಲು, ಆಕಸ್ಮಿಕವಾಗಿ ಆ ಚೆಂಡು ರತ್ನಾಜಿಯ ಅರಮನೆಯಲ್ಲಿ ಬಿದ್ದಿತು. ರಾಮನು ಅದನ್ನು ತೆಗೆದುಕೊಳ್ಳುವುದಕ್ಕೆ ಆ ಅರಮನೆಯಲ್ಲಿ ಹೊಕ್ಕನು. ರತ್ನಾಜಿಯು ಆ ಸಂಧಿಯನ್ನು ಸಾಧಿಸಿ ತನ್ನ ಕಾಮವನ್ನು ತೃಪ್ತಿಗೊಳಿಸುವುದಕ್ಕೆ ಪರಿಪರಿಯಿಂದ ಬೇಡಿಕೊಂಡಳು. ಶೃಂಗಾರ ಚೇಷ್ಟೆಗಳನ್ನು ಮಾಡಿದಳು. ಆದರೆ, ಪರದಾರಸೋದರನಾದ ಕುಮಾರ ರಾಮನು ಅವುಗಳಿಗೆ ಮನಸೋಲುವನೇ? ಆ ಧೀರನು ಯುಕ್ತಿಯಿಂದ ಅಲ್ಲಿಂದ ಜಾರಿ ಹೊರಗೆ ಹೋದನು. ಕೂಡಲೆ ರತ್ನಾಜಿಯು ಆತನ ಮೇಲೆ ಕಡುಮುಳಿದು ಸೇಡು ತೀರಿಸಿಕೊಳ್ಳುವುದನ್ನು ಗೊತ್ತುಮಾಡಿದಳು. ಕುಮಾರ ರಾಮನು ತನ್ನ ಪಾತಿವ್ರತ್ಯವನ್ನು ಭಂಗಪಡಿಸುವುದಕ್ಕೆ ಉದ್ಯುಕ್ತನಾಗಿರುವನೆಂದು ಅವಳ ಗಂಡನ ಮುಂದೆ ದೂರು ಹೇಳಿದಳು. ಕಂಪಿಲನು ಕುಮಾರ ರಾಮನನ್ನು ಕೊಲೆಗಡಕರ ಕೈಗೆ ಕೊಟ್ಟನು. ಮಂತ್ರಿಯಾದ ಬೈಚಪ್ಪನು ಕೊಲೆಗಡಕರಿಂದ ಆತನನ್ನ ಪಾರುಮಾಡಿಕೊಂಡು ಆತನನ್ನೂ ಆತನನ್ನು ನೆರೆನಂಬಿದ ಆತನ ಸಂಗಡಿಗರನ್ನೂ ಒಂದು ಗವಿಯಲ್ಲಿ ಬಚ್ಚಿಟ್ಟು, ಕುಮಾರ ರಾಮನನ್ನೂ ಆತನ ಹೆಂಡಂದಿರನ್ನೂ ತಾನು ಕೊಲೆಗಡಕರಿಂದ ಕೊಲ್ಲಿಸಿದೆನೆಂದು ಬೈಚಪ್ಪ ಮಂತ್ರಿಯು ಅರಸನಿಗೆ ನಿವೇದಿಸಿದನು. ಕುಮಾರ ರಾಮನಾಥನು ಸತ್ತನೆಂಬ ಸುದ್ದಿಯನ್ನು ಸುಲ್ತಾನನು ಕೇಳಿ ಪುನಃ ನೇಮೀಖಾನನನ್ನು ಕಂಪಿಲನನ್ನು ಸೆರೆ ಹಿಡಿದುಕೊಂಡು ಬರುವುದಕ್ಕೆ ಕಳುಹಿಸಿದನು. ಆತನು ಮೂರುಲಕ್ಷ ಒಂಬತ್ತು ಸಾವಿರ ಸೈನ್ಯದೊಂದಿಗೆ ದಕ್ಷಿಣಕ್ಕೆ ಹೊರಟನು. ಇದನ್ನು ಕೇಳಿ, ಕಂಪಿಲನು ಕಂಪಿತಹೃದಯನಾದನು. ಆಗ ಆತನಿಗೆ ಶೂರ ಪುತ್ರನಾದ ರಾಮನಾಥನ ನೆನಪು ಆಯಿತು. ಆದರೆ, ರಾಮನಾಥನು ಸತ್ತುಹೋಗಿದ್ದನೆಂದು ಆತನ ತಿಳವಳಿಕೆಯಾಗಿದ್ದರಿಂದ ಆ ನೆನಪು ಶೋಕದಲ್ಲಿಯೇ ಸಮಾಪ್ತವಾಯಿತು. ಕಂಪಿಲನು ಸೈನ್ಯಸನ್ನಾಹವನ್ನು ಮಾಡುವುದಕ್ಕೆ ಬೈಚಪ್ಪ ಮಂತ್ರಿಗೆ ಆಜ್ಞಾಪಿಸಿದನು. ಅಷ್ಟರಲ್ಲಿ ನೇಮೀಖಾನನು ಕೃಷ್ಣಾನದಿಯನ್ನು ದಾಟಿದ್ದನು. ಕಂಪಿಲನು ಗಾಬರಿಗೊಂಡು ಬೈಚಪ್ಪನನ್ನು ಒಳಿತಾಗಿ ಬೈದನು. ಬೈಚಪ್ಪನು ಕಂಪಿಲನಿಗೆ ಧೈರ್ಯವನ್ನು ಕೊಟ್ಟು, ಅದ್ವಿತೀಯ ಶೂರನಾದ ಒಬ್ಬ ಬಂಟನು ಕಂಪಿಲನ ಪರವಾಗಿ ಯುದ್ಧಮಾಡುವನೆಂದು ಹೇಳಿದನು.

ಬೈಚಪ್ಪನು ದೊಡ್ಡದೊಂದು ಸೈನ್ಯದೊಂದಿಗೆ ನೇಮೀಖಾನನ ಮೇಲೆ ಸಾಗಿ ಹೋಗಬೇಕೆಂದು ಕಂಪಿಲನು ಬೈಚಪ್ಪನಿಗೆ ಆಜ್ಞಾಪಿಸಿದನು. ಕುಮ್ಮಟ ದುರ್ಗದಲ್ಲಿ ಭಯಂಕರ ಕಾಳಗಕ್ಕೆ ಮೊದಲಾಯಿತು. ಕಂಪಿಲನ ಸೈನಿಕರು ಅತ್ಯಂತ ಸಾಹಸದಿಂದ ಕುಮ್ಮಟದುರ್ಗವನ್ನು ಸಂರಕ್ಷಿಸುವುದಕ್ಕೆ ಪ್ರಯತ್ನ ಪಟ್ಟರು. ರಾಮನಾಥನು ಸತ್ತಿದ್ದರಿಂದ, ಕುಮ್ಮಟದುರ್ಗವನ್ನು ಸಂರಕ್ಷಿಸುವ ಜಿಗುಟುಳ್ಳ ಶೂರರಾರೂ ಇಲ್ಲವೆಂದು ನೇಮೀಖಾನನು ಸ್ವಸ್ಥಚಿತ್ತದಿಂದಿದ್ದನು. ಇತ್ತ ಬೈಚಪ್ಪದಂಡನಾಯಕನು ರಾಮನಾಥನನ್ನೂ ಆತನ ಸಂಗಡಿಗರನ್ನೂ ಗವಿಯಿಂದ ಹೊರಕ್ಕೆ ತೆಗೆದು ಅವರನ್ನು ಯುದ್ಧಕ್ಕೆ ಸಜ್ಜುಗೊಳಿಸಿದ್ದನು. ತಡೆಯಲ್ಲಿದ್ದ ವೀರರಸಪ್ರವಾಹವು ಧುಮ್ಮಿಕ್ಕಿ ಹರಿಯಿತೆಂಬಂತೆ ಪರಬಲ ಕೃತಾಂತನಾದ ರಾಮನಾಥನು ಕಾದಿ, ನೇಮೀಖಾನನ ಸೈನಿಕರನ್ನು ವಿಧ್ವಂಸ ಮಾಡಿ, ಅದ್ವಿತೀಯವಾದ ಶೌರ್ಯವನ್ನು ತೋರಿಸಿದನು. ರಣರಂಗ ಶೂದ್ರಕನಾದ ನೇಮೀಖಾನನು ಸಂಪೂರ್ಣವಾಗಿ ಪರಾಜಯ ಹೊಂದಿ ಬೆಂಗೊಟ್ಟೋಡಿದನು. ಹೀಗೆ ರಾಮನಾಥನು ವಿಜಯಮಾಲೆಯನ್ನು ಕೊರಳಿನಲ್ಲಿ ಹಾಕಿಕೊಂಡು ತಂದೆಯ ಸನ್ನಿಧಾನಕ್ಕೆ ಬಂದನು. ತಂದೆಯು ಅತ್ಯಂತ ಆಶ್ಚರ್ಯಚಕಿತನಾದನು. ಬೈಚಪ್ಪನು ಆಗ ನಿಜ ವೃತ್ತಾಂತವನ್ನು ನಿವೇದಿಸಿ, ಕಂಪಿಲನನ್ನು ಆನಂದಗೊಳಿಸಿದನು. ರಾಮನಾಥನು ಪ್ರಕಟನಾದ ಸಂಗತಿಯನ್ನು ಕೇಳಿ ರತ್ನಾಜಿಯು ಆತ್ಮಹತ್ಯವನ್ನು ಮಾಡಿಕೊಂಡಳು!

ನೇಮೀಖಾನನು ಪುನಃ ಸೋತುಬಂದುದನ್ನು ಕೇಳಿ ಸುಲ್ತಾನನು ಅತ್ಯಂತ ರೋಷಿತನಾದನು. "ರಾಮನಾಥನನ್ನು ಸರಿಗಟ್ಟುವ ಧೀರರು ನನ್ನ ಸೈನಿಕರಲ್ಲೊಬ್ಬರೂ ಇಲ್ಲವೇ?" ಎಂದು ಗದ್ದರಿಸಿದನು. ಸುಲ್ತಾನನ ದ್ವಾರಪಾಲಿಕೆಯಾದ ಮಾತಂಗಿ ಎಂಬ ಮಾದರವಳೊಬ್ಬಳು ಮುಂದೆ ಬಂದು, ಸುಲ್ತಾನನು ಆಜ್ಞಾಪಿಸಿದರೆ, ತಾನು ರಾಮನಾಥನನ್ನು ಸೋಲಿಸಿ ಬರುವೆನೆಂದು ಹೇಳಿದಳು. ಮೊದಲು ಸುಲ್ತಾನನಿಗೆ ಅವಳ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. ಆದರೆ ಅವಳು ಪರಿಪರಿಯಾಗಿ ಆಶ್ವಾಸನ ಕೊಟ್ಟದ್ದರಿಂದ, ಸುಲ್ತಾನನು ದಂಡಿನೊಡನೆ ಅವಳನ್ನು ದಕ್ಷಿಣಕ್ಕೆ ಕಳುಹುವುದಕ್ಕೆ ಒಡಂಬಟ್ಟನು. ಈ ಮಾತಂಗಿಯು ಸುಲ್ತಾನನಿಂದ ವೀಳ್ಯವನ್ನು ಸ್ವೀಕರಿಸಿ ಮಹಾಸೇನಾಸಾಗರದೊಡನೆ ಕಂಪಿಲನ ರಾಜ್ಯದ ಮೇಲೆ ದಂಡೆತ್ತಿ ಬಂದಳು. ಅವಳು ನೆಟ್ಟಗೆ ಬಂದು ಕುಮಾರ ರಾಮನು ಇದ್ದ ಕುಮ್ಮಟದುರ್ಗವನ್ನೇ ಮುತ್ತಿದಳು. ಸುಲ್ತಾನನಿಂದ ಓಡಿ ಬಂದ ಬಾಹ-ಉದ್ದೀನನನ್ನು ಕುಮಾರ ರಾಮನು ಸುಲ್ತಾನನ ವಶಕ್ಕೆ ಒಪ್ಪಿಸಬೇಕೆಂದೂ ಸುಲ್ತಾನನ ಮಗಳನ್ನು

ಲಗ್ನವಾಗಬೇಕೆಂದೂ ರಾಮನಾಥನಿಗೆ ಮಾತಂಗಿಯು ಹೇಳಿಕಳುಹಿದಳು. ಶರಣಾಗತರನ್ನು ಒಪ್ಪಿಸುವುದು ತನ್ನ ಧರ್ಮವಲ್ಲವೆಂದೂ ಮುಸಲ್ಮಾನರ ಮಗಳನ್ನು ಮದುವೆಯಾಗುವಂತಹ ಅಧರ್ಮದ ಕೃತ್ಯವನ್ನು ಮಾಡಲಾರೆನೆಂದೂ ರಾಮನಾಥನು ನಿಕ್ಷುಣ್ಣವಾಗಿ ಉತ್ತರ ಕೊಟ್ಟನು. ಆಗ ಯುದ್ಧಕ್ಕೆ ಪ್ರಾರಂಭವಾಯಿತು. ರಾಮನಾಥನು ಅತ್ಯಂತ ರಭಸದಿಂದ ಕಾದಿ, ಮಾತಂಗಿಯ ಸೈನ್ಯವನ್ನು ಇಬ್ಬದಿಯಾಗಿ ಮಾಡಿ ಒಳಗೆ ಹೊಕ್ಕನು. ಆತನು ಸಿಂಹಗರ್ಜನೆಯನ್ನು ಮಾಡಿ, ಶತ್ರುಸೈನ್ಯವನ್ನು ನುಚ್ಚುನುರಿಯಾಗಿ ಮಾಡಿದನು. ಆದರೆ ಆತನ ದೈವವು ತುಂಬಿಬಂದಿತು. ಇತ್ತ ಆತನು ಪರಬಲವನ್ನು ಹೊಕ್ಕು, ಅದನ್ನು ಈಡಾಡುವುದರಲ್ಲಿ ತೊಡಗಿರುವಾಗ ಅತ್ತ ಮತ್ತೊಂದು ಭಾಗದಲ್ಲಿ ಮಾತಂಗಿಯ ಸೈನಿಕರು ಕಂದಕಗಳನ್ನು ಹುಗಿದು ಕೋಟೆಯ ಗೋಡೆಗಳನ್ನು ಏರಿ, ಕೋಟೆಯ ಒಳಗೆ ಹೊಕ್ಕಿದ್ದರು. ಕೋಟೆಯ ಒಳಗಿದ್ದವರು ಬಿಸಿಬಿಸಿ ಉಸುಬಿನ ಚೀಲಗಳನ್ನು ಎರಚಿಯೂ ಸುಡುವ ಎಣ್ಣೆಯನ್ನು ನೆತ್ತಿಯಮೇಲೆ ಸುರುವಿಯೂ ಶತ್ರುಗಳನ್ನು ಹಿಂದಕ್ಕಟ್ಟುವುದಕ್ಕೆ ವಿಶ್ವಪ್ರಯತ್ನ ಮಾಡಿದರು. ಆದರೆ ಸಾಧ್ಯವಾಗಲಿಲ್ಲ. ರಾಮನಾಥನು ನೆರೆನಂಬಿದ ಹೊಲೆಯರ ಹುಲ್ಲ ಮತ್ತು ಮಾದಿಗರ ಹಂಪ ಮುಂತಾದ ಬಂಟರೆಲ್ಲರೂ ಈ ಕಾಳಗದಲ್ಲಿ ಮಡಿದು ಹೋದರು. ಕೋಟೆಯ ಕೆಳಗಿನ ಊರು ಶತ್ರುಗಳ ಕೈವಶವಾಯಿತು. ಶತ್ರುಗಳು ಊರಿಗೆ ಬೆಂಕಿಯನ್ನು ಹಚ್ಚಿದರು. ಆಗ ಮಾತ್ರ ರಾಮನಾಥನು ಚಿಂತಾಕ್ರಾಂತನಾದನು. ಆತನು ಕೋಟೆಯ ಒಳಗೆ ಹೋಗಿ ನೋಡುತ್ತಾನೆ! ಅರಮನೆಯ ಹೆಂಗಸರೆಲ್ಲರೂ ದೊಡ್ಡದೊಂದು ಅಗ್ನಿಯನ್ನು ಹೊತ್ತಿಸಿ, ಅದರಲ್ಲಿ ಆಹುತಿಯಾಗುವುದಕ್ಕೆ ಸಿದ್ಧರಾಗಿದ್ದರು! ಒಬ್ಬರನ್ನೊಬ್ಬರು ಆಲಿಂಗನ ಮಾಡಿಕೊಂಡು, ಆತ್ಮಾಹುತಿಯ ಧಾರ್ಮಿಕ ವಿಧಿಗಳನ್ನು ಆನಂದದಿಂದ ನೆರವೇರಿಸುತ್ತಿದ್ದರು! ರಾಮನಾಥನು ಪವಿತ್ರವಾದ ದೇವಾಲಯವನ್ನು ಹೊಕ್ಕು ದೇವಾಧಿದೇವನಾದ ಶಿವನನ್ನು ಪೂಜಿಸಿದನು. ಮರಳಿ ಬಂದು, ರಾಮನಾಥನು ನೆರೆದಿರುವ ಸ್ತ್ರೀಯರಿಗೆ ಅಗ್ನಿಕುಂಡದಲ್ಲಿ ಹಾರಿ ಶೂರತನದಿಂದ ಸತ್ತು ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳುವುದಕ್ಕೆ ಉದ್ಬೋಧಿಸಿದನು. ಆ ಬಳಿಕ, ಅವರೆಲ್ಲರೂ ಒಬ್ಬೊಬ್ಬರೇ ಅಗ್ನಿಕುಂಡದಲ್ಲಿ ಹಾರಿಕೊಂಡು ಸಂತೋಷದಿಂದ ಪ್ರಾಣವನ್ನು ತೊಲಗಿದರು!! ರಾಮನಾಥನು ಮುತ್ತು ರತ್ನಗಳನ್ನೂ ದ್ರವ್ಯವನ್ನೂ ಮಿಕ್ಕ ಬೆಲೆಯುಳ್ಳ ಪದಾರ್ಥಗಳನ್ನೂ ಕೂಡಿಸಿ, ಬಾಹು-ಉದ್ದೀನನ ಕಡೆಗೆ ಕಳುಹಿಸಿಕೊಟ್ಟು ತಾನು ಪೂರ್ಣಾಹುತಿಯನ್ನು ಕೊಡುವುದಕ್ಕೆ ಕಂಕಣಬದ್ಧನಾದನು. ರಾಮನಾಥನೂ ಆತನ ಸಂಗಡಿಗರೂ ಶತ್ರುಗಳ ಸೈನ್ಯ

ವನ್ನು ಒಳನುಗ್ಗಿ, ಇರಿದು ಕಾದಾಡಿ ಕೊನೆಗೆ ಪ್ರಾಣಬಿಟ್ಟರು!! ಮಾತಂಗಿಯು ವಿಜಯ ಹೊಂದಿದಳು. ರಾಮನಾಥನ ರುಂಡವನ್ನು ಸುಲ್ತಾನನ ಕಡೆಗೆ ದಿಲ್ಲಿಗೆ ಕಳುಹಿಸಿದಳು. ರಾಮನಾಥನ ರುಂಡವನ್ನು ನೋಡಿದೊಡನೆಯೆ, ಸುಲ್ತಾನನ ಮಗಳು ಹೌಹಾರಿ ತಾನೂ ಪ್ರಾಣವನ್ನು ತೊಲಗಿದಳು!!

ಈ ರೀತಿಯಾಗಿ, ಪರದಾರಸೋದರನೂ ರಣರಂಗಸಿಂಗನೂ ಆದ ಕುಮಾರ ರಾಮನು ಅದ್ವಿತೀಯವಾದ ಸಾಹಸವನ್ನೂ, ನಿಷ್ಕಲಂಕವಾದ ಶೀಲವನ್ನೂ ಜಗತ್ತಿಗೆ ತೋರ್ಪಡಿಸಿ, ದುರ್ದೈವದಿಂದ ಕುಮ್ಮಟದುರ್ಗದ ಕಾಳಗದಲ್ಲಿ ಕಾಲವಶನಾದನು. ಕುಮ್ಮಟದುರ್ಗದಲ್ಲಿ ಕರ್ನಾಟಕದ ವೀರ ಸ್ತ್ರೀಯರು ಹೊತ್ತಿಸಿದ ಅಗ್ನಿಕುಂಡದ ಮೂಲಕವೇ ಹಕ್ಕಬುಕ್ಕರೆಂಬ ಜ್ಯೋತಿಗಳು ಹುಟ್ಟಿದುವು. ಅವರು ವೀರಾವತಾರವನ್ನು ತಾಳಿ, ವಿಜಯನಗರದ ಸಿಂಹಾಸನವನ್ನು ಸ್ಥಾಪಿಸಿದರು.

## ಅಭ್ಯಾಸ

### ೧. ಕಠಿಣ ಶಬ್ದಗಳ ಅರ್ಥ :—

ಅಸ್ತ—ನಾಶ, ಮುಳುಗುವುದು. ದುರ್ಧರ—ಸಹಿಸಲಾಗದ. ಎಡವಟ್ಟು—ತೊಂದರೆ, ಗಲಾಟೆ. ಸಾಹಣಿ—ಕುದುರೆ ಸವಾರ. ಟೆಂಕೆ—ಹದಿನಾರು ದುಡ್ಡಿನ ಒಂದು ನಾಣ್ಯ. ಕಾಳೆಗ—ಯುದ್ಧ. ರಾವುತ—ಕುದುರೆ ಸವಾರ. ಗುರ್ಜರ—ಗುಜರಾತ್. ಬಂಡು—ದಂಗೆ. ಸುಜ್ಞ—ಬುದ್ಧಿವಂತ. ಕೃಷ್ಣವೇಣಿ—ಕೃಷ್ಣಾನದಿ. ಉರುಮಣೆ—ವಿಜೃಂಭಣೆ. ಬೆಂಗೊಟ್ಟೋಡು—ಪಲಾಯನಮಾಡು, ಗಂಡುಗೆಡಿಸು—ಶಕ್ತಿಗುಂದಿಸು, ಕೆಚ್ಚನ್ನು ಅಡಗಿಸು. ಅರಿಭೀಕರ—ಶತ್ರುಗಳಿಗೆ ಭಯಂಕರನಾದವನು. ಹೆದ್ದೊರೆ—ದೊಡ್ಡ ತೊರೆ. ಗಂಡು—ಪರಾಕ್ರಮ. ದೋರ್ವಿಕ್ರಮ—ಬಾಹುಬಲ, ತೋಳಿನ ಬಲ. ಮಸ್ತಕ—ತಲೆ. ಪರದಾರಸೋದರ—ಪರಸ್ತ್ರೀಯನ್ನು ಸೋದರಿಯಂತೆ ಕಾಣುವವನು. ಪರಬಲಕೃತಾಂತ—ಶತ್ರು ಸೈನ್ಯಕ್ಕೆ ಯಮಸ್ವರೂಪನಾದವನು. ನಿಕ್ಷುಣ್ಣವಾಗಿ—ಸ್ಪಷ್ಟವಾಗಿ. ಇಬ್ಬದಿ—ಎರಡು ಕಡೆ. ಉಸುಬು—ಮರಳು. ಉದ್ಬೋಧಿಸು—ಹೇಳು, ಉಪದೇಶಿಸು. ಹುಗಿ—ಮುಚ್ಚು. ಬಂಟ—ಸೇವಕ. ರಣರಂಗಸಿಂಗ—ಯುದ್ಧಭೂಮಿಯಲ್ಲಿ ಪರಾಕ್ರಮದಿಂದ ಕಾದಾಡುವವನು. ಕಾಲವಶನಾಗು—ಸ್ವರ್ಗಸ್ಥನಾಗು.

1 ಕದಂಬರು—೪ನೆಯ ಶತಮಾನದಿಂದ ೬ನೆಯ ಶತಮಾನದವರೆಗೆ ಬನವಾಸಿಯಲ್ಲಿ ಆಳುತ್ತಿದ್ದ ಅರಸರು.

2 ಚಾಳುಕ್ಯರು—ಹತ್ತರಿಂದ ಹದಿಮೂರನೆಯ ಶತಮಾನದವರೆಗೆ ಕಲ್ಯಾಣಿಯಲ್ಲಿ ಆಳುತ್ತಿದ್ದ ಅರಸರು.

3. ರಾಷ್ಟ್ರಕೂಟರು—ಹೈದರಾಬಾದಿನಲ್ಲಿರುವ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ೮ ರಿಂದ ೧೧ನೆಯ ಶತಮಾನದವರೆಗೆ ಆಳಿದ ಅರಸರು.

4. ಗಂಗರು—೩ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ತಲಕಾಡಿನಲ್ಲಿ ಆಳಿದ ರಾಜರು.

5. ಹೊಯ್ಸಳರು—ಹಳೆಯಬೀಡು ಬೇಲೂರುಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ೧೧ರಿಂದ ೧೪ನೆಯ ಶತಮಾನದವರೆಗೆ ಆಳಿದರು.

6. ದೇವಗಿರಿ—ಹೈದರಾಬಾದಿನ ಔರಂಗಾಬಾದ್ ಜಿಲ್ಲೆಯಲ್ಲಿದೆ. ಹನ್ನೊಂದರಿಂದ ಹದಿನಾಲ್ಕನೆಯ ಶತಮಾನದವರೆಗೆ ಯಾದವ ವಂಶದವರು ಇಲ್ಲಿ ಆಳುತ್ತಿದ್ದರು.

7. ಒರಂಗಲ್ಲು—ಇಲ್ಲಿ ಕಾಕತೀಯರು ಆಳುತ್ತಿದ್ದರು. ಹೈದರಾಬಾದು ಪೂರ್ವದಲ್ಲಿ ಒರಂಗಲ್ಲಿನ ರಾಜಧಾನಿಯಾಗಿತ್ತು.

8. ದ್ವಾರಸಮುದ್ರ—ಈಗಿನ ಹಳೆಯಬೀಡು. ಇಲ್ಲಿ ಹೊಯ್ಸಳರು ಹನ್ನೊಂದರಿಂದ ಹದಿನಾಲ್ಕನೆಯ ಶತಮಾನದವರೆಗೆ ರಾಜ್ಯವಾಳಿದರು.

9. ಆನೆಗೊಂದಿ—ಹಂಪೆಯ ಬಳಿ ತುಂಗಭದ್ರಾನದಿಯ ದಡದಲ್ಲಿರುವ ಒಂದು ಚಿಕ್ಕ ಸಂಸ್ಥಾನ.

10. ಗೋವೆ—ಪೋರ್ಚುಗೀಸರ ವಶದಲ್ಲಿರುವ ಈಗಿನ ಗೋವ. ಕದಂಬರ ಒಂದು ಶಾಖೆ ೧೧ನೆಯ ಶತಮಾನದಲ್ಲಿ ಇಲ್ಲಿ ಆಳುತ್ತಿತ್ತು.

11. ವೀರಬಲ್ಲಾಳ—ಸುಮಾರು ೧೨೯೦-೧೩೪೬ರ ವರೆಗೆ ಆಳಿದ ಹೊಯ್ಸಳ ಸಂತತಿಯ ಕೊನೆಯ ರಾಜ.

12. ಮಹಮದ್ ತಗಲಖ್—೧೩೨೫-೧೩೫೧ರ ವರೆಗೆ ಆಳಿದ ಡೆಲ್ಲಿಯ ಸುಲ್ತಾನ.

13. ಬಿದರೆ—ಹೈದರಾಬಾದಿಗೆ ಸೇರಿದ್ದ ಒಂದು ಪ್ರದೇಶ. ಹಿಂದೆ ಇದು ಬಹಮನಿ ರಾಜ್ಯಕ್ಕೆ ಸೇರಿತ್ತು.

14. ಸಂಬಾಪುರ—ಬಳ್ಳಾರಿಯ ಜಿಲ್ಲೆಯ ಒಂದು ಹಳ್ಳಿ.

15. ಜಂಬುಖಂಡಿ—ಕೊಲ್ಲಾಪುರದ ಹತ್ತಿರದಲ್ಲಿರುವ ಒಂದು ಸಂಸ್ಥಾನ.

16. ರಾಯಚೂರು—ಹೈದರಾಬಾದಿನ ಒಂದು ಜಿಲ್ಲೆಯಾಗಿತ್ತು. ಈಗ ಮೈಸೂರಿಗೆ ಸೇರಿದೆ.

17. ಮುದಗಲ್ಲು—ಆದೋನಿಯಿಂದ ಉತ್ತರಕ್ಕಿದೆ. ಹಿಂದೆ ಒಂದು ಮುಖ್ಯ ದುರ್ಗವಾಗಿತ್ತು.

18. ಬಾದಾಮಿ—ಆರನೆಯ ಶತಮಾನದಿಂದ ಎಂಟನೆಯ ಶತಮಾನದ ಮಧ್ಯದ ವರೆಗೆ ಬಾದಾಮಿಯ ಚಾಳುಕ್ಯರು ಆಳುತ್ತಿದ್ದ ಸ್ಥಳ.

19. ಕುಮ್ಮಟದುರ್ಗ—ಹಂಪೆಗೆ ಸಮೀಪದಲ್ಲಿರುವ ದುರ್ಗ. ಇಲ್ಲಿ ಕುಮಾರ ರಾಮನು ಆಳುತ್ತಿದ್ದನು.

20. ಪ್ರತಾಪರುದ್ರದೇವ—ಸುಮಾರು ೧೨೯೦-೧೩೨೦ರ ವರೆಗೆ ಒರಂಗಲ್ಲಿನಲ್ಲಿ ಆಳುತ್ತಿದ್ದ.

21. ಗಜಪತಿಯರಸನಾದ 'ಕರಿಪತಿಕಪಿಲೇಶ್ವರ'—ಒರಿಸ್ಸಾ ದೇಶದ ರಾಜ.

೨. ಪ್ರಶ್ನೆಗಳು :—

೧. ಕುಮಾರ ರಾಮನು ಯಾರು? ಅವನ ಅದ್ವಿತೀಯ ಸಾಹಸವನ್ನು ವರ್ಣಿಸಿ.

೨. ಡೆಲ್ಲಿಯ ಸುಲ್ತಾನನು ಕಂಪಿಲನ ಮೇಲೆ ಎರಡು ಸಾರಿ ದಂಡು ಕಳುಹಿಸಲು ಕಾರಣವೇನು? ಅದರ ಪರಿಣಾಮವೇನು?

೩. ಮಾತಂಗಿ ಯಾರು? ಅವಳು ಹೇಗೆ ಕುಮಾರ ರಾಮನನ್ನು ಸೋಲಿಸಿದಳು?

೪. ಕುಮಾರ ರಾಮನು ಗವಿಯಲ್ಲಿ ಬಚ್ಚಿಟ್ಟುಕೊಳ್ಳಲು ಕಾರಣವೇನು? ಮತ್ತೆ ಹೇಗೆ ಪ್ರಕಟನಾದನು?

# ಮಂಡೋದರಿ

## ಸಿ. ಕೆ. ವೆಂಕಟರಾಮಯ್ಯ

ಸಿ. ಕೆ. ವೆಂಕಟರಾಮಯ್ಯನವರ (ಜನನ ೧೮೯೬) ಜನ್ಮಸ್ಥಳ ಚನ್ನಪಟ್ಟಣ. ಕನ್ನಡ, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಒಳ್ಳೆಯ ಪಾಂಡಿತ್ಯವನ್ನು ಸಂಪಾದಿಸಿದ್ದಾರೆ. ಸುಮಾರು ೨೪ ವರ್ಷಗಳು (೧೯೨೪—೧೯೫೨) ಮೈಸೂರು ಸರ್ಕಾರದ ಪ್ರಧಾನ ಭಾಷಾಂತರಕಾರರಾಗಿಯೂ, ಮೂರು ವರ್ಷಗಳು ಸಂಸ್ಕೃತಿ ಪ್ರಚಾರ ಇಲಾಖೆಯ ಡೈರೆಕ್ಟರಾಗಿಯೂ ಸೇವೆ ಸಲ್ಲಿಸಿ, ಈಗ ವಿಶ್ರಾಂತಿಯನ್ನನುಭವಿಸುತ್ತಿದ್ದಾರೆ. ಕಥೆ, ನಾಟಕ, ಜೀವನ ಚರಿತ್ರೆ, ವಿಮರ್ಶೆಗಳನ್ನು ಬರೆದು ಅವರು ಖ್ಯಾತರಾಗಿದ್ದಾರೆ. ಅವರ ಬಹುಮುಖವಾದ ಸಾಹಿತ್ಯ ಸೇವೆಯನ್ನು ಮೆಚ್ಚಿ ಕನ್ನಡನಾಡು ಅವರಿಗೆ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಪದವಿಯ ಗೌರವವನ್ನು ಸಲ್ಲಿಸಿತು.

ಅವರ ಕೆಲವು ಕೃತಿಗಳು: ಹಳ್ಳಿಯ ಕಥೆ, ತುರಾಯಿ (ಕಥೆಗಳು), ಸುಂದರಿ, ನಮ್ಮ ಸಮಾಜ, ಮಂಡೋದರಿ, ನಚಿಕೇತ (ನಾಟಕ), ಪೈಗಂಬರ ಮುಹಮ್ಮದ, ನಾಲ್ವಡಿ ಕೃಷ್ಣರಾಜ ಒಡೆಯರ್ (ಜೀವನ ಚರಿತ್ರೆ), ಭಾಸ, ಕಾಳಿದಾಸನು ಶೃಂಗಾರರಸವನ್ನು ಚಿತ್ರಿಸಿರುವ ಬಗೆ (ವಿಮರ್ಶೆ).

ಪ್ರಕೃತ ಭಾಗ 'ಮಂಡೋದರಿ' ಎಂಬ ನಾಟಕದ ಎರಡನೆಯ ಅಂಕದ ಮೂರನೆಯ ದೃಶ್ಯ.

[ ರಾವಣನ ಅಂತಃಪುರ. ಅವನ ಪದವಿಗೆ ತಕ್ಕ ವೈಭವದಿಂದ ಅಲಂಕೃತವಾಗಿರುವುದು. ಸುವರ್ಣ ರಚಿತವಾದ ಭದ್ರಾಸನವೂ ಇತರ ಸುಖಾಸನಗಳೂ ಇರುವುವು. ರಾವಣನು ಭದ್ರಾಸನದಲ್ಲಿ ಕುಳಿತಿರುವನು. ಮಂಡೋದರಿಯು ವ್ಯಸನಾಕ್ರಾಂತಳಾಗಿ ಅವನ ಸಮೀಪದಲ್ಲಿ ರಜತಾಸನದಲ್ಲಿ ಕುಳಿತಿರುವಳು. ಸುಂದರಿಯರಾದ ಚಿಕ್ಕ ವಯಸ್ಸಿನ ಚೇಟಿಯರು ಒಂದು ಗೀತವನ್ನು ಹಾಡುತ್ತಿರುವರು. ಅದು ಮುಗಿದ ತರುವಾಯ ಅವರು ತಲೆಬಾಗಿ ವಂದಿಸಿ ಹೊರಟು ಹೋಗುವರು. ಅಂದು ಆಸ್ಥಾನದಲ್ಲಿ ನಡೆಯುವುದಾಗಿರುವ ಸಭೆಗೆ ಹೋಗಲು ತಕ್ಕಂತೆ ಮನೋಹರವಾದ ವೇಷದಿಂದ ಒಪ್ಪುತ್ತ, ಮಂಡೋದರೀದೇವಿಯು ವೀರಗಾಸೆಯಿಂದ ಕಂಗೊಳಿಸುವಂತೆ ಜರತಾರಿಯ ಸೀರೆಯನ್ನುಟ್ಟು, ಸುಂದರತರವಾದ ಕುಪ್ಪಸವನ್ನು ತೊಟ್ಟು, ದಿವ್ಯಾಭರಣಭೂಷಿತೆಯಾಗಿ, ಮಣಿಮೇಖಲೆಯನ್ನು ಧರಿಸಿ, ಕಿರೀಟಮಂಡಿತೆಯಾಗಿರುವಳು. ಬಲಭುಜದ ಮೇಲಿನಿಂದ ಬಂದಿರುವ ಕಿಂಕಾಪಿನ ಪಟ್ಟಿಯ ಆಧಾರದಿಂದ ತೂಗುಬಿದ್ದಿರುವ ಬಂಗಾರದ ಒರೆಯಲ್ಲಿ ಖಡ್ಗವು ವಿರಾಜಿಸುತ್ತಿರುವುದು.

ಗೀತವನ್ನು ಹಾಡಿ ಚೇಟಿಯರು ಹೊರಟುಹೋದ ತರುವಾಯ ಒಂದೆರಡು ನಿಮಿಷಗಳ ಕಾಲ ದಂಪತಿಗಳು ಮೌನದಿಂದ ಕುಳಿತಿರುವರು. ಕಾಲ: ಪ್ರದೋಷ ಸಮಯಕ್ಕೆ ಮುಂಚಿತವಾಗಿ. ]

**ರಾವಣ** – ಮಂಡೋದರಿ! ಕ್ಷಮೆಯೂ, ಸಿದ್ಧಿಯೂ, ಒಟ್ಟುಗೂಡಿ ಸ್ತ್ರೀರೂಪವನ್ನು ಧರಿಸಿ, ಮಂಡೋದರಿಯೆಂಬ ಮುದ್ದಿನ ಹೆಸರನ್ನು ಪಡೆದಿರಬೇಕು. ದೇವಿ! ನೀನು . . . . ನೀನು ನನ್ನ ಅಂತಃಪುರಕ್ಕೆ ಬರುವುದಕ್ಕೆ ಸಮಯವನ್ನು ಕೇಳಿ ಬರಬೇಕಾದ ಆವಶ್ಯಕತೆಯಾದರೂ ಉಂಟೆ?

**ಮಂಡೋದರಿ** – ( ನಿಟ್ಟುಸಿರನ್ನು ಬಿಟ್ಟು ಮೌನದಿಂದಿರುವಳು. ಒಂದೆರಡು ಕ್ಷಣಗಳ ಕಾಲ ಆರೀತಿ ಸುಮ್ಮನಿದ್ದು ) ಮನ್ನಿಸು.

**ರಾವಣ** – (ಸ್ವಗತ) ನಾನು ಹೀಗೇತಕ್ಕೆ ಮಾತನಾಡಲು ಪ್ರಾರಂಭಿಸಿದೆನು? ಮಂಡೋದರಿಯ ನಿಟ್ಟುಸಿರೂ, ಮೌನವೂ ನನ್ನ ಹೃದಯವನ್ನೇ ಸೀಳಿದುವು. (ಪ್ರಕಾಶ) ಪ್ರೇಯಸಿ! ಅಪರಾಧವಿದ್ದರಲ್ಲವೇ ಮನ್ನಿಸುವುದು! ನಾನು ಮನ್ನಿಸಲು ನೀನು ಮಾಡಿರುವ ಅಪರಾಧವಾದರೂ ಏನು? (ಒಂದು ಕ್ಷಣಕಾಲ ಸುಮ್ಮನಿದ್ದು) ಪ್ರಿಯಳೆ! ಮಂತ್ರಾಗಾರಕ್ಕೆ ಬರಲು ಸಿದ್ಧಳಾಗಿರುವ ನಿನ್ನ ಇಂದಿನ ವೇಷಭೂಷಣಗಳು ಎಷ್ಟು ಮನೋಹರವಾಗಿವೆ!

**ಮಂಡೋದರಿ** – (ಆ ಮಾತುಗಳಿಗೆ ಗಮನವನ್ನೇ ಕೊಡದೆ ಚಿಂತಾಭರದಿಂದ ಕೂಡಿ, ನೆಲವನ್ನೇ ದೃಷ್ಟಿಸುತ್ತಿದ್ದು, ಆ ಬಳಿಕ ತಲೆಯನ್ನೆತ್ತಿ, ರಾವಣನ ಕಡೆಗೆ ನೋಡಿ) ಆರ್ಯಪುತ್ರ! ಇಂದು ಮಂತ್ರಾಗಾರದಲ್ಲಿ ನಡೆಯುವ ತೀರ್ಮಾನವು ಗುರುತರವಾದುದು. ನೀನು ನನ್ನ ಬಿನ್ನಹದಂತೆ ಯುದ್ಧದ ಯೋಚನೆಯನ್ನು ಬಿಟ್ಟು ಸುಮ್ಮನಿರುವೆಯಷ್ಟೆ?

**ರಾವಣ** – ಆಂಜನೇಯನಿಂದ ಲಂಕಾದಹನದ ಅಪಮಾನವನ್ನು ಅನುಭವಿಸಿದಮೇಲೆ—ಪ್ರಜೆಗಳ ಕಷ್ಟನಷ್ಟಗಳನ್ನು ನೋಡಿ ದುಃಖಿಸಿದಮೇಲೆ—ಶೃಂಗಾರ ಪ್ರಾಸಾದದಲ್ಲಿದ್ದ ಸುಂದರತರವಾದ ಅಮೂಲ್ಯ ವಸ್ತುಗಳೆಲ್ಲ ಭಸ್ಮವಾದುದನ್ನು ಕಂಡು ಸಂಕಟಪಟ್ಟಮೇಲೆ, ಯುದ್ಧಕ್ಕೆ ಅಳುಕುವುದೆ?

**ಮಂಡೋದರಿ** – ಒಳಗೆ ಧರ್ಮವು ಉರಿಯಿತು. ಹೊರಗೆ ಲಂಕೆಯು ಉರಿಯಿತು. ಹೊರಗಿನ ಉರಿಯ ಅನಾಹುತಗಳನ್ನೇನೋ ವರ್ಣಿಸಿದೆ. ಅವಕ್ಕೆ ಮಿತಿಯುಂಟು. ಆರ್ಯಪುತ್ರ! ಧರ್ಮವು ಉರಿದುದರ ಅನರ್ಥ ಪರಂಪರೆಗಳಿಗೆ ಮಾತ್ರ ಪರಿಮಿತಿಯೇ ಇಲ್ಲ. ಸೀತಾಪಹರಣದ ಫಲವಾಗಿ ಎಂತಹ ಘೋರ ವಿಪತ್ತುಗಳು ಕಾದಿವೆಯೋ, ಬಲ್ಲವರಾರು? ಯುದ್ಧವೇನಾದರೂ ಕೈಗಟ್ಟಿದರೆ?

**ರಾವಣ** – ರಾಮನೆಂಬ ಬೊಂಬೆಯು ನನಗೆ ಲೆಕ್ಕವೆ?

**ಮಂಡೋದರಿ** – ಶ್ರೀರಾಮನಿಂದ ಸೋತ ಪರಶುರಾಮನೇ ಅದಕ್ಕೆ ಉತ್ತರ ಹೇಳಬೇಕು. ಆರ್ಯಪುತ್ರ! ಶ್ರೀರಾಮನೂ ಶೂರಾಗ್ರಣಿಗಳಲ್ಲೊಬ್ಬನು. ಆದರೂ, ನಿನಗೆ ಮಾತ್ರ ಧರ್ಮದ ಬಲವಿದ್ದ ಪಕ್ಷಕ್ಕೆ, ನೂರು ಮಂದಿ ರಾಮರು ಯುದ್ಧಕ್ಕೆ ಬಂದಿದ್ದರೂ ನೀನು ಲಕ್ಷ್ಯಮಾಡಬೇಕಾಗಿರಲಿಲ್ಲ. ಈಗ ಒಬ್ಬ ರಾಮನು ಲಂಕೆಯನ್ನು ಮುತ್ತಿದರೂ ನಾವು ತಲ್ಲಣಿಸಬೇಕಾಗಿದೆ. ಆಂಜನೇಯನೇನು ಸಾಮಾನ್ಯನೆ? ಇದರ ಮೇಲೆ ಕಪಿಸೈನ್ಯವು ಬೇರೆ.

**ರಾವಣ** – ಲಂಕೆಯನ್ನು ಮುತ್ತುವುದು ಮಾತನಾಡುವಷ್ಟು ಸುಲಭವಲ್ಲ. ಅದೂ ಸಮುದ್ರ ಮಧ್ಯದಲ್ಲಿರುವ ಲಂಕೆಗೆ ಸೈನ್ಯಸಮೇತವಾಗಿ ಬರುವುದು! ರಾಮನ ಬಳಿಯಲ್ಲಿರುವವರೆಲ್ಲರೂ ಆಂಜನೇಯರಲ್ಲ. ಹುಲು ಮನುಜನಾದ ರಾಮನಿಗೆ ಹೆದರಿ ಶರಣಾಗತನಾಗುವುದಾದರೆ, ನನಗೆಷ್ಟು ಅವಮಾನ? ನಮ್ಮ ಕುಲಕ್ಕೆಷ್ಟು ಅವಮಾನ? ನನ್ನನ್ನು ಹೆತ್ತ ವೀರಮಾತೆಗೆಷ್ಟು ಅವಮಾನ? ಲಂಕಾ ಸಾಮ್ರಾಜ್ಯಕ್ಕೆಷ್ಟು ಅವಮಾನ? ರಾಮನಿಗೆ ಹೆದರಲೇ ನಾನು?

**ಮಂಡೋದರಿ** – ಪ್ರಭುವೇ! ರಾಮನಿಗೆ ಹೆದರಬೇಡ. ಧರ್ಮಕ್ಕೆ ಹೆದರು.

**ರಾವಣ** – ಮಾತೆತ್ತಿದರೆ ಧರ್ಮವೆನ್ನುತ್ತಿರುವೆ. ಈ ಧರ್ಮವೆಂಬುದು ಮರ್ತ್ಯನಿರ್ಮಿತವಾಗಿ ಮರ್ತ್ಯರನ್ನೇ ಆವರಿಸಿ ಮುಗ್ಧಗೊಳಿಸುತ್ತಿರುವ ಮನೋವಿಕಾರ.

**ಮಂಡೋದರಿ** – ಇಂತಹ ವಿಪರೀತವೆ? ರಾವಣೇಶ್ವರ! ಹಿಂದಿನ ದಿನಗಳನ್ನು ಸ್ಮರಿಸು. ಆಗಿನ ನಿನ್ನ ಧರ್ಮಪರಾಯಣತೆಯನ್ನು ಜ್ಞಾಪಿಸಿಕೊ. ಆಗ ನೀನಾಡುತ್ತಿದ್ದ ಅಮೃತ ವಾಕ್ಕುಗಳನ್ನು ನೆನಪಿಗೆ ತರಲೆ? ಅಯ್ಯೋ! ಸಾಮದ ಛಂದಗಳಂತೆ ಮನೋಹರವಾಗಿದ್ದ ನಿನ್ನ ವಾಣಿಗಳು ಇನ್ನೆಲ್ಲಿ? ಅಯ್ಯೋ! ನಿನ್ನ ಸ್ವಭಾವವೇ ಈ ರೀತಿ ಮಾರ್ಪಡಬಹುದೆ?

**ರಾವಣ** – ನನ್ನ ಸ್ವಭಾವವೇನೂ ಮಾರ್ಪಟ್ಟಿಲ್ಲ, ಸಮಯ ಸನ್ನಿವೇಶಗಳು ಮನಸ್ಸನ್ನು ಮಾರ್ಪಡಿಸುತ್ತವೆ.

**ಮಂಡೋದರಿ** – ಅವಕ್ಕಾಗಿ ಧರ್ಮವನ್ನು ಬಲಿಕೊಡಬೇಕೆ?

**ರಾವಣ** – ಹೌದು. ಬಲಿಕೊಡಬೇಕಾದುದು ಆವಶ್ಯಕವಾಯಿತು.

**ಮಂಡೋದರಿ** – ಅದು ಹೇಗೆ?

**ರಾವಣ**–ಅದು ಹೇಗಾದರೂ ಇರಲಿ. ಅದರ ಪ್ರಸ್ತಾಪವೇ ಈಗ ಬೇಡ.

**ಮಂಡೋದರಿ** – ಧರ್ಮವನ್ನು ಬಲಿಕೊಟ್ಟು ಹೇಯ ಕಾರ್ಯವನ್ನೆಸಗಬೇಕಾಗುವಷ್ಟು ಉತ್ಕಟವಾದ ಆವಶ್ಯಕತೆಯೆಂದಿಗೂ ಉಂಟಾಗದು. ಪ್ರಭುವೆ! ಈಗಿನ ಸನ್ನಿವೇಶವೇ ನನ್ನ ಪತಿಭಕ್ತಿ ಪರೀಕ್ಷೆಯ ಒರೆಗಲ್ಲೆಂದು ಭಾವಿಸಿರುವವಳು ನಾನು. ಪ್ರೀತಿಭಕ್ತಿಗಳಿಂದ ನಿನ್ನ ಪದತಲದಲ್ಲಿ ಹೃದಯವನ್ನರ್ಪಿಸಿರುವವಳು ನಾನು. ನೊಂದ ಮನಸ್ಸಿನವಳು ನಾನು. ಬೆಂದ ಕರುಳಿನವಳು ನಾನು. ಆರ್ಯ ಪುತ್ರ! ನನ್ನ ಮಾತನ್ನು ಲಾಲಿಸು. ಅಂತಹ ಆವಶ್ಯಕತೆಯು ಇರಲಿಲ್ಲವೆಂದು ಹೇಳು.

**ರಾವಣ** – ಮಂಡೋದರಿ! ನಾನು ನಿನ್ನಲ್ಲಿ ಅಪರಾಧಿಯೆಂಬುದೇನೋ ನಿಜ. ಆದರೆ, ನನ್ನ ಅಂತರಂಗವೇ ಇದಕ್ಕಾಗಿ ಬೆಂದು ಹೋಗಿದೆ. ಧರ್ಮಶರಣನೆಂದು ಹೊಗಳಿಸಿಕೊಳ್ಳುವ ಹೇಡಿಯಾದ ಆ ರಾಮನು ದಸ್ಯುಗಳಿಗಿಂತ ಕೀಳಾಗಿ ನಡೆದು, ನನ್ನ ತಂಗಿ ಶೂರ್ಪನಖಿಗೆ ಅಸಭ್ಯರೂ ಅಳುಕುವಂತಹ ಶಿಕ್ಷೆಯನ್ನು ವಿಧಿಸಿದನಲ್ಲಾ! ಸೀತಾಪಹರಣವೇ ಅದಕ್ಕೆ ತಕ್ಕ ಪ್ರತೀಕಾರವೆಂದು ಭಾವಿಸಿ, ನಾನು ಸೀತೆಯನ್ನು ತಂದುದುಂಟು.

**ಮಂಡೋದರಿ** – ಶೂರ್ಪನಖಿಯು ಬಾಲ್ಯ ವಯಸ್ಸಿನಲ್ಲಿ ವಿಧವೆಯಾದುದಕ್ಕಾಗಿ ನಾನೂ ಮರುಗುತ್ತಿದ್ದೆನು. ಅವಳಿಗೆ ವಿಧಿಸಲ್ಪಟ್ಟ ಕ್ರೂರ ದಂಡನೆಯನ್ನು ಕಂಡು ನಾನೂ ಕಣ್ಣೀರು ಬಿಟ್ಟೆನು. ಆದರೂ, ಅವಳು ಮಾಡಿದುದು ಮಹಾಪರಾಧ....ಮಹಾಪರಾಧ....ಶ್ರೀರಾಮನನ್ನು ಮೋಹಿಸಿ ಹಗರಣವನ್ನು ತಂದುಕೊಂಡುದು ತಪ್ಪು.

**ರಾವಣ** – ನಿನ್ನ ವಾದವು ಅಲ್ಲಿಗೆ ಮುಗಿಯಿತಷ್ಟೆ?

**ಮಂಡೋದರಿ** – (ದರ್ಪದಿಂದ) ನಾನು ವಾದಿಸಲು ಬಂದವಳಲ್ಲ. ಸರ್ವನಾಶವು ಸಂಭವಿಸದಂತೆ ಸಲಹೆ ಹೇಳಲು, ನಿನ್ನ ಆಪ್ತ ಸಚಿವಳಾಗಿ ಇಲ್ಲಿಗೆ ಬಂದಿರುವವಳು. ರಾವಣನ ಮೋಹದ ಮಡದಿಯಾಗಿ ನಾನು ಇಲ್ಲಿಗೆ ಬಂದಿಲ್ಲ. ಲಂಕಾ ಸಾಮ್ರಾಜ್ಯದ ಚಕ್ರವರ್ತಿನಿಯಾಗಿ, ಲಂಕಾ ಮಾತೆಯ ದೀನ ಸೇವಕಳಾಗಿ ನಾನು ಇಲ್ಲಿಗೆ ಬಂದಿದ್ದೇನೆ.

**ರಾವಣ** – ಮಂಡೋದರಿ! ನಿನ್ನ ಒಂದೊಂದು ಕಾರ್ಯದಿಂದಲೂ, ನಿನ್ನ ಒಂದೊಂದು ಮಾತಿನಿಂದಲೂ, ನಿನ್ನಲ್ಲಿ ನನಗೆ ಗೌರವ ಬುದ್ಧಿಯು ಹೆಚ್ಚುತ್ತಿದೆ. ರಾಮನ ಅಪರಾಧಕ್ಕೆ ಸೀತಾಪಹರಣವೇ ತಕ್ಕ ದಂಡನೆಯಾಯಿತು.

**ಮಂಡೋದರಿ** – ಸೀತಾಪಹರಣದಿಂದ ಮಾತ್ರವೇ ಅದು ಕೊನೆಗಂಡಿದ್ದರೆ—ಸೀತಾದೇವಿಯನ್ನು ಶ್ರೀರಾಮನ ಬಳಿಗೆ ಕಳುಹಿಸಿ ಅವನಿಗೆ

ಬುದ್ಧಿ ಕಲಿಸಿದ್ದರೆ—ಧರ್ಮಚ್ಯುತಿಗೆ ಅವಕಾಶವೇ ಇರುತ್ತಿರಲಿಲ್ಲ. ಕದ್ದು ತಂದೆಯೇ ಹೊರತು ಗೆದ್ದು ತರಲಿಲ್ಲ. ರಾಮನು ಪರಾಕ್ರಮಿಯೆಂಬುದಕ್ಕೆ ಅದೂ ಸಾಕ್ಷಿ. ಧರ್ಮದ ಬೆಂಬಲವಿದ್ದರಲ್ಲವೇ ಧೈರ್ಯದ ಹಂಬಲು!

**ರಾವಣ** – (ಬೇಸರದಿಂದ) ಅಯ್ಯೋ ಧರ್ಮವೆ! ಸೌಂದರ್ಯ ಮುಗ್ಧರಾದ ಎಷ್ಟೋ ಜನರು ಪರಸತಿಯನ್ನು ಕಂಡು, ರಾವಣನು ಆಚರಿಸಿದಂತೆಯೇ ಮಾಡಲು ತವಕಪಡುತ್ತಾರೆ. ಆದರೆ, ಸಾಮರ್ಥ್ಯವಿಲ್ಲದೆ ಸುಮ್ಮನಾಗುತ್ತಾರೆ. ಸಾಮರ್ಥ್ಯವಿರುವುದಾದರೆ ಆ ಮಾತೇ ಬೇರೆ.

**ಮಂಡೋದರಿ** – (ಹೃದಯ ವೇದನೆಯಿಂದ ಮುಖವನ್ನೇ ಹಿಂಡಿಕೊಂಡು) ಅಯ್ಯೋ! ಎಷ್ಟು ಅನರ್ಥಕಾರಿಯಾದ ಮಾತುಗಳು! ಹಾಗಾದರೆ, ನಾನು ಪ್ರೀತಿಸಿ ಓಲೈಸಿದುದು ಆಸುರೀ ಸಂಪತ್ತಿನ ಅಧಿದೇವತೆಯಂತಿದ್ದ ರಾವಣ ರೂಪದ ಮಾಂಸದ ಮುದ್ದೆಯನ್ನೇ?... ಹೃದಯೇಶ್ವರ! ಬೇಡ, ಬೇಡ, ಈ ನೃಶಂಸ ವೃತ್ತಿಯು ಬೇಡ. ದೇವ! ಈ ಬಗೆಯ ಮನೋಭಾವನೆಯು ನಿನಗಲ್ಲ, ವಿಷಯಲಂಪಟತನವೇ ಜೀವನ ಸರ್ವಸ್ವವೆಂದು ಭಾವಿಸಿರುವ ಮದೋನ್ಮತ್ತರಿಗೆ. ಪಶುಪತಿಯು ನಿನ್ನ ಸತ್ತ್ವ ಪರೀಕ್ಷೆಗೆ ಸಮಯವನ್ನೊದಗಿಸಿದ್ದಾನೆ.

**ರಾವಣ** – ನಡೆಯುವುದು ನುಡಿಯುವಷ್ಟು ಸುಲಭವಲ್ಲ. ಕಿವಿ ಮೂಗುಗಳನ್ನು ಕಳೆದುಕೊಂಡ ತಂಗಿಯ ವಿಕಟ ರೂಪವು ನನ್ನ ಕಣ್ಣೆದುರಿಗೆ ಬಂದರೆ........

**ಮಂಡೋದರಿ** – (ಬಾಲವನ್ನು ತುಳಿದ ಕಾಳಸರ್ಪದಂತೆ ನಿಂತು) ನಿನ್ನ ಈಗಿನ ಹೃದಯ ವಿಕಾರಕ್ಕೆ ಈ ಪ್ರತೀಕಾರದ ಹೆಸರನ್ನಿಟ್ಟಿರುವೆಯಲ್ಲವೆ? ಮನಸ್ಸಿನೆದುರಿಗೆ ಬುದ್ಧಿಯನ್ನು ನಾಟ್ಯವಾಡಿಸಿ, ನಿನ್ನನ್ನು ನೀನೇ ವಂಚಿಸಿಕೊಳ್ಳುವುದೆ? ಧರ್ಮವೃಕ್ಷವನ್ನು ಕಡಿದು ನೆಲಕ್ಕುರುಳಿಸಿ ಪತಿತನಾಗುವುದೆ? ನುಡಿಯುವುದು ನಡೆಯುವಷ್ಟು ಸುಲಭವಲ್ಲವಂತೆ! ತೇಜಸ್ವಿಗಳಾದವರಲ್ಲಿ ನಡೆಯುವುದು ನುಡಿಯುವುದಕ್ಕಿಂತಲೂ ಸುಲಭ. ಆಗ್ಗೆ ನುಡಿಗಿಂತ ನಡೆಯೇ ಮೊದಲು.

**ರಾವಣ** – ಮಂಡೋದರಿ! ನನ್ನ ಸ್ಥಿತಿಯನ್ನು ಅರಿತಿದ್ದರೆ, ನೀನೆಂದಿಗೂ ಹೀಗೆ ಹೇಳುತ್ತಿರಲಿಲ್ಲ. ನೀನು ಇದುವರೆಗೂ ನನ್ನ ಸುಖದುಃಖಗಳಲ್ಲಿ ಸಮಭಾಗಿನಿಯಾಗಿದ್ದವಳು. ನನ್ನ ದುಃಖದ ಆಳವನ್ನರಿಯದೆ ನೀನೂ ಬಿರುನುಡಿಗಳನ್ನಾಡುತ್ತಿರುವೆ. ಸೀತಾಪಹರಣಮಾಡಿ ನಾನು ದುಃಖದ ಮಡುವಿನಲ್ಲೇ ಮುಳುಗಿದ್ದೇನೆ.

**ಮಂಡೋದರಿ** – ನಾಥ! ಹೀಗೇಕೆ ಕೊರಳನ್ನು ಕೊಯ್ಯುವೆ? ಲಂಕೆಯನ್ನು ಸುಟ್ಟುದಕ್ಕಾಗಿ ಆಂಜನೇಯನನ್ನು ನೀನು ಕೊಲ್ಲಲುದ್ಯುಕ್ತನಾದಾಗಿನ ನನ್ನ ವರ್ತನೆಯನ್ನು ಸ್ಮರಿಸಿಕೊ. ಅಯ್ಯೋ! ಅದು ನನ್ನ ಕರುಳೇ ಬೆಂದ ದಿನ. ಅಕ್ಷಕುಮಾರನು ಮೃತಪಟ್ಟ ದಿನ. ಅದನ್ನು ಸ್ಮರಿಸಿಕೊ. ನನಗೆ ದುಃಖವಿಲ್ಲವೆ?

**ರಾವಣ** – ಕುಮಾರನಲ್ಲಿ ನನಗೂ ಪ್ರೀತಿಯಿದ್ದಿತು. ಆದುದರಿಂದಲೇ, ಅವನನ್ನು ಕೊಂದ ಅಪರಾಧಕ್ಕಾಗಿ ಆಂಜನೇಯನನ್ನು ನಾನು ವಧಿಸ ಹೋದುದು.

**ಮಂಡೋದರಿ** – ಕುಮಾರನಿಗಿಂತ ಧರ್ಮವು ಹೆಚ್ಚೆಂದು ನಾನು ಭಾವಿಸಿದುದರಿಂದಲೇ, ನಾನು ಅದಕ್ಕೆ ಅವಕಾಶಕೊಡದೆ ಅಡ್ಡಿಯಾಗಿ ಬಂದುದು. ಆಂಜನೇಯನು ನೂರುಮಂದಿ ಅಕ್ಷಕುಮಾರರನ್ನು ವಧೆಮಾಡಿದವನಾಗಿದ್ದರೂ ನನ್ನ ಗುಂಡಿಗೆಯ ಬಿಸಿ ರಕ್ತವನ್ನು ಬಸಿದು, ದೂತ ವಧೆಯ ಧರ್ಮದ್ರೋಹವನ್ನು ತಪ್ಪಿಸುವುದಾಗಿ ಹೇಳಿ, ನಿನ್ನ ಖಡ್ಗಕ್ಕೆ ನಾನೇ ಮೊದಲು ಆಹುತಿಯಾಗಲು ಸಿದ್ಧವಾಗಿ ನಿಂತುದು. ದೇವ! ನಿನ್ನ ರಾಜ್ಯದಲ್ಲಿರುವ ಪುರುಷರೆಲ್ಲರೂ ನನ್ನ ಇಂದ್ರಜಿತುವಿಗೆ ಸಮಾನ. ಅವರಿಗೆ ಸೇರಿರುವ ರಾಜ್ಯದ ಸತ್ಕೀರ್ತಿಯನ್ನುಳಿಸಲು ನನ್ನ ದೇಹವೂ, ನನ್ನ ಪ್ರಾಣವೂ, ಎರಡೂ ಮೀಸಲು.

**ರಾವಣ** – ನೀನು ವೀರ ರಮಣಿ. ನಾನು ಅದನ್ನು ಬಲ್ಲೆ. ಲೋಕವೂ ಬಲ್ಲುದು.

**ಮಂಡೋದರಿ** – ಪ್ರಭುವೆ! ಇದು ಈ ಬಗೆಯ ಹೊಗಳಿಕೆಗೆ ಸಮಯವೆ? ನನಗೆ ಇದೊಂದೂ ಬೇಡ. ನನ್ನ ಮನಸ್ಸೇ ಹುಣ್ಣಾದಂತಿದೆ. ಕ್ಷಾತ್ರತೇಜ ಪ್ರಧಾನವೆನಿಸಿ ಕಂಗೊಳಿಸುವ ಸಾತ್ವಿಕತೆಯಿಂದ ನೀನು ಮತ್ತೊಮ್ಮೆ ಬೆಳಗಿದರೆ, ಆಗ ಮಾತ್ರವೇ ನನ್ನ ಮನಸ್ಸಿಗೆ ಸಂತೋಷ. ಅಂದಿನಿಂದಲೇ ನಮಗೆ ಸುಖಪ್ರಾಪ್ತಿ. ನೀನಾವಾಗಲೂ ಇತರರೆಲ್ಲರಿಗಿಂತಲೂ ಮೇಲಣ ಹಂತದಲ್ಲಿದ್ದವನು. ನಿನ್ನ ಬಗೆಯೇ ಬೇರೆ. ಶೂಲಿಯನ್ನು ಒಲಿಸಿಕೊಂಡು ಜೀವರತ್ನಗಳ ಜಪಮಾಲೆಯನ್ನರ್ಪಿಸಿದ ಭಕ್ತಾವತಂಸನಲ್ಲವೇ ನೀನು! ಪರಮೇಶ್ವರನು ಪ್ರಸನ್ನನಾಗಿ ನೀನು ತಪಸ್ಸಿನಿಂದ ಬಳಲಿದೆಯೆಂದು ಮೈದಡವಿದಾಗ, "ದೇವ! ನಿನ್ನ ಸೇವೆಗೆ ಸಮರ್ಪಿಸಲು ಹತ್ತಾರು ದೇಹಗಳನ್ನೂ ಹತ್ತಾರು ಜೀವಗಳನ್ನೂ ಕೊಡಬಾರದಾಗಿದ್ದಿತೆ?" ಎಂದವನಲ್ಲವೇ ನೀನು! ಮಹೇಶನನ್ನು ಮೆಚ್ಚಿಸಿ ವರಗಳನ್ನು ಪಡೆದ ಸಂಯಮಿ ಶ್ರೇಷ್ಠನಲ್ಲವೇ ನೀನು! ಅಯ್ಯೋ! ಸೃಷ್ಟಿಯ ತತ್ತ್ವವೇ ರಾವಣ ರೂಪವನ್ನು ತಳೆದು

ಹೂವಿನಂತೆ ಅರಳುತ್ತಿದ್ದಿತೆಂದು ನಾನು ಹಿಗ್ಗುತ್ತಿದ್ದೆನಲ್ಲಾ! ಕಾಮವಿಕಾರದ ಅಂಧ ತಮಸ್ಸಿನಲ್ಲಿ ಮುಳುಗಿ, ನಿನ್ನ ದಿವ್ಯ ತೇಜಸ್ಸನ್ನು ಕಳೆದುಕೊಳ್ಳುವೆಯಾ? ಬೇಡ, ಪ್ರಿಯನೆ, ಬೇಡ. ನಿನ್ನನ್ನು ಬೊಗಸೆಯೊಡ್ಡಿ ಬೇಡುವೆನು.

**ರಾವಣ** – ದಾಳವು ಉರುಳಿಹೋಯಿತು. ಮಂಡೋದರಿ! ಆತ್ಮ ಸಮರದಿಂದ ಕ್ಷತವಿಕ್ಷತನಾಗಿದ್ದೇನೆ. ನಾನೇ ನನ್ನನ್ನು ನಿಂದಿಸಿಕೊಂಡಿರುವಷ್ಟು ಮಟ್ಟಿಗೆ ಮತ್ತಾರೂ ನನ್ನನ್ನು ನಿಂದಿಸಲಾರರು. ಒಮ್ಮೆ ಮೋಹಾಂಧಕಾರಕ್ಕೆ ವಶವರ್ತಿಯಾಗಿ ಪಾಷಂಡನಂತೆ ವರ್ತಿಸುತ್ತೇನೆ. ಮರುಕ್ಷಣವೇ ನನ್ನ ಅವಿವೇಕಕ್ಕಾಗಿ ನಾನೇ ಮನಮರುಗಿ ಸಂಕಟಪಡುತ್ತೇನೆ.

**ಮಂಡೋದರಿ** – ಅದಕ್ಕಾಗಿಯೇ ನಾನು ಹೇಳುವುದು. ಕೆಳಕ್ಕುರುಳುವುದಕ್ಕೆ ಮೊದಲೇ ಎಚ್ಚೆತ್ತುಕೊ. ಧರ್ಮವನ್ನು ಶರಣೆಂದು ಮತ್ತೆ ಉದ್ಧಾರವಾಗು. ನನಗೂ, ಅಖಿಲ ಜಗತ್ತಿಗೂ, ಆದರ್ಶಪ್ರಾಯನಾಗಿ ಸಾತ್ವಿಕ ವೃತ್ತಿಯನ್ನವಲಂಬಿಸು. ಪ್ರಿಯನೆ! ನಿನ್ನ ಪದತಲದಲ್ಲಿ ಆತ್ಮಸಮರ್ಪಣೆ ಮಾಡಿ ಸರ್ವಸ್ವವೂ ನೀನೇ ಎಂದು ನಂಬಿರುವವಳು ನಾನು. ಪತಿಪ್ರೇಮವೆಂಬ ಸೂತ್ರದಲ್ಲಿ ಹೃದಯವನ್ನೂ, ಮನಸ್ಸನ್ನೂ, ಬುದ್ಧಿಯನ್ನೂ, ಪ್ರಾಣವನ್ನೂ, ಅಂತರಾತ್ಮವನ್ನೂ, ಸೇರಿಸಿ ಪುಷ್ಪ ಮಾಲಿಕೆಯಂತೆ ನಿನ್ನ ಕೊರಳಿಗೆ ಹಾಕಿ, ಸ್ವಂತ ವ್ಯಕ್ತಿತ್ವವನ್ನೇ ಮರೆತಿರುವವಳು ನಾನು. ಪ್ರಿಯನೆ! ನನ್ನನ್ನು ಮುಳುಗಿಸಬೇಡ. ನೀನೂ ಉದ್ಧಾರವಾಗಿ ನನ್ನನ್ನೂ ಉದ್ಧಾರ ಮಾಡು. ಸರ್ವಮಂಗಳೆಯು ನಿನಗೆ ಸಾಮರ್ಥ್ಯವನ್ನು ಕೊಡಲಿ. (ಭಕ್ತಿಯಿಂದ ಸರ್ವಮಂಗಳೆಯನ್ನು ಪ್ರಾರ್ಥಿಸುವಳು.)

**ರಾವಣ** – (ಆರ್ತಸ್ವರದಿಂದ) ಮಂಡೋದರಿ! ಮಂಡೋದರಿ!

**ಮಂಡೋದರಿ** – ನಾಥ! ನಿನ್ನ ಆಕ್ರಂದನದ ಆರ್ತಸ್ವರವೇ ಮಂಗಳದ ಮುಂಬೆಳಗಿನ ಉದಯ ಗೀತೆ. ಪ್ರಾಣೇಶ್ವರ! ಪಶ್ಚಾತ್ತಾಪದಿಂದ ನಿನ್ನ ಪಾಪವನ್ನು ತೊಳೆದು ನಿನ್ನ ಸ್ಥಾನಮಾನಗಳಿಗೆ ತಕ್ಕಂತೆ ವರ್ತಿಸು. ನಿನ್ನ ಶ್ರೇಯಸ್ಸೂ, ಲಂಕಾ ಸಾಮ್ರಾಜ್ಯದ ಪವಿತ್ರತೆಯೂ, ಧರ್ಮಪರಾಯಣತೆಯ ನಿನ್ನ ವಜ್ರಕವಚವೂ, ನನ್ನ ಜೀವನದ ಮುಖ್ಯಾವಲಂಬನ.

**ರಾವಣ** – (ಸ್ವಪ್ನದಿಂದ ಎಚ್ಚೆತ್ತವನಂತೆ ದಿಗ್ಭ್ರಮೆಯನ್ನು ಸೂಚಿಸಿ, ಪರಿತಾಪಪೂರಿತವಾದ ದೀನಸ್ವರದಿಂದ) ಧರ್ಮಪರಾಯಣತೆಯ ವಜ್ರ ಕವಚ!... ಅಯ್ಯೋ... ಶಿವನು ಕಳುಹಿಸಿದ್ದ ಸಂದೇಶದ ನುಡಿಗಳಿವು... ದಾರುಣವಾದ ಹೃದಯ ಜ್ವಾಲೆ... ದೇವ ದೇವ! ಮೋಹಾಂಧಕಾರ ನಿಮಗ್ನ ಪಶುಪ್ರಾಯನಾಗಿ ಎಂತಹ ಹೀನಕಾರ್ಯವನ್ನಾಚರಿಸಿದೆನು!

**ಪ್ರತಿಹಾರಿ** – (ನೇಪಥ್ಯದಿಂದ) ಮಹಾಪ್ರಭುವಿಗೆ ವಿಜಯವಾಗಲಿ!

**ರಾವಣ** – (ಗಟ್ಟಿಯಾಗಿ) ಏನದು?

**ಪ್ರತಿಹಾರಿ** – ಕುಂಭಕರ್ಣ ದೇವನೂ, ವಿಭೀಷಣ ದೇವನೂ ದಯ ಮಾಡಿಸಿದ್ದಾರೆ.

**ಮಂಡೋದರಿ** – ಅವರನ್ನು ಪ್ರವೇಶಿಸು.

**ಪ್ರತಿಹಾರಿ** – (ಒಳಗಿನಿಂದಲೇ) ಅಪ್ಪಣೆ. (ಕುಂಭಕರ್ಣನೂ ವಿಭೀಷಣನೂ ಪ್ರವೇಶಿಸುವರು. ರಾವಣ ಮಂಡೋದರಿಯರಿಗೆ ಮಣಿದು, ರಾವಣನು ತೋರಿಸಿದ ಸುಖಾಸನಗಳಲ್ಲಿ ಕುಳಿತುಕೊಳ್ಳುವರು.)

**ಕುಂಭಕರ್ಣ** – ಮಂತ್ರಾಗಾರದಲ್ಲಿ ಇಂದು ಅನೇಕ ಮಹತ್ವದ ಸಂಗತಿಗಳು ನಿರ್ಧರವಾಗಬೇಕಾಗಿವೆ. ಅಷ್ಟಪ್ರಧಾನರೂ, ಆಪ್ತರೂ ತಮ್ಮೀರ್ವರ ಆಗಮನವನ್ನು ನಿರೀಕ್ಷಿಸುತ್ತಿದ್ದಾರೆ.

**ವಿಭೀಷಣ** – ಅಗ್ರಜ! ಶ್ರೀರಾಮಚಂದ್ರನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಲು ಪ್ರಾರಂಭಿಸಿದ್ದಾನಂತೆ. ಶ್ರೀರಾಮಚಂದ್ರನು ಮಹಾವಿಷ್ಣುವಿನ ಅವತಾರ. ವೃಥಾ ದುಡುಕಿ ಫಲವಿಲ್ಲ. ಸೀತಾಮಾತೆಯನ್ನೊಪ್ಪಿಸಿ ಇನ್ನಾದರೂ ನಾವೆಲ್ಲರೂ ಸುಖದಿಂದಿರುವುದು ಮೇಲು.

**ಕುಂಭಕರ್ಣ** – ರಾಮನು ಮಹಾವಿಷ್ಣುವಿನ ಅವತಾರವಾಗಿದ್ದರೆ, ತಾನು ಕುಳಿತ ಕಡೆಯಿಂದಲೇ ನಮ್ಮನ್ನು ಧ್ವಂಸಮಾಡಬಹುದಾಗಿದ್ದಿತು. ಇಲ್ಲಿಯವರೆಗೂ ಬಂದು ಆಯಾಸಪಡುವ ಆವಶ್ಯಕತೆಯೆಲ್ಲಿದ್ದಿತು?

**ರಾವಣ** – ಪಶ್ಚಾತ್ತಾಪದಗ್ಧವಾದ ನನ್ನ ಹೃದಯವೇ ಮರುಭೂಮಿಯಂತಾಗಿದೆ. ಸೀತೆಯನ್ನೊಪ್ಪಿಸಬೇಕಾಗಿ ಬಂದರೆ, ಅದರ ವಿಧಾನವೇ ಬೇರೆ. ಸೋಲನ್ನು ಶಂಕಿಸಿದ ಸತ್ತ್ವಹೀನನಂತೆ ನಾನೆಂದಿಗೂ ಸೀತೆಯನ್ನೊಪ್ಪಿಸೆನು. ರಾವಣನು ರಾವಣೋಚಿತವಾದ ರೀತಿಯಲ್ಲೇ ವರ್ತಿಸುವನೆಂಬುದನ್ನು ಮನಸ್ಸಿನಲ್ಲಿಡು.

**ಕುಂಭಕರ್ಣ** – ಅಗ್ರಜ! ನನಗೂ ಅದೇ ಸಮ್ಮತ. ನಿನ್ನ ಉದಾತ್ತ ಬುದ್ಧಿಯನ್ನು ಲೋಕವೇ ಬಲ್ಲುದು.

**ವಿಭೀಷಣ** – ಅಗ್ರಜ! ಪ್ರಿಯವಾದಿಗಳಾದವರು ಸುಲಭವಾಗಿ ದೊರೆಯುವರು. 5. ಅಪ್ರಿಯವಾದರೂ ಪಥ್ಯವಾದ ವಚನಗಳನ್ನು ನುಡಿಯುವವರೂ ದುರ್ಲಭ. ಅವುಗಳಂತೆ ನಡೆಯುವವರೂ ದುರ್ಲಭ. ನೀನು ಸೀತಾಮಾತೆಯನ್ನೊಪ್ಪಿಸಿ ಶ್ರೀರಾಮಚಂದ್ರನಿಗೆ ಶರಣಾಗತನಾಗದೆ ಹೋದಲ್ಲಿ, ನಾನು ನಿನ್ನ ರಾಜ್ಯದಲ್ಲೇ ಇರುವುದಿಲ್ಲ.

**ಕುಂಭಕರ್ಣ** – (ಹುಬ್ಬುಗಳನ್ನು ಗಂಟಿಕ್ಕಿ) ನಾನು ಪ್ರಿಯವಾದಿಯೇನೋ ನಿಜ. ಆದರೂ ನಿನ್ನಂತೆ ಜೀವಗಳ್ಳನಾಗಿ ಆಪತ್ಕಾಲದಲ್ಲಿ ಅಣ್ಣನನ್ನು ತೊರೆದು, ನಾನು ಎಲ್ಲಿಗೂ ಹೋಗುವುದಿಲ್ಲ. ಅಣ್ಣನ ಕಾರ್ಯಕ್ಕಾಗಿ ಅವಶ್ಯಬಿದ್ದಲ್ಲಿ ಈ ದೇಹವನ್ನೇ ಒಪ್ಪಿಸುವೆನು. ಹೊರಗಿನ ಸೀತಾದೇವಿಯು ಇಂದು ನಿನಗೆ ಮಾತೆಯಾದಳು. ಅಲ್ಲವೆ?6 ನಾನು ಅರಿತಿರುವುದು ಲಂಕಾಮಾತೆಯೊಬ್ಬಳನ್ನೇ. ಅವಳ ಸೇವೆಯಲ್ಲಿ ಸಾವೂ ನನಗೆ ಸುಖಕರ.

**ರಾವಣ** – ವಿಭೀಷಣ! ನೀನು ಹೋಗುವುದೆಲ್ಲಿಗೆ?

**ವಿಭೀಷಣ** – ಶ್ರೀರಾಮಚಂದ್ರನಲ್ಲಿಗೆ.

**ರಾವಣ** – ಕೇಳಿದೆಯಾ ಮಂಡೋದರಿ? ಈ ಹೃದಯವೇದನೆಯನ್ನು ಹೇಗೆ ಸೈರಿಸಲಿ? ವಿಭೀಷಣ! ವಿಭೀಷಣ! ವೀರಮಾತೆಯ ಉದರದಲ್ಲಿ ಜನಿಸಿ ವೀರನಾಗಿ ಬಾಳಿದ ನಿನ್ನಿಂದ ಈ ಮಾತೆ? ಹೇಡಿಯಂತೆ ಶತ್ರುಪಕ್ಷವನ್ನು ಸೇರುವೆಯಾ? ಇಂತಹ ಕಳಂಕಿಗಳು ಲಂಕೆಯಲ್ಲಿ ಹುಟ್ಟದಿರಲಿ. ಇನ್ನೆಂದಿಗೂ ಹುಟ್ಟದಿರಲಿ.

**ವಿಭೀಷಣ** – ಪರವನಿತೆಯನ್ನಪಹರಿಸಿದ ಪಾತಕಿಯಾದ ನಿನ್ನ ರಾಜ್ಯದಲ್ಲಿ ನಾನು ಕ್ಷಣಮಾತ್ರವೂ ನಿಲ್ಲಲಾರೆ. ನೀನು ದೈವದ್ರೋಹಿ; ದೇಶದ್ರೋಹಿ; ಆತ್ಮದ್ರೋಹಿ. ಕಳಂಕಿಯು ನಾನಲ್ಲ.

**ಮಂಡೋದರಿ** – ಮರ್ಯಾದೆಯ ಮೇರೆಯನ್ನು ಮೀರಿದ ಬಿರುನುಡಿಗಳಿವು. ವಿಭೀಷಣ! ಇವೆಂದಿಗೂ ನಿನಗೆ ತರವಲ್ಲ. ಸಹನವೇ ಶೌರ್ಯಕ್ಕೆ ಭೂಷಣವೆಂಬುದನ್ನು ಆರ್ಯಪುತ್ರನು ಬಲ್ಲನು. ಮೊದಲೇ ನೊಂದಿರುವವನನ್ನು ಮತ್ತಷ್ಟು ನೋಯಿಸಿ ನುಡಿಯುವುದು ತರವಲ್ಲ. ಅವನು ನಮ್ಮೆಲ್ಲರಿಗೂ ಪ್ರಭು. ಸ್ವಯೂಥ ಕಲಹದಿಂದ ಸರ್ವನಾಶವೇ ಫಲ. ನಂದನವನದಂತಹ ರಾಜ್ಯಗಳು ನಿರ್ನಾಮವಾಗಿ ದಾಸ್ಯ ಶೃಂಖಲೆಗೆ ಗುರಿಯಾಗುವುದು ಅದರಿಂದಲೇ.

**ರಾವಣ** – ವಿಭೀಷಣ! ಹೋಗು! ನಾನು ಬೇಡವೆನ್ನುವುದಿಲ್ಲ. ಹೋಗು. ಆದರೆ ರಾಮನ ಬಳಿಗೆ ಬೇಡ. ಕುಬೇರನ ರಾಜ್ಯಕ್ಕಾದರೂ ಹೋಗಿ ಸುಖವಾಗಿ ಬಾಳು.

**ವಿಭೀಷಣ** – ಒಲ್ಲೆನು, ಹಾಗೆ ಮಾಡಲೊಲ್ಲೆನು.

**ಕುಂಭಕರ್ಣ** – ಒಲ್ಲೆಯಾದರೆ ಈಗಲೇ ಹೊರಡು.

**ರಾವಣ** – ಈ ರಾವಣನು ಮುನಿದರೆ, ಅವನಿಗೆ ಎದುರು ಮಾತನಾಡಿ ಬದುಕಿದವರಿಲ್ಲ. ಒಮ್ಮೆ ನಿನ್ನನ್ನು ಕಾರಾಗೃಹವಾಸಕ್ಕೆ ಗುರಿಮಾಡಿದ ಪರಿ

ತಾಪದಿಂದಲೇ ಇನ್ನೂ ಹಿಂಸೆಪಡುತ್ತಿದ್ದೇನೆ. ನಿನ್ನನ್ನು ದಂಡಿಸಲು ಮನಸ್ಸು ಬಾರದು. ಹೇಡಿ! ಪ್ರಭುದ್ರೋಹಿ! ನನಗೆ ಮುಖವನ್ನು ತೋರಿಸಬೇಡ. ಹೊರಡು. ನಡೆ. (ವಿಭೀಷಣನು ಹೊರಟುಹೋದಮೇಲೆ, ಚಿಂತಾಕ್ರಾಂತನಾಗಿ ತಲೆ ತಗ್ಗಿಸಿ ನಿಟ್ಟುಸಿರುಬಿಟ್ಟು) ವತ್ಸ! ಕುಂಭಕರ್ಣ! ಇನ್ನು ನೀನೆ ನನ್ನ ಮುಖ್ಯಾವಲಂಬನ . . . ಮಂತ್ರಾಗಾರದಲ್ಲಿ ಎಲ್ಲರೂ ಕಾದಿರುವರಲ್ಲವೆ! ಮಂತ್ರಾಗಾರಕ್ಕೆ ನಾಳೆ ಬರುವೆನೆಂದು ಸಚಿವರೆಲ್ಲರಿಗೂ ತಿಳಿಸು. ವಿಭೀಷಣನೇನು ಮಾಡುವನೆಂಬುದನ್ನು ಗೂಢಚಾರರಿಂದ ತಿಳಿದುಕೊಳ್ಳಬೇಕೆಂದು ಮಹೋದರನಿಗೆ ಹೇಳು. ವಿಷಯವು ಅತ್ಯಂತ ರಹಸ್ಯವಾಗಿರಬೇಕಾದುದು. (ಕುಂಭಕರ್ಣನು ರಾವಣ ಮಂಡೋದರಿಯರಿಗೆ ವಂದಿಸಿ ತೆರಳಿದ ಬಳಿಕ) ಅಯ್ಯೋ! ಇನ್ನೂ ಯಾವ ಯಾವ ಕೇಡುಗಳು ಕಾದಿವೆಯೋ!

**ಮಂಡೋದರಿ** – ಪ್ರಾಣೇಶ್ವರ! ಹೀಗೇಕೆ ಚಿಂತಿಸುವೆ? ಆಗುಹೋಗುಗಳು ಕೇವಲ ದೈವಾಯತ್ತ. ಪೌರುಷದಿಂದ ಹೆಣಗುವುದು ನಮ್ಮ ಅಧೀನ. ಶೂರನಿಗೆ ಸುಖವು ಕರಗತವಲ್ಲವೆ!

**ರಾವಣ** – ಅಯ್ಯೋ! ಸುಖದ ದಿನಗಳು ಇನ್ನೆಲ್ಲಿ? ನನ್ನ ಸೊಬಗಿನ ದಿನಗಳು ಇನ್ನೆಲ್ಲಿ? ದೇಶಮಾತೆಗೆ ಭಾರ! ಬಂಧುಗಳಿಗೆ ಭಾರ! ಕುಲಕ್ಕೆ ಭಾರ! ಪ್ರಜೆಗಳಿಗೆ ಭಾರ! ನನ್ನ ಜೀವವು ನನಗೇ ಭಾರ!

**ಮಂಡೋದರಿ** – ಪ್ರಿಯನೇ! ನಿನ್ನ ದುಃಖವನ್ನು ನೋಡಿ ನನ್ನ ಹೃದಯವೇ ಕಿತ್ತುಬರುತ್ತದೆ. ಪ್ರಾಣೇಶ್ವರ! ನನ್ನ ಪ್ರಾರ್ಥನೆಯನ್ನು ಲಾಲಿಸು. ಕಾಯವಳಿದರೂ ಕೀರ್ತಿಯುಳಿಯುವಂತೆ ವರ್ತಿಸು. ಕೈಲಾಸವನ್ನು ತೂಗಿ ಪವಿತ್ರವಾಗಿರುವ ತೋಳುಗಳಲ್ಲಿ ತಂಗಿಯ ಭಾವನೆಯಿಂದ ಸೀತೆಯನ್ನೆತ್ತಿಕೊಂಡು ಹೋಗಿ ರಾಘವನಿಗೆ ಸಮರ್ಪಿಸು. ದಾನವರಾಜ್ಯವೇ ದೈವೀ ಸಂಪದದ ನೆಲೆಯೆನಿಸುವಂತೆ ಚಿರಕಾಲ ಪ್ರಭುತ್ವಮಾಡು. ಪವಿತ್ರತೆಯಲ್ಲಿ ಲಂಕೆಯನ್ನೇ ಕೈಲಾಸಕ್ಕೆ ಸರಿದೂಗಿಸಿ, ಧರ್ಮಪರಾಯಣತೆಯಿಂದ ಧನ್ಯನಾಗು. ಆಗ್ಗೆ ಎಲ್ಲವೂ ಸರಿಹೋಗುವುದು. ಕೈಲಾಸದ ಕೈವಲ್ಯವೇ ಮರ್ತ್ಯಲೋಕಕ್ಕಿಳಿದು ಬರುವುದು. ಒಟ್ಟು ಸೃಷ್ಟಿಯೇ ರಾವಣೇಶ್ವರನ ಯಶೋಗೀತೆಯನ್ನು ಹಾಡಿ ಆನಂದಿಸುವುದು. ಆರ್ಯಪುತ್ರ ಆತ್ಮ ತೇಜಸ್ಸಿನ ವೈಭವವೊಂದಿದ್ದರೆ ಯಾವುದು ತಾನೆ ಅಸಾಧ್ಯ?

**ರಾವಣ** – (ಸಂತಾಪ ಸಮ್ಮಿಶ್ರಿತವಾದ ಸಂತೋಷದಿಂದ) ನೀನೇ ಲಂಕಾ ರಾಜ್ಯದ ಬೆಳಕು. ನೀನು ನನ್ನ ಗೃಹಲಕ್ಷ್ಮಿಯು ಮಾತ್ರವೇ ಅಲ್ಲ. ನನ್ನ ರಾಜ್ಯ ಲಕ್ಷ್ಮಿಯೂ ಆಗಿರುವೆ. ಮಂಡೋದರಿ! ಚಿಂತಿಸುವೆನು,

ಚಿಂತಿಸುವೆನು. ಋಜುತೆಯನ್ನು ಕುರಿತು ಚಿಂತಿಸುವೆನು. ನನ್ನ ಹೃದಯವೇ ಕಲಕಿಹೋದಂತಾಗಿದೆ. ಈಗ ಏನನ್ನು ಹೇಳುವುದಕ್ಕೂ ತೋರದು. (ಭೇರೀ ರವವು ಕೇಳಿಸುವುದು) ಶಿವಪೂಜಾ ಕಾಲವು ಸಮೀಪಿಸಿತು. (ಪೂಜಾ ಸಾಮಗ್ರಿಗಳೊಡನೆ ಪುರೋಹಿತನು ಬರುವನು. ರಾವಣನ ಕೈಗೆ ಅವನು ಜೇಡಿಯ ಮಣ್ಣನ್ನು ಸಮರ್ಪಿಸುವನು. ನೇಪಥ್ಯದಲ್ಲಿ ಶಿವಸ್ತುತಿಯ ಗೀತಿಕೆಯನ್ನು ಹಾಡುತ್ತಿರುವಲ್ಲಿ, ರಾವಣನು ಪೂಜೆಗೆ ಪಾರ್ಥಿವ ಲಿಂಗವನ್ನು ರಚಿಸಿ ಸಿದ್ಧಗೊಳಿಸಿಕೊಳ್ಳುವನು.)

**ಮಂಡೋದರಿ**–ಆರ್ಯಪುತ್ರ! ಯೋಚಿಸಿ ನೋಡು. ನನ್ನ ಪ್ರಾರ್ಥನೆಯನ್ನು ಲಾಲಿಸಿ ಶ್ರೇಯೋರಾಶಿಯನ್ನು ಗಳಿಸಿ ಆನಂದಿಸು. ಲೋಕೇಶನಾದ ಆ ಶಿವನೇ ನಮ್ಮನ್ನು ಕಾಪಾಡಬೇಕು.

(ತೆರೆಯು ಬೀಳುವುದು.)

## ಅಭ್ಯಾಸ

**೧. ಕಠಿಣ ಶಬ್ದಗಳ ಅರ್ಥ:—**

ರಜತಾಸನ—ಬೆಳ್ಳಿಯ ಪೀಠ. ಚೇಟಿ—ಅರಮನೆಯ ಹೆಣ್ಣಾಳು. ವೀರಗಾಸೆ—ವೀರಗಚ್ಚೆ. ಮಣಿ ಮೇಖಲೆ—ಮಣಿಯ ಡಾಬು. ಕಿಂಕಾಪು—ಜರತಾರಿಯಿರುವ ರೇಷ್ಮೆ ಬಟ್ಟೆ. ಪ್ರದೋಷ—ಸಂಜೆ, ಮುಚ್ಚಂಜೆ. ಪ್ರಾಸಾದ—ಭವ್ಯವಾದ ಮನೆ. ಮರ್ತ್ಯ—ಭೂಲೋಕ. ಸಾಮದ ಛಂದ—ಸಾಮವೇದದ ಛಂದಸ್ಸು. ದಸ್ಯು—ಕಳ್ಳ, ನೀಚ. ಆಸುರೀ—ಅತಿಶಯವಾದ, ರಾಕ್ಷಸೀಯವಾದ. ನೃಶಂಸ—ಕ್ರೂರ, ನೀಚ. ವಿಷಯಲಂಪಟ—ಭೋಗದಲ್ಲಿ ಆಸಕ್ತನಾದವನು. ಪತಿತ—ಪಾಪಿ. ಕ್ಷತವಿಕ್ಷತ—ಗಾಯ. ದಗ್ಧ—ಸುಟ್ಟ. ಸ್ವಯೂಥ ಕಲಹ—ಸಂಬಂಧಿಗಳ ಕಲಹ. ದೈವಾಯತ್ತ—ದೈವಕ್ಕೆ ಸೇರಿದ. ಋಜುತೆ—ಸರಿಯಾದ ಮಾರ್ಗ, ನೇರವಾದ ಮಾರ್ಗ. ಪಾರ್ಥಿವ—ಮಣ್ಣಿನ. ಆಕ್ರಂದನ—ಅಳು, ರೋದನ. ಮಹೋದರ—ವಿಶ್ರವಸುಮುನಿಯಿಂದ ಪುಷ್ಪೋತ್ಕಟೆಯಲ್ಲಿ ಜನಿಸಿದ ರಾಕ್ಷಸ. ರಾವಣನ ಬಲತಮ್ಮ. ರಾಮಾಯಣದ ಯುದ್ಧದಲ್ಲಿ ನೀಲನಿಂದ ಹತನಾದ.

**೨. ಕೆಳಗಣವುಗಳಿಗೆ ಸಂದರ್ಭೋಚಿತವಾದ ಟಿಪ್ಪಣಿ ಬರೆಯಿರಿ:—**

೧. ಧರ್ಮದ ಬೆಂಬಲವಿದ್ದರಲ್ಲವೇ ಧೈರ್ಯದ ಹಂಬಲು.

೨. ನಾನು ಪ್ರೀತಿಸಿ ಓಲೈಸಿದುದು ಆಸುರೀ ಸಂಪತ್ತಿನ ಅಧಿದೇವತೆಯಂತಿದ್ದ ರಾವಣ ರೂಪದ ಮಾಂಸದ ಮುದ್ದೆಯನ್ನೇ?

೩. ನಡೆಯುವುದು ನುಡಿಯುವಷ್ಟು ಸುಲಭವಲ್ಲ.

೪. ನಿನ್ನ ರಾಜ್ಯದಲ್ಲಿರುವ ಪುರುಷರೆಲ್ಲರೂ ನನ್ನ ಇಂದ್ರಜಿತುವಿಗೆ ಸಮಾನ.

೫. ಅಪ್ರಿಯವಾದರೂ ಪಥ್ಯವಾದ ವಚನಗಳನ್ನು ನುಡಿಯುವವರೂ ದುರ್ಲಭ.

೬. ನಾನು ಅರಿತಿರುವುದು ಲಂಕಾಮಾತೆಯೊಬ್ಬಳನ್ನೇ.

೭. ಆಗು ಹೋಗುಗಳು ಕೇವಲ ದೈವಾಯತ್ತ.

೮. ಕಾಯವಳಿದರೂ ಕೀರ್ತಿಯುಳಿಯುವಂತೆ ವರ್ತಿಸು.

೯. ಶೂರನಿಗೆ ಸುಖವು ಕರಗತವಲ್ಲವೆ!

೧೦. ಆತ್ಮ ತೇಜಸ್ಸಿನ ವೈಭವವೊಂದಿದ್ದರೆ ಯಾವುದು ತಾನೆ ಅಸಾಧ್ಯ ?

೨. ಪ್ರಶ್ನೆಗಳು:—

೧. ಮಂಡೋದರಿಯ ಗುಣಶೀಲಗಳನ್ನು ವಿವರಿಸಿ.

೨. ಮಂಡೋದರಿ ರಾವಣರ ಸಂಭಾಷಣೆಯ ಆಧಾರದ ಮೇಲೆ ಅವರ ಮನೋಧರ್ಮವನ್ನು ನಿರೂಪಿಸಿ.

೩. ವಿಭೀಷಣ ಲಂಕೆಯನ್ನು ಬಿಟ್ಟುಹೋಗಲು ಕಾರಣವೇನು ? ಅವನು ಮಾಡಿದುದು ಸರಿಯೆ ? ಚರ್ಚಿಸಿ.

೪. 'ಮಂಡೋದರಿ' ನಾಟಕದ ಮಂಡೋದರಿಯ ವೈಶಿಷ್ಟ್ಯವನ್ನು ನಿರೂಪಿಸಿ.

# ಸತ್ಯಾಗ್ರಹದ ಹಿನ್ನೆಲೆ

ರಂಗನಾಥ ರಾಮಚಂದ್ರ ದಿವಾಕರ

ರಂಗನಾಥ ರಾಮಚಂದ್ರ ದಿವಾಕರ ಅವರು ೩೦—೯—೧೮೯೪ರಲ್ಲಿ ಧಾರವಾಡ ಜಿಲ್ಲೆಯ ಮದಿಹಾಳಿನಲ್ಲಿ ಹುಟ್ಟಿದರು. ಬೆಳಗಾಂ, ಹುಬ್ಬಳ್ಳಿ ಮತ್ತು ಪೂನಾದ ಫರ್ಗ್ಯುಸನ್ ಕಾಲೇಜಿನಲ್ಲಿ ಓದಿ, ೧೯೧೬ರಲ್ಲಿ ಪದವೀಧರರಾದರು. ಅನಂತರ ಕೆಲವು ದಿನ ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದು, ಬೊಂಬಾಯಿಗೆ ಹೋಗಿ ಎಂ.ಎ. ಮತ್ತು ಎಲ್.ಎಲ್.ಬಿ. ಪದವಿಗಳನ್ನು ಒಟ್ಟಿಗೆ ಪಡೆದರು. ಲೋಕಮಾನ್ಯ ತಿಲಕರು ಅವರ ರಾಜಕೀಯ ಗುರುಗಳು; ಗಾಂಧೀಜಿ ಅವರ ಮಾರ್ಗದರ್ಶಕರು. ಶ್ರೀರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮತ್ತು ಶ್ರೀ ಅರವಿಂದರು ಅವರ ಅಧ್ಯಾತ್ಮಿಕ ಗುರುಗಳು. ಭಾರತ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣ—ಅವರ ಜೀವನ ಮಂತ್ರ. ಅದಕ್ಕಾಗಿ ತನುಮನಧನಗಳನ್ನು ತೆತ್ತರು; ಹಲವಾರು ವರ್ಷ ತುರಂಗವಾಸವನ್ನನುಭವಿಸಿದರು. ನವಶಕ್ತಿ (ಆಂಗ್ಲಪತ್ರಿಕೆ), ಸಂಯುಕ್ತ ಕರ್ನಾಟಕ ಮತ್ತು ಕರ್ಮವೀರ ಅವರು ನೆಟ್ಟು ಬೆಳೆಸಿದ ಪತ್ರಿಕೆಗಳು.

ಅವರ ರಾಜಕೀಯ ಕ್ಷೇತ್ರ ಎಷ್ಟು ವಿಶಾಲವಾದುದೋ ಸಾಹಿತ್ಯ ಕ್ಷೇತ್ರವೂ ಅಷ್ಟೇ ವಿಶಾಲವಾದುದು. ರಾಜಕೀಯ ಮತ್ತು ಅಧ್ಯಾತ್ಮ ಬೋಧೆ ಅವರ ಸಾಹಿತ್ಯ ಧರ್ಮ. ಗೀತೋಪನಿಷತ್ತು ಮತ್ತು ಗಾಂಧೀ ತತ್ತ್ವಗಳ ರಹಸ್ಯವನ್ನು ಎಲ್ಲರಿಗೂ ಅರ್ಥವಾಗುವಂತೆ ವಿವರಿಸಿದ್ದಾರೆ. ವಚನ ಸಾಹಿತ್ಯದ ಮೇಲೆ ವಿಸ್ತಾರವಾದ ಭಾಷ್ಯವನ್ನು ಬರೆದು ಕೃತಕೃತ್ಯರಾಗಿದ್ದಾರೆ. 'ಅಂತರಾತ್ಮನಿಗೆ', 'ಸತ್ಯಾಗ್ರಹ', 'ಉಪನಿಷದ್ ಪ್ರಕಾಶ', 'ಮಹಾಯೋಗಿ', 'ವಚನಶಾಸ್ತ್ರ ರಹಸ್ಯ', 'ಸೆರೆಯ ಮರೆಯಲ್ಲಿ', 'ಬಾಪು', 'ಮಹಾತ್ಮರ ಮನೋರಂಗ'—ಇವು ಅವರ ಕೃತಿಗಳಲ್ಲಿ ಮುಖ್ಯವಾದುವು. ಇವಲ್ಲದೆ ಹಿಂದಿ, ಇಂಗ್ಲಿಷ್ ಭಾಷೆಗಳಲ್ಲಿಯೂ ಹಲವಾರು ಪುಸ್ತಕಗಳನ್ನು ಬರೆದಿದ್ದಾರೆ. ಈ ಅಮೋಘವಾದ ಸಾಹಿತ್ಯ ಸೇವೆಯಿಂದ ೧೯೩೯ರಲ್ಲಿ ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸುವ ಗೌರವ ದೊರೆಯಿತು. ಸ್ವಾತಂತ್ರ್ಯಾನಂತರ ಕೇಂದ್ರ ಮಂತ್ರಿ ಮಂಡಲದಲ್ಲಿ ಮಂತ್ರಿಯಾಗಿದ್ದು, ಈಗ ಬಿಹಾರದ ಗೌರ್ನರ್ ಆಗಿದ್ದಾರೆ.

'ಸತ್ಯಾಗ್ರಹದ ಹಿನ್ನೆಲೆ' ಯನ್ನು 'ಸತ್ಯಾಗ್ರಹ' ದಿಂದ ಎತ್ತಿಕೊಂಡಿದೆ.

ವೈಯಕ್ತಿಕ ಜೀವನದಲ್ಲಿ ಸತ್ಯಾಗ್ರಹಪೂರ್ವಕವಾಗಿ ನಡೆದವರು ಅನೇಕರಿರುವರು. ದಂತಕಥೆಗಳಲ್ಲಿ, ಪುರಾಣಗಳಲ್ಲಿ, ಇತಿಹಾಸದಲ್ಲಿ, ಜೀವನಚರಿತ್ರೆ

ಗಳಲ್ಲಿ ಅಂಥ ಸತ್ಯಾಗ್ರಹಿಗಳ ವರ್ಣನೆಯು ಬೇಕಾದಷ್ಟು ಬಂದಿದೆ. ಧಾರ್ಮಿಕ ರೀತಿಯಿಂದ ತಮ್ಮ ಜೀವನವನ್ನು ಕಳೆಯಬೇಕೆನ್ನುವ ವ್ಯಕ್ತಿಗಳಿಗಾಗಿ ಅಥವಾ ಚಿಕ್ಕ ಗುಂಪುಗಳಿಗಾಗಿ ಸತ್ಯಾಗ್ರಹ ಎಂಬ ಜೀವನಮಾರ್ಗವನ್ನು ಅನೇಕ ಧರ್ಮಗಳು ಹಾಗೂ ಸಾಧುಸಜ್ಜನರು ಉಪದೇಶಿಸಿರುವರು. ಆದರೆ ಮನುಷ್ಯನು ಅಹಿಂಸೆಯಿಂದಲೆ ಸತ್ಯವನ್ನು ಸಾಕ್ಷಾತ್ಕರಿಸಬಲ್ಲನು ಎಂದು ಗಟ್ಟಿಮುಟ್ಟಿಯಾಗಿ ಎಡೆಬಿಡದೆ ಹೇಳುವ ಹಾಗೂ ಗುಂಪುಗುಂಪುಗಳ ನಡುವಿನ, ರಾಷ್ಟ್ರರಾಷ್ಟ್ರಗಳ ನಡುವಿನ ತಿಕ್ಕಾಟ, ಬಡಿದಾಟಗಳನ್ನು ಸಮಾಧಾನಕರವಾಗಿ ಬಗೆಹರಿಸಲು ಅಹಿಂಸೆಯೆ ಒಂದು ಶ್ರೇಷ್ಠ ಮಾರ್ಗವು, ಎಂದು ಕಂಠೋಕ್ತವಾಗಿ ಸಾರಿದ ಶ್ರೇಯಸ್ಸು ಗಾಂಧೀಜಿಯವರಿಗೇ ಇರುವದು. 'ದಿ ಡಾನ ಆಫ್ ಫ್ರೀಡಮ್' (The Dawn of Freedom) ಪುಸ್ತಕದ ಲೇಖಕರು ಈ ಸಂದರ್ಭದಲ್ಲಿ ಅಂದದ್ದೇನಂದರೆ, 'ಜಗತ್ತಿಗೆ ಮಹಾತ್ಮಾಜಿಯವರು ಕೊಟ್ಟ ಎಲ್ಲಕ್ಕೂ ಹೆಚ್ಚಿನ ಹಾಗೂ ಮೌಲಿಕ ಕಾಣಿಕೆಯೆಂದರೆ ಬಹುಶಃ ಸತ್ಯಾಗ್ರಹ ಇಲ್ಲವೆ ಅಹಿಂಸಾತ್ಮಕ ಪ್ರತಿಕಾರದ ಸ್ಪಷ್ಟ, ಶಾಸ್ತ್ರೀಯ, ಸಪ್ರಯೋಗ ಕಲ್ಪನೆ. ಇದು ಕೇವಲ ವ್ಯಕ್ತಿಗಳು ಉಪಯೋಗಿಸತಕ್ಕ ಶಸ್ತ್ರವಷ್ಟೇ ಅಲ್ಲ. ಗುಂಪುಗಳು, ರಾಷ್ಟ್ರಗಳು ಸಹ ತಮ್ಮ ವಿವಾದಗಳನ್ನೂ ತಿಕ್ಕಾಟಗಳನ್ನೂ ಬಗೆಹರಿಸಿಕೊಳ್ಳುವ ಉಪಾಯವಿದು.' ಯಾವುದಕ್ಕೆ ನಿಃಶಸ್ತ್ರ ಪ್ರತಿಕಾರ ಎನ್ನುವರೊ ಅಂಥ ಸಾಮೂಹಿಕ ಪ್ರತಿಕಾರದ ಉದಾಹರಣೆಗಳು ಕೂಡ ಇತಿಹಾಸದಲ್ಲಿ ವಿರಳ. ಗಾಂಧಿಪ್ರಣೀತ ಸಾಮೂಹಿಕ ಸತ್ಯಾಗ್ರಹದ ಶುದ್ಧ ಮಾದರಿಗಳಂತೂ ಕಾಣುವದೆ ಇಲ್ಲವೆಂದರೂ ಸಲ್ಲುವದು. ಸತ್ಯಾಗ್ರಹದಂತೆ ತೋರಿಕೆಗೆ ಕಾಣುವ ಹಲವು ಉದಾಹರಣೆಗಳನ್ನು ಪರೀಕ್ಷಿಸಿ ನೋಡಿದರೆ ಆಯಾ ಪ್ರಸಂಗದಲ್ಲಿ ಮಾರ್ಗದರ್ಶಕರಿದ್ದವರು ಗಾಂಧೀಜಿಯವರಷ್ಟು ಸ್ಪಷ್ಟ ದೃಷ್ಟಿಯವರಾಗಲಿ ಕಡು ಅಹಿಂಸಾವಾದಿಗಳಾಗಲಿ ಇರಲಿಲ್ಲ. ಸತ್ಯಾಗ್ರಹಕ್ಕೆ ಶಾಸ್ತ್ರ ಸ್ವರೂಪವನ್ನು ಕೊಡಲು ಇಲ್ಲವೆ ಅದೊಂದು ಶ್ರೇಷ್ಠ ಕಲೆಯಾಗುವಂತೆ ಮಾಡಲು ಗಾಂಧೀಜಿಯವರಂತೆ ಯಾರೂ ಯತ್ನಿಸಿಲ್ಲ. ಉಪವಾಸಕ್ಕೆ ಗಾಂಧೀಜಿಯವರು ತಮ್ಮ ತಂತ್ರದಲ್ಲಿ ಒಂದು ಅನುಪಮ ಸ್ಥಾನವನ್ನು ಕೊಟ್ಟಿರುವರು. ಹಾಗೆಯೆ ಅಸ್ಪಷ್ಟವಾಗಿ ಜೀವನಾಕಾಶದಲ್ಲಿ ತೇಲುತಿರುವ ಸತ್ಯಾಗ್ರಹವಿಚಾರಗಳನ್ನು ಮೂರ್ಪಡಿಸಿ ಅವುಗಳಿಗೆ ಒಂದು ಯಥಾವಸ್ಥಿತ ಸ್ವರೂಪವನ್ನು ಕಲ್ಪಿಸಿ ಕಳೆಕಟ್ಟುವ ಕೆಲಸವು ಗಾಂಧೀಜಿಯವರಿಗಾಗಿ ಮೀಸಲಾಗಿತ್ತು. ಅಹಿಂಸಾತ್ಮಕ ರಣನೀತಿಯ ತಂತ್ರವನ್ನು ರಚಿಸುವ ಮಹಾಕಾರ್ಯವು ಅವರಿಂದಲೆ ನಡೆಯಿತೆನ್ನಬೇಕು. ಎಲ್ಲಿಯೊ



ಮೂಲೆಯಲ್ಲಿ ಬಿದ್ದ ಖತನೆಟ್ಟ ಒಂದು ಉಕ್ಕಿನ ತುಂಡನ್ನೆತ್ತಿ ಅದನ್ನು ಮಸೆದು ಮಿನುಗುವ ಖಡ್ಗವನ್ನು ಮಾಡುವ ಶ್ರೇಯವು ಅವರಿಗೆ ಸಲ್ಲುವದು. ದುಷ್ಟನನ್ನು ಗಾಯಗೊಳಿಸದೆ ದುಷ್ಟತನವನ್ನು ಸವರುವ ಬಿರುದು ಈ ಸತ್ಯಾಗ್ರಹ ಖಡ್ಗದ್ದು. ಈ ಖಡ್ಗವು ಉಭಯಪಕ್ಷಕ್ಕೂ ಅಷ್ಟೇ ಕ್ಷೇಮಕರ.

ಇನ್ನು ಸತ್ಯಾಗ್ರಹದ ಹಿನ್ನೆಲೆಯನ್ನು ಹೇಳುವ ಮೊದಲು ಅದರ ಮುಖ್ಯ ತತ್ತ್ವಗಳನ್ನು ಸಂಕ್ಷೇಪದಲ್ಲಿ ವಿವರಿಸುವದು ಅವಶ್ಯ.

ಅಹಿಂಸಾಪ್ರೇರಿತವಾದ ಅಥವಾ ಸರ್ವರ ಬಗ್ಗೆಯೂ ಪ್ರೇಮಪ್ರೇರಿತವಾದ ಆಚರಣವೆ ಸತ್ಯಾಗ್ರಹ ಧರ್ಮ. ಸತ್ಯಾಗ್ರಹವು ಪರರನ್ನು ತನ್ನಂತೆಯೆ ಬಗೆಯುವದು ಅಥವಾ ಸತ್ಯಾಗ್ರಹಿಗೆ ಪರರೆಂಬುವವರು ಯಾರೂ ಇರಲಾರರು. ಬಾಹ್ಯತಃ ಜೀವನಕಲಹದಲ್ಲಿ ಪಾಶವೀಬಲದ ಅಥವಾ ಬಲಾತ್ಕಾರದ ರಾಜ್ಯವು ಕಂಗೊಳಿಸುವದು. ಆದರೆ ಸತ್ಯಾಗ್ರಹವು ಅದಕ್ಕೆ ವಿಪರೀತವು. ಸತ್ಯಾಗ್ರಹಕ್ಷೇತ್ರದಲ್ಲಿ ಆತ್ಮಬಲದ ಅರ್ಥಾತ್ ಪ್ರೇಮದ ಸಾಮ್ರಾಜ್ಯವಿರುವದು. ಜೀವ ಎಂಬುದೆಲ್ಲ ಒಂದೇ ಒಂದು ಎಂಬುದು ಸತ್ಯಾಗ್ರಹಿಯ ಪ್ರಮೇಯವು. ಎಲ್ಲರೂ ತನ್ನಂತೆ ಇರುವರೆಂದು ಬಗೆದು ಅವನು ಅವರೊಡನೆ ನಡೆದುಕೊಳ್ಳುವನು. ಅವನು ಎಲ್ಲರಲ್ಲಿ ತನ್ನನ್ನೆ ನೋಡುವನು. ಸತ್ಯಾಗ್ರಹಿಯು ಅಹಿಂಸೆಯ ಮುಖಾಂತರವೆ, ಪ್ರೇಮದ ಮೂಲಕವೆ ಸತ್ಯವನ್ನು ಶೋಧಿಸಲನುವಾಗುವನು. ಸೇವೆ ಹಾಗು ತ್ಯಾಗಗಳ ಮೂಲಕ ಎಲ್ಲರ ಪರಮ ಕಲ್ಯಾಣವನ್ನು ಸಾಧಿಸಲು ಸತ್ಯಾಗ್ರಹಿಯು ಸತತ ಹೆಣಗುವನು. ಅದೇ ಅವನ ಜೀವನಸೂತ್ರವು. ಯಾರಾದರೂ ಅವನ ಜೀವನಕ್ರಮದಲ್ಲಿ ಅಡಚಣಿಗಳನ್ನುಂಟುಮಾಡಿದರೆ ಅಥವಾ ಅವನು ಮಾಡುವ ಕರ್ತವ್ಯದಲ್ಲಿ ಅಡ್ಡ ಬಂದರೆ ಇಲ್ಲವೆ ಅವನ ಜೀವನಪದ್ಧತಿಗೆ ತೀರ ವಿರುದ್ಧವಾದ ರೀತಿಯಿಂದ ವರ್ತಿಸುತಿದ್ದರೆ ಅವನು ಆಯಾ ಅಡಚಣಿಗಳನ್ನು ನಿರಾಕರಿಸಲು ತಾನು ಸ್ವತಃ ಕಷ್ಟವನ್ನು ಭೋಗಿಸುವನು ವಿನಾ ಅನ್ಯರಿಗೆ ಕಿಂಚಿತ್ತಾದರೂ ನೋವನ್ನುಂಟು ಮಾಡಲಾರನು. ಸತ್ಯಕ್ಕಾಗಿ ಅವನು ಸಾವನ್ನು ಸಹ ಸ್ಮಿತವದನದಿಂದ ಸ್ವಾಗತಿಸುವನು. ತಪ್ಪಿತಸ್ಥರಾದ ತನ್ನ ಬಾಂಧವರ ಪೆಟ್ಟಿನಿಂದ ತನಗೆ ಮರಣವುಂಟಾದರೆ ಅದು ದೇಹದ ಮೇಲೆ ಆತ್ಮನಿಗೆ ದೊರೆತ ಜಯ ಎಂದು ಅವನು ತಿಳಿಯುವನು. ಅಸತ್ಯವನ್ನು ಮನ್ನಿಸುವ ಬದಲು ಅವನು ಜೀವವನ್ನು ಸಹ ಧಾರೆಯೆರೆದು ತನ್ನ ಆತ್ಮನನ್ನು ಅಂದರೆ ಸತ್ಯವನ್ನು ಬದುಕಿಸುವನು. ಸತ್ಯವನ್ನು ಕಳಕೊಂಡು, ಆತ್ಮನನ್ನು ಬಲಿಕೊಟ್ಟು ಸಾಮ್ರಾಜ್ಯವನ್ನು ಗಳಿಸಿದರೆ ಅದಾವ ಲಾಭ, ಎಂದು ಸತ್ಯಾಗ್ರಹಿಯು ಕೇಳುವನು. ಅವನ ದೃಷ್ಟಿಯಿಂದ

ಗ್ರಹವೆಂದರೆ ಸತ್ಯವನ್ನು ಅಹಿಂಸಯ ಮೂಲಕ ಶೋಧಿಸುವ ಸಾಧನಮಾತ್ರವು. ಅಹಿಂಸಾಮಾರ್ಗದಿಂದ, ಪ್ರೇಮಪಥದಿಂದ ಅವನು ಒಂದು ಕೂದಲೆಳೆಯಷ್ಟು ಕೂಡ ಯಾವದೇ ಕಾರಣದ ಮೂಲಕ ಕದಲಲಾರನು. ತಾನು ಬೇಕಾದಷ್ಟು ಕಷ್ಟನಷ್ಟಗಳಿಗೀಡಾದರೂ ಪ್ರತಿಪಕ್ಷಿಗಳ ಬಗ್ಗೆ ಅವನು ತನ್ನ ಮನಸಿನಲ್ಲಿ ಎಳ್ಳಷ್ಟು ದ್ವೇಷಭಾವವನ್ನೂ ತರಲಾರನು.

ಸತ್ಯಾಗ್ರಹಿಯು ತನ್ನನ್ನು ಪೀಡಿಸುವವರೊಡನೆ ಶರೀರತಃ ಅಥವಾ ಪಾಶವೀಬಲದಿಂದ ಹೋರಾಡಲನುವಾಗುವದಿಲ್ಲ. ಅವನು ಪ್ರಸನ್ನಚಿತ್ತದಿಂದ ಎಲ್ಲ ಪೀಡೆಯನ್ನು ಸಹಿಸುವನು; ಪ್ರಸಂಗವಶಾತ್ ಸಾವಿಗೂ ಈಡಾಗುವನು. ಸೇಡು ತೀರಿಸಿಕೊಳ್ಳುವ ಶಕ್ತಿ ತನ್ನಲ್ಲಿದ್ದರೂ ಅವನು ಆ ಗೋಜಿಗೆ ಹೋಗುವದಿಲ್ಲ. ತನ್ನ ಕಷ್ಟ, ತನ್ನ ಸಹಿಷ್ಣುತೆ, ತನ್ನ ಪ್ರೇಮ ಇವೇ ಪ್ರತಿಪಕ್ಷಿಯ ಅಜ್ಞಾನ, ಸ್ವಾರ್ಥ, ಕ್ರೂರತೆ ಇವುಗಳನ್ನು ನಿರ್ನಾಮ ಮಾಡುವವೆಂದು ಅವನು ನಂಬಿರುವನು. ಪ್ರತಿಪಕ್ಷಿಯ ತಪ್ಪನ್ನು ಅವನ ಪದರಿನಲ್ಲಿ ಕಟ್ಟಲು ಅವನು ಒಂದೇ ಸವನೆ ಯತ್ನಿಸುತ್ತಿರುವಾಗ ಸಹ ತನಗಾಗುತ್ತಿರುವ ಎಲ್ಲ ಪೀಡೆಯನ್ನೂ ಅಪಮಾನಾದಿಗಳನ್ನೂ ಅವನು ಪ್ರೀತಿಯಿಂದ ಸಹಿಸುವನು ಹಾಗೂ ಪ್ರತಿಪಕ್ಷಿಯು ಬಗ್ಗೆ ಅತ್ಯಂತ ಹಿತಬುದ್ಧಿಯನ್ನೂ ತಾಳುವನು.

ಸತ್ಯಾಗ್ರಹವೆಂಬುದು ಒಂದು ಜೀವನದೃಷ್ಟಿಯು, ಒಂದು ವೃತ್ತಿವಿಶೇಷವು. ಅದೊಂದು ಕೇವಲ ಕ್ರಿಯೆ ಅಥವಾ ಕ್ರಿಯಾಮಾಲೆಯಲ್ಲ. ಕ್ರಿಯೆ ಅದರಲ್ಲಿ ಒಳಗೊಂಡಿದೆ. ಆದರೆ ಆ ಕ್ರಿಯೆ ಆ ವಿಶಿಷ್ಟ ವೃತ್ತಿಯ ಪರಿಣಾಮರೂಪವು. ಅದೊಂದು ಆತ್ಮನ ಆಂತರಿಕ ಸ್ಥಿತಿ. ವಿಶ್ವದ ಯಾವ ವಿಕಸನಶೀಲ ಶಕ್ತಿಯು ಜೀವನವನ್ನು ಕಟ್ಟಿ, ಬೆಳೆಸಿ, ವಿಸ್ತರಿಸಿ, ವಿವಿಧ ಉತ್ಪಾದಕ ಮತ್ತು ನಿರ್ಮಾಪಕ ಚಟುವಟಿಕೆಗಳ ಮೂಲಕ ಅದನ್ನು ಆವಿಷ್ಕರಿಸುವದೋ ಆ ಶಕ್ತಿಯೊಡನೆ ತನ್ಮಯವಾಗಿ ನಡೆಯುವ ಪ್ರೇರಣೆಯನ್ನು ನಮಗೆ ಸತ್ಯಾಗ್ರಹವು ಕೊಡುವದು. ಜಗತ್ತಿನಲ್ಲಿ ಸತ್ಯದ, ಅಹಿಂಸೆಯ, ಪ್ರೇಮದ, ನ್ಯಾಯದ ರಾಜ್ಯವು ಸ್ಥಾಪಿತವಾಗುವಂತೆ ಯತ್ನಿಸಲು ಅದು ನಮ್ಮನ್ನು ಪ್ರೇರಿಸುವದು. ವಿವೇಕ ಮತ್ತು ನೀತಿ ಇವೇ ಸತ್ಯಾಗ್ರಹಿಗಳ ಕೈದೀಪಗಳು.

ಸತ್ಯಾಗ್ರಹಿಯು ಅಜಾತಶತ್ರುವು. ಪ್ರತಿಯೊಬ್ಬನು ಅವನಿಗೆ ಜೊತೆಗಾರನು, ಬಾಂಧವನು, ಪರಮ ಸ್ನೇಹಿತನು. ಮನುಷ್ಯನು ಮೂಲತಃ ಒಳ್ಳೆಯವನಿರುವನೆಂದು ಅವನು ಸಂಪೂರ್ಣವಾಗಿ ನಂಬುವನು. ಆದುದರಿಂದ ಹಲವೊಂದು ಪ್ರಸಂಗಗಳಲ್ಲಿ ಯಾವನೊಬ್ಬನು ದುಷ್ಟತನದಿಂದ ವರ್ತಿಸಿದರೂ ಅದು ತಾತ್ಕಾಲಿಕವಾದುದೆಂದು ಅವನು ಭಾವಿಸುವನು. ಯಾವದೊಂದು

ಅನ್ಯಾಯವನ್ನು ಶರೀರತಃ ಅಥವಾ ಪಾಶವೀಶಕ್ತಿಯಿಂದ ಎದುರಿಸದೆ ಅದನ್ನು ಸತ್ಯಾಗ್ರಹಿಯು ಸಮಾಧಾನದಿಂದ ಸಹಿಸುವನು ಹಾಗೂ ಅನ್ಯಾಯ ಮಾಡುವವನ ಅಂತಃಕರಣವನ್ನು ಜಾಗ್ರತಗೊಳಿಸುವ ಯತ್ನವನ್ನು ಮಾಡುವನು. ದುಷ್ಕರ್ಮ ಮತ್ತು ದುಷ್ಕರ್ಮಮಾಡುವವ, ದುಷ್ಟ ಮತ್ತು ದುಷ್ಟತನ ಇವೆರಡೂ ಬೇರೆ ಎಂದು ಬಗೆದು ದುಷ್ಕರ್ಮವನ್ನೂ ದುಷ್ಟತನವನ್ನೂ ನಷ್ಟಪಡಿಸಲು ಹಾಗೂ ದುಷ್ಕರ್ಮ ಮಾಡುವವನನ್ನು, ದುಷ್ಟನನ್ನು ಉಳಿಸಲು, ಸುಧಾರಿಸಲು, ಸುಷ್ಟನನ್ನು ಮಾಡಲು ಸತ್ಯಾಗ್ರಹಿಯು ಹೆಣಗುವನು. ತನ್ನ ದುಷ್ಕೃತ್ಯದ ಅಥವಾ ದುಷ್ಟತನದ ಅರಿವನ್ನು ಅವನಿಗೆ ಮಾಡಿಕೊಡುವದೆ ಉತ್ತಮ ಮಾರ್ಗವೆಂದು ತಿಳಿದು ಸತ್ಯಾಗ್ರಹಿಯು ಆ ಕೆಲಸದಲ್ಲಿ ತೊಡಗುವನು. ಪ್ರತಿಪಕ್ಷಿಯ ನೈತಿಕ ದೃಷ್ಟಿಯನ್ನೂ ವಿವೇಕಶಕ್ತಿಯನ್ನೂ ಜಾಗ್ರತ ಮಾಡಲು ಅವನು ಪ್ರಯತ್ನಿಸುವನು. ಪ್ರತಿಪಕ್ಷಿಯನ್ನು ಕುರಿತು ಸತ್ಯಾಗ್ರಹಿಯು ಪ್ರೇಮವನ್ನು ತಾಳುವನು, ಆದರವನ್ನು ವ್ಯಕ್ತಮಾಡುವನು. ಅದೇ ಕಾಲಕ್ಕೆ ದುಷ್ಟತನವನ್ನೂ ಅನೀತಿಯ ಮಾರ್ಗವನ್ನೂ ಬಿಟ್ಟುಕೊಡಲಿಕ್ಕೆ ಬೇಕು, ಎಂಬರಿವನ್ನು ಅವನಲ್ಲಿ ಹುಟ್ಟಿಸಲೆತ್ನಿಸುವನು. ದುಷ್ಕರ್ಮಿಯನ್ನು ನೋಯಿಸದೆ, ಸಾಯಿಸದೆ, ದುಷ್ಕರ್ಮವನ್ನು, ದುಷ್ಪ್ರವೃತ್ತಿಯನ್ನು ಕೊಲ್ಲಲು ಯತ್ನಿಸುವ ಸಮಸ್ಯೆಯನ್ನು ಸತ್ಯಾಗ್ರಹಿಯು ಕೈಕೊಳ್ಳುವನು. ತಾನೇ ಕಷ್ಟವನ್ನು ಸಹಿಸಲು ಸಿದ್ಧನಾಗಿ, ಪ್ರತಿಪಕ್ಷಿಗೆ ಅಭಯ ಕೊಟ್ಟು ತನ್ನ ದುಷ್ಕರ್ಮದ ಬಗ್ಗೆ, ಅನೀತಿಯ ಬಗ್ಗೆ ವಿಚಾರ ಮಾಡಲು ಅವನಿಗೆ ಅನುವು ಮಾಡಿಕೊಡುವುದು ಸತ್ಯಾಗ್ರಹಿಯ ಬಿರುದು. ಈ ರೀತಿ ಪ್ರತಿಪಕ್ಷಿಯ ಮನಸಿನಲ್ಲಿಯ ದುಷ್ಟತನದ ಬೇರನ್ನೆ ಕೀಳಬೇಕೆಂದು ಸತ್ಯಾಗ್ರಹಿಯು ಯತ್ನಿಸುವನು.

ಮೇಲೆ ಹೇಳಿದವೆಲ್ಲ ಓರ್ವ ಅನುಭವಿಕ ಸತ್ಯಾಗ್ರಹಿಯ ಮುಖ್ಯ ಲಕ್ಷಣಗಳು. ಇದೊಂದು ವೈಯಕ್ತಿಕ ಸದ್ಗುಣವೆಂದು ಈವರೆಗೆ ವರ್ಣಿಸಿದ್ದಾಯಿತು. ಆದರೆ ಗುಂಪುಗಳು ಇಲ್ಲವೆ ಜನಸಾಮಾನ್ಯರೆಲ್ಲರು ಜೀವನದ ಆರ್ಥಿಕ, ಸಾಮಾಜಿಕ, ರಾಜಕೀಯ ಮುಂತಾದ ಎಲ್ಲ ಕ್ಷೇತ್ರಗಳಲ್ಲಿ ಈ ತತ್ವಗಳನ್ನೆ ಮುಂದಿಟ್ಟುಕೊಂಡು ನಡೆಯಲಾರಂಭಿಸಿದರೆಂದರೆ ಸತ್ಯಾಗ್ರಹವೆಂಬುದು ಒಂದು ವೈಯಕ್ತಿಕ ಸದ್ಗುಣವಾಗಿ ಉಳಿಯದೆ ಅದೊಂದು ಸಾಮಾಜಿಕ ಶಕ್ತಿಯಾಗಿ, ಒಂದು ಸಾಮೂಹಿಕ ಉಪಾಯವಾಗಿ ಕಂಗೊಳಿಸುವದು. ನಾವು ಇತಿಹಾಸದ ಪುಟಗಳನ್ನು ತಿರುವಿಹಾಕಿದರೆ ಅನೇಕ ಸಾಧುಸಂತರಲ್ಲಿ ಈ ಮೇಲಿನ ಲಕ್ಷಣಗಳು ಕಂಡುಬರುವವು. ಆದರೆ ಸಾಮೂಹಿಕ ರೀತಿಯಿಂದ ಬುದ್ಧಿಪುರಸ್ಸರವಾಗಿ ಈ ಶಕ್ತಿಯನ್ನು ಇಲ್ಲವೆ ಉಪಾಯವನ್ನು ಯಾವದೇ ಸಾಮಾಜಿಕ ಅನ್ಯಾಯದ

ಕಿವಿಮಾತು.

ಪರಿಮಾರ್ಜನೆಗಾಗಿ ಜನರು ಉಪಯೋಗಿಸಿದುದು ಅತಿ ವಿರಳ. ಮಹಾ ಸಾಧುಗಳು, ಧರ್ಮೋಪದೇಶಕರು, ಸಂತ-ಮಂಡಲಿಗಳು ತಮ್ಮ ವ್ಯಕ್ತಿಜೀವನದಲ್ಲಿ ಈ ರೀತಿ ನಡೆದುಕೊಂಡದ್ದುಂಟು. ಆದರೆ ಅವರ ಜೀವನವು ಒಂದು ಬಗೆಯಾಗಿ ಜನಸಾಮಾನ್ಯರ ಜೀವನದಿಂದ, ವ್ಯವಹಾರಿಕ ಜೀವನದಿಂದ ತೀರ ಪ್ರತ್ಯೇಕವಾಗಿತ್ತು. ಧನ, ಅಧಿಕಾರ, ಮಹತ್ವಾಕಾಂಕ್ಷೆ, ಸಂಗ್ರಹ ಮುಂತಾದವುಗಳ ಸಂಬಂಧ ಬರುವ ರಾಜಕಾರಣ, ವ್ಯಾಪಾರ, ಉದ್ಯೋಗ, ಇತ್ಯಾದಿ ಚಟುವಟಿಕೆಗಳನ್ನು ಅವರು ಬಿಟ್ಟುಬಿಟ್ಟದ್ದರು. ಸಮಾಜ ಜೀವನ ಒಂದತ್ತ, ಅವರ ಜೀವನ ಒಂದತ್ತ, ಹೀಗೆ ಪರಿಸ್ಥಿತಿಯಿತ್ತು. ಸ್ತ್ರೀಯರ ಸುಳುವು ಸಂಬಂಧಗಳಿಲ್ಲದಾಗ ಬ್ರಹ್ಮಚರ್ಯದಿಂದಿರುವದು ದೊಡ್ಡ ಸದ್ಗುಣವೆನಿಸಲಾರದು. ಆದರೆ ನಿತ್ಯಜೀವನದಲ್ಲಿ ಎಲ್ಲರೂ ಇರುವಂತೆ ಇದ್ದು ಯಾವನು ಸಂಯಮನಶೀಲನೊ ಅವನೇ ಶ್ರೇಷ್ಠನೆನಿಸುವನು. ಮೇಲೆ ಕಾಣಿಸಿದಂತೆ ಸಾಧುಸಜ್ಜನರು ಸಮಾಜದಿಂದ ಸಿಡಿದುನಿಂತು ಪ್ರತ್ಯೇಕವಾಗಿ ಧಾರ್ಮಿಕ ಜೀವನವನ್ನು ಕಳೆಯುಲನುವಾದುದರಿಂದ ಸಮಾಜದಲ್ಲಿ ಧರ್ಮ ಬೇರೆ ವ್ಯವಹಾರ ಬೇರೆ, ಎಂಬ ಕಲ್ಪನೆ ಬದ್ಧಮೂಲವಾಯಿತು. ವೇದಾಂತ ಬೇರೆ ವ್ಯವಹಾರ ಬೇರೆ, ಎಂಬ ತಿಳಿವಳಿಕೆ ರೂಢವಾಯಿತು. ಈ ಮೂಲಕ ಸಮಾಜದಲ್ಲಿ ನೀತಿ-ನಡತೆಗಳನ್ನು ಅಳೆಯುವ ಎರಡು ಪ್ರತ್ಯೇಕ ದಂಡಗಳು ನಿರ್ಮಾಣವಾದವು. ಧಾರ್ಮಿಕ ಜೀವನ ಬೇರೆ ವ್ಯವಹಾರಿಕ ಜೀವನ ಬೇರೆ, ವೈಯಕ್ತಿಕ ನೀತಿ ಬೇರೆ ರಾಷ್ಟ್ರೀಯ ನೀತಿ ಬೇರೆ, ಖಾಸಗಿ ನೀತಿ ಬೇರೆ ರಾಜಕೀಯ ನೀತಿ ಬೇರೆ, ಹೀಗೆ ಆಯಿತು. ವ್ಯಕ್ತಿಜೀವನದಲ್ಲಿ ಯಾವದು ನೀತಿ ಎನಿಸುವುದೊ ಅದು ರಾಜಕೀಯ ಜೀವನದಲ್ಲಿ ಸಲ್ಲದಂತಾಯಿತು. ವ್ಯಕ್ತಿಜೀವನದಲ್ಲಿ ಸತ್ಯಕ್ಕೆ ಪರಮಾವಧಿಯ ಮಹತ್ವವಿದ್ದರೆ ರಾಷ್ಟ್ರ ರಾಷ್ಟ್ರಗಳೊಳಗಿನ ವ್ಯವಹಾರದಲ್ಲಿ, ರಾಯಭಾರದಲ್ಲಿ ಅಸತ್ಯ, ಅರೆಸತ್ಯ ಇವುಗಳಿಗೆ ಮಹತ್ವವುಂಟಾಯಿತು. ಹಿಂಸೆ, ಕೊಲೆ ಇವು ವ್ಯಕ್ತಿದೃಷ್ಟಿಯಿಂದ ಮಹಾಪಾತಕಗಳೆನಿಸಿದರೆ ರಾಷ್ಟ್ರರಾಷ್ಟ್ರಗಳ ನಡುವಿನ ಹೋರಾಟದಲ್ಲಿ ಕೊಲ್ಲುವ ಶಕ್ತಿಯೆ ಶೌರ್ಯವೆನಿಸಿತು. ಒಳ್ಳೆತನ, ಸಭ್ಯತೆ, ಮನಬಿಚ್ಚಿ ಮಾತಾಡುವದು ಖಾಸಗೀ ಜೀವನದಲ್ಲಿ ಗುಣಗಳೆನಿಸುವವು. ಆದರೆ ರಾಷ್ಟ್ರವು ಇನ್ನೊಂದು ರಾಷ್ಟ್ರದೊಡನೆ ವ್ಯವಹರಿಸುವಾಗ ಇವು ಇಷ್ಟವಾದ ಸದ್ಗುಣಗಳಲ್ಲ. ಗಾಂಧೀಜಿಯವರು ರೀತಿ ನೀತಿಗಳ ಇಬ್ಬಗೆಯ ಮಾನದಂಡವನ್ನು ಅಥವಾ ಅಳತೆಗೋಲನ್ನು ಇಲ್ಲದಂತೆ ಮಾಡಬೇಕೆನ್ನುವರು. ರಾಜಕಾರಣಕ್ಕೆ ಆಧ್ಯಾತ್ಮಿಕ ಸ್ವರೂಪವನ್ನು ಕೊಡುವದೆಂದರೆ ಇದೇ. ಇದೇ ಅರ್ಥದಲ್ಲಿ ಗಾಂಧೀಜಿಯವರ ದೃಷ್ಟಿಯಿಂದ ರಾಜಕಾರಣ ಧರ್ಮಕಾರಣಗಳೆರಡೂ ಒಂದೇ ಇರುವವು. ಎಲ್ಲ

ವನ್ನು ಸತ್ಯದ ಒಂದೇ ಒಂದು ಮಾನದಿಂದ ಅಳೆದು ಪ್ರೇಮ ಮೂಲಕವಾದ ಸ್ವಕಷ್ಟದಿಂದ ಸತ್ಯರಾಜ್ಯವನ್ನು ಇಲ್ಲಿ ಪ್ರಸ್ಥಾಪಿಸುವದೆ ಗಾಂಧೀಜಿಯವರ ಮುರ್ಧನ್ಯವಾದ ಆಕಾಂಕ್ಷೆ.

ಬೇರೆ ಬೇರೆ ಜನಾಂಗಗಳ ಧಾರ್ಮಿಕ ಇತಿಹಾಸ ಪುರಾಣಾದಿಗಳಲ್ಲಿ ಸತ್ಯಾಗ್ರಹಿಗಳ ಹಲವು ಉದಾಹರಣೆಗಳು ಕಂಡುಬರುವವು. ಈ ಸ್ವಕಷ್ಟ ಸಹನದ ಮಾರ್ಗವನ್ನು ಎಷ್ಟೋ ಜನರು ಅನುಸರಿಸಿರುವರು. ಆತ್ಮಸಂರಕ್ಷಣಕ್ಕಾಗಿ ಅವರಲ್ಲಿ ಅನೇಕರು ನಿಷ್ಕ್ರಿಯ ಅವಿರೋಧವನ್ನು ಆಚರಿಸಿದುದೂ ಕಣ್ಣಿಗೆ ಬೀಳುವದು. ಅವರಲ್ಲಿ ಅನೇಕರು ಅಧ್ಯಾತ್ಮಜೀವಿಗಳಾಗಿದ್ದರು ಹಾಗೂ ಜಗತ್ತನ್ನು ಕುರಿತು ಉದಾಸೀನರಾಗಿದ್ದರು. ಜೀವನದ ವಿವಿಧ ಚಟುವಟಿಕೆಗಳಲ್ಲಿ ಅವರು ಭಾಗವಹಿಸುತ್ತಿರಲಿಲ್ಲ. ಅವರನ್ನು ಯಾರಾದರೂ ಪೀಡಿಸಿದರೆ ಸೈರಣೆಯ ಮಾರ್ಗವನ್ನು ಆಶ್ರಯಿಸುತ್ತಿದ್ದರು. ಇಂಥ ನೂರಾರು ಉದಾಹರಣೆಗಳನ್ನು ಕೊಡಬಹುದು. ಆದರೆ ಸ್ಥಲಾಭಾವದ ಮೂಲಕ ಇಲ್ಲಿ ಗಾಂಧೀಜಿಯವರ ಜೀವನದ ಮೇಲೆ ಪರಿಣಾಮ ಮಾಡಿದ ಒಂದೆರಡು ಪೌರಾಣಿಕ ಉದಾಹರಣೆಗಳನ್ನು ಮಾತ್ರ ಕೊಡುವೆನು.

ಪ್ರಲ್ಹಾದ ಹಾಗೂ ಹರಿಶ್ಚಂದ್ರ ಈ ಎರಡೇ ಉದಾಹರಣೆಗಳನ್ನು ನೋಡುವ. ಈ ಎರಡೂ ಉದಾಹರಣೆಗಳು ಗಾಂಧೀಜಿಯವರ ಜೀವನದ ಮೇಲೆ ಚಿಕ್ಕ ವಯಸ್ಸಿನಲ್ಲಿ ಅತ್ಯಂತ ಗಾಢವಾದ ಪರಿಣಾಮವನ್ನುಂಟು ಮಾಡಿದವು. ಪ್ರಲ್ಹಾದನ ಉಲ್ಲೇಖವನ್ನು ಅವರು ತಮ್ಮ ಭಾಷಣಗಳಲ್ಲಿ ಅನೇಕ ಸಾರೆ ಮಾಡಿರುವರು. ಹರಿಶ್ಚಂದ್ರ ನಾಟಕವನ್ನು ನೋಡಿ ತಮ್ಮ ಮನಸಿನ ಮೇಲೆ ಬಹಳ ಪರಿಣಾಮವಾಯಿತು ಎಂದು ಅವರು ತಮ್ಮ ಆತ್ಮಚರಿತ್ರದಲ್ಲಿ ಬರೆದಿರುವರು.

ಪ್ರಲ್ಹಾದನು ದೇವರ ಭಕ್ತಿಯಿಂದ ಪ್ರೇರಿತನಾದ ಓರ್ವ ಚಿಕ್ಕ ಬಾಲಕನು. ಅವನ ತಂದೆ ನಾಸ್ತಿಕಶಿರೋಮಣಿ. ನಾಮಸ್ಮರಣೆ ಮಾಡಬೇಡೆಂದು ತಂದೆ ಮಗನಿಗೆ ನಿರ್ಬಂಧ ಮಾಡಿದನು. ಆದರೆ ಮಗು ದೇವರ ನಾಮ ಬಿಡಲಿಲ್ಲ. ತಂದೆ ಆ ಹಟಮಾರಿ ಹುಡುಗನನ್ನು ಪೀಡಿಸಲಾರಂಭಿಸಿದನು. ಹೊಡೆತ, ಬಡೆತ, ಚಿತ್ರಹಿಂಸೆ ಇವೆಲ್ಲ ಆರಂಭಿಸಿದವು. ಆದರೂ ಮಗುವು ತನ್ನ ಕಾಯಕವನ್ನು ಬಿಡಲಿಲ್ಲ. ಪೀಡೆ ಪಟ್ಟಷ್ಟು ಅವನು ತನ್ನ ಪಥದಲ್ಲಿ ಮತ್ತಷ್ಟು ದೃಢವಾಗುತ್ತ ನಡೆದನು. ತಂದೆಗೆ ದೇವರ ಅಸ್ತಿತ್ವದ ಅರಿವು ಆಗಲಿ ಎಂದು ಅವನು ದೇವರನ್ನು ಪ್ರಾರ್ಥಿಸುತ್ತಿದ್ದನು. ಕೊನೆಗೆ ದೇವರು ಪ್ರಕಟನಾಗಿ ಆ ನಾಸ್ತಿಕ ತಂದೆಯನ್ನು ದಂಡಿಸತೊಡಗಿದನು. ಆದರೆ ಆ ಆಸ್ತಿಕ ಮಗುವು

ನಡುವೆಯಾಗಿ ತಂದೆಯ ಜೀವದೇಹಗಳನ್ನು ಉಳಿಸಿತು. ಬಳಿಕ ತಂದೆಯೂ ದೇವರ ದೊಡ್ಡ ಭಕ್ತನಾದನು.

ಹರಿಶ್ಚಂದ್ರನ ಕಥೆ ಇದಕ್ಕೂ ಮನೋರಂಜಕ. ಅವನೊಬ್ಬ ದೊಡ್ಡ ಅರಸ. ಒಮ್ಮೆ ಕನಸಿನಲ್ಲಿ ಅವನು ತನ್ನ ರಾಜ್ಯವನ್ನೆಲ್ಲ ವಿಶ್ವಾಮಿತ್ರಮುನಿಗೆ ಕೊಟ್ಟುಬಿಟ್ಟನು. ಮಾರನೆದಿನ ಅರಸನು ಈ ಮಾತನ್ನು ತನ್ನ ಆಪ್ತಮಿತ್ರರಿಗೆ ಹೇಳಿದನು. ಇದನ್ನು ವಿಶ್ವಾಮಿತ್ರನು ಯಾರಿಂದಲೊ ಕೇಳಿಕೊಂಡನು. ಕೂಡಲೆ ಧಾವಿಸಿ ಬಂದು ಅವನು ಅರಸೊತ್ತಿಗೆ ಬೇಡಲಾರಂಭಿಸಿದನು. ಸತ್ಯಶೀಲನಾದ ಅರಸನು ತನ್ನ ವಚನಕ್ಕನುಸರಿಸಿ ರಾಜ್ಯವನ್ನು ಕೊಟ್ಟುಬಿಟ್ಟು ಉಟ್ಟಬಟ್ಟೆಯ ಮೇಲೆ ಹೆಂಡತಿ-ಮಗನೊಡನೆ ಹೊರಹೊರಟನು. ಆ ಮೇಲೆ ವಿಶ್ವಾಮಿತ್ರನು ಆ ಉದಾರ ಅರಸನನ್ನು ವಿಧವಿಧದಿಂದ ಪೀಡಿಸಿದನು. ರಾಜ್ಯವನ್ನು ಪಡೆಯುವದಲ್ಲದೆ ದಕ್ಷಿಣೆ ಬೇಡಿದನು. ಅರಸನ ಬಳಿ ಒಂದು ಒಡಕು ಕವಡಿ ಸಹ ಇರಲಿಲ್ಲ. ಆಗ ತನ್ನ ಹೆಂಡತಿಗೆ ಅವನು ದಾಸಿಯ ಕೆಲಸ ಮಾಡಹೇಳಿ ತಾನು ಅದೇ ಊರಿನ ಸ್ಮಶಾನದ ಕಾವಲುಗಾರನಾದನು. ಅನೇಕ ಕರುಣಾಜನಕ ಸಂಗತಿಗಳ ಮೂಲಕ ಆ ಅರಸನ ಮತ್ತು ಅವನ ಹೆಂಡತಿಯ ಸತ್ವಪರೀಕ್ಷೆ ನಡೆಯಿತು. ಏನೇ ಆದರೂ ಅವನು ಕೊಟ್ಟವಚನಕ್ಕೆ ಎಳ್ಳಷ್ಟೂ ತಪ್ಪಲಿಲ್ಲ. ವಿಶ್ವಾಮಿತ್ರನ ಬಗ್ಗೆ ಒಂದು ಕ್ಷಣ ಸಹ ವೈರಭಾವವನ್ನು ತಳೆಯಲಿಲ್ಲ. ಕೊನೆಗೆ ಒಂದು ಸಂದರ್ಭ ಉಂಟಾಗಿ ಪಟ್ಟಣದ ಅರಸನ ಆಜ್ಞೆಯ ಮೇರೆಗೆ ತನ್ನ ಹೆಂಡತಿಯ ರುಂಡವನ್ನು ಹಾರಿಸುವ ಪ್ರಸಂಗವು ಅರಸನ ಮೇಲೆ ಬಂದಿತು. ಆಗ ವಿಶ್ವಾಮಿತ್ರನು ಪ್ರಸನ್ನನಾಗಿ, ಈ ತ್ರಿಭುವನದಲ್ಲಿ ನಿನ್ನಂಥ ಸತ್ವಶೀಲನು ಯಾರೂ ಇಲ್ಲ. ಮಾನವಕುಲಕ್ಕೆಯೆ ನೀನು ಭೂಷಣಪ್ರಾಯನು ಎಂದು ಹರಸಿದನು. ಒಮ್ಮೆ ಹರಿಶ್ಚಂದ್ರ ನಾಟಕವನ್ನು ನೋಡಿ, ಎಲ್ಲರೂ ಹರಿಶ್ಚಂದ್ರನಂತೆ ಸತ್ಯಾಚರಣೆಗಳೇಕೆ ಆಗಬಾರದು ಎಂದು ಗಾಂಧೀಜಿಯವರು ಅಂದರು. ಆ ಪ್ರಶ್ನೆಯನ್ನು ಅವರು ಕ್ಷಣವೊಂದಕ್ಕೂ ತಮ್ಮನ್ನು ತಾವೇ ಕೇಳುತಿರಲಿಕ್ಕೆ ಸಾಕು.

ಐತಿಹಾಸಿಕ ಕಾಲದಲ್ಲಿ ಬುದ್ಧ, ಮಹಾವೀರರಂಥ ಅಹಿಂಸಾವಾದಿಗಳು ಆಗಿ ಹೋದರು. ಅದೇ ರೀತಿ ಏಸೂಕ್ರಿಸ್ತನ ಅನುಪಮ ಉದಾಹರಣೆ ಇರುವದು. ಸಾಕ್ರೆಟೀಸನೆಂಬ ಗ್ರೀಕ ತತ್ವಜ್ಞನ ಕಥೆಯು ಸರ್ವಶ್ರುತವು. ಹಾಫೀಜ, ಸರಮ್ಮದ್ ಎಂಬ ಸೂಫೀ ಸಾಧುಗಳು ಪ್ರಸಿದ್ಧರಿರುವರು. ತಮಿಳ ದೇಶದ ನಂದನಾರನು, ಮಹಾರಾಷ್ಟ್ರದ ತುಕಾರಾಮನು, ಕರ್ನಾಟಕದ ಭಕ್ತಶಿರೋಮಣಿ ಕನಕದಾಸನು ಇವರೆಲ್ಲರು ಕೆಲವೊಂದು ಪ್ರಸಂಗ

ಗಳಲ್ಲಿ ಸತ್ಯಾಗ್ರಹಿಗಳಂತೆ ಆಚರಿಸಿರುವರು. ತನ್ನನ್ನು ಪೀಡಿಸುವವರನ್ನು ಕುರಿತು ಕಿಂಚಿತ್ತಾದರೂ ದ್ವೇಷಭಾವನೆ ಇಲ್ಲದೆ ಸಾಕ್ರೇತೀಸನು ವಿಷದ ಗುಟುಕನ್ನು ಕುಡಿದು ಪ್ರಾಣ ಬಿಟ್ಟನು. ಗ್ರೀಸ ದೇಶದ ತರುಣರ ಮನಸನ್ನು ತನ್ನ ಬುದ್ಧಿಕೌಶಲ್ಯದಿಂದ ಅವನು ಕೆಡಿಸುವನು ಎಂಬುದೆ ಅವನ ಮೇಲಿದ್ದ ಆರೋಪ! ಆ ಬಗ್ಗೆ ಅವನಿಗೆ ವಿಷಕುಡಿಯುವ ಶಿಕ್ಷೆ. ತುಕಾರಾಮನಿಗೂ ಸಮಾಜದಲ್ಲಿಯ ಹಲವರು ನಾನಾತರದ ಪೀಡೆ ಕೊಟ್ಟರು. ಆದರೆ ಅವನು ಪಿಟ್ಟೆಂದು ಒಂದು ಮರುಮಾತನ್ನು ಸಹ ಆಡದೆ ಎಲ್ಲವನ್ನು ತಾಳ್ಮೆಯಿಂದ ಸಹಿಸಿದನು. ಇನ್ನೊಬ್ಬ ಸಾಧುವು ನದಿಯಿಂದ ಸ್ನಾನಮಾಡಿ ಬರುತಿರುವಾಗ ಅವನ ಮೇಲೆ ಹಲವು ದುಷ್ಟರು ಉಗುಳಿದರು. ಅವನು ಅವರ ಕಡೆಗೆ ಕಣ್ಣೆತ್ತಿ ಸಹ ನೋಡದೆ ನಗುಮೊಗದಿಂದ ನದಿಗೆ ಮರಳಿ ಹೋಗಿ ಮತ್ತೆ ಸ್ನಾನಮಾಡಿ ಬಂದನು. ಆ ದುಷ್ಟರು ಪುನಃ ಅವನ ಮೇಲೆ ಉಗುಳಿದರು. ಹೀಗೆ ಅವರು ಇಪ್ಪತ್ತು ಸಾರೆ ಮಾಡಿದರೂ ಅವನು ಒಮ್ಮೆಯೂ ಕೆಡುಕು ಮಾತಾಡದೆ ಮತ್ತೆ ಮತ್ತೆ ಸ್ನಾನಮಾಡಿ ಬಂದನಂತೆ. ಕೊನೆಗೆ ಆ ದುಷ್ಟರೆ ಬೇಸತ್ತು ಅವನಿಗೆ ಶರಣಾಗತರಾಗಿ ಕ್ಷಮೆ ಬೇಡಿದರು. ಕನಕನಿಗೆ ನೀಚ ಜಾತಿಯವನೆಂದು ಉಡುಪಿಯ ದೇವರ ಗುಡಿಯಲ್ಲಿ ಉಚ್ಚಕುಲದವರೆನಿಸಿ ಕೊಳ್ಳುವವರು ಹೋಗಗೊಡಲಿಲ್ಲ. ಅವನು ಹೊರಗೆ ಗುಡಿಯ ಒಂದು ಬದಿಗೆ ಧರಣಿ ಕುಳಿತನು. ಪೂಜಾರಿಗಳು ಒಂದು ದಿನ ಬೆಳಗಿನಲ್ಲಿ ಬಾಗಿಲು ತೆರೆದು ನೋಡಲು ಉಡುಪಿ ಕೃಷ್ಣನ ಮೂರುತಿ ಕನಕನು ಕುಳಿತ ದಿಕ್ಕಿಗೆ ಮೋರೆ ತಿರುವಿತ್ತು. ಅದನ್ನು ನೋಡಿ ಆಶ್ಚರ್ಯಬಟ್ಟು ಆ ದಿಕ್ಕಿನ ಗೋಡೆ ಯಲ್ಲಿ ಒಂದು ಖಿಂಡಿಯನ್ನು ಮಾಡಿಸಿ ಕನಕನಿಗೆ ದೇವರ ದರ್ಶನವನ್ನು ಮಾಡಿಸಿದರಂತೆ! ಅಂತೂ ಅವನನ್ನು ಒಳಗೆ ಬಿಡಲಿಲ್ಲ! ಇರಲಿ. ಏಸೂ ಕ್ರಿಸ್ತನು ಸತ್ಯಕ್ಕಾಗಿ ಶಿಲುಬೆಯನ್ನೇರಿದುದಂತೂ ಎಲ್ಲರಿಗೂ ಗೊತ್ತು. ಈ ಎಲ್ಲ ಉದಾಹರಣೆಗಳಲ್ಲಿ ಆಯಾ ಸಾಧು ಸಂತರು, ತಮ್ಮ ದೇಹವೆಂದರೊಂದು ಧರ್ಮಸಾಧನ, ಅಮೃತ ಆತ್ಮನ ಮರ್ತ್ಯ ಮನೆ ಎಂದು ಬಗೆದಿದ್ದರೆಂಬದು ಸ್ಪಷ್ಟ. ಅಂಥ ನಶ್ವರ ದೇಹವನ್ನು ಸತ್ಯಕ್ಕಾಗಿ, ಆತ್ಮಕ್ಕಾಗಿ ಸತ್ಯಸಾಧನೆಗಾಗಿ, ಆತ್ಮದರ್ಶನಕ್ಕಾಗಿ ಧಾರೆಯೆರೆಯುವದೆ ತಮ್ಮ ಕರ್ತವ್ಯವೆಂದು ಅವರು ಭಾವಿ ಸಿದ್ದರು. ತಮ್ಮ ಅಂತಃಕರಣದಲ್ಲಿ ಸತ್ಯವೆಂದು ಕಂಡದ್ದನ್ನು, ತಮಗೆ ಸತ್ಯ ವೆಂದು ಪ್ರತೀತವಾದುದನ್ನು ನುಡಿಯಲು, ಅದರಂತೆ ನಡೆಯಲು ಅವರು ಸರ್ವಸ್ವವನ್ನೂ ಅರ್ಪಿಸಿದರು.

ಅಹಿಂಸೆ, ಪರರನ್ನು ನೋಯಿಸದಿರುವದು, ಪರಹಿತಬುದ್ಧಿ, ಪ್ರಾಣಿ

D. 25.1.1959



ಮಾತ್ರರ ಬಗ್ಗೆ ಪ್ರೇಮ ಇವುಗಳನ್ನು ಎಲ್ಲ ಧರ್ಮಗಳೂ ಒತ್ತಿ ಹೇಳಿವೆ. ಅಹಿಂಸೆಯೆ ಪರಮ ಧರ್ಮವು ಎಂದು ಜೈನ ಮತ್ತು ಬುದ್ಧ ಧರ್ಮಗಳು ಸಾರಿ ಸಾರಿ ಹೇಳಿರುವವು. 'ಅಹಿಂಸಾ ಪರಮೋ ಧರ್ಮಃ' ಎಂಬುದೆ ಆ ಧರ್ಮಗಳ ಮಹಾವಾಕ್ಯವು. ಹಿಂದೂ ಧರ್ಮವು ಅಹಿಂಸೆಯನ್ನು ಶ್ರೇಷ್ಠ ಧರ್ಮವೆಂದು ಮನ್ನಿಸುವದಲ್ಲದೆ ಸತ್ಯಕ್ಕಿಂತ ಹೆಚ್ಚಿನ ಧರ್ಮವಿಲ್ಲ, 'ಸತ್ಯಾನ್ನಾಸ್ತಿ ಪರೋ ಧರ್ಮಃ' ಎಂದು ಸಾರುವದು. ಈ ರೀತಿ ಸತ್ಯ ಹಾಗೂ ಅಹಿಂಸೆ ಇವು ಹಿಂದೂ ಧರ್ಮದ ಎರಡು ಮೂಲೆಗಲ್ಲುಗಳು. ಪ್ರೇಮಕ್ಕಿಂತ, ಅಹಿಂಸೆಗಿಂತ ಸತ್ಯವನ್ನು ಏಕೆ ಎತ್ತಿ ಹೇಳುವಿರಿ, ಎಂದು ಒಮ್ಮೆ ಗಾಂಧೀಜಿಯವರನ್ನು ಪ್ರಶ್ನಿಸಲಾಗಿ, ಅವರು ಅಂದದ್ದು, 'ಸತ್ಯವು ಎಲ್ಲಕ್ಕೂ ಶ್ರೇಷ್ಠವು. ಅಹಿಂಸಾದಿಗಳೆಲ್ಲ ಅದರ ಹೊಟ್ಟೆಯಲ್ಲಿ ಒಳಗೊಳ್ಳುವವು. ಸತ್ಯವು ಎಲ್ಲಕ್ಕೂ ಆಚೆಗಿನದು, ಅತೀತವು.' ಇಸ್ಲಾಮ ಈ ಶಬ್ದದ ಅರ್ಥವು ಶಾಂತಿ ಎಂದು ಇರುವದು. ಇಸ್ಲಾಮ ಧರ್ಮವು ಶಾಂತಿಯನ್ನೇ ಉಪದೇಶಿಸುವದು. ಶಾಂತಿಯು ಸರ್ವ ಹಿತಬುದ್ಧಿಯಿಂದಲೆ ಪ್ರಸ್ಥಾಪಿತವಾಗಬಲ್ಲದು.

ಸಾಕ್ರೇತೀಸನು ಸತ್ಯಕ್ಕಾಗಿಯೆ ವಿಷದ ಬಟ್ಟಲವನ್ನು ಸೇವಿಸಿದನು. ಅದೇ ರೀತಿ ಏಸೂ ಕ್ರಿಸ್ತನ ಮರಣವು ಸತ್ಯಸಾಧನಕ್ಕಾಗಿಯೆ ಇತ್ತು. ನಾನು ಸತ್ಯವನ್ನು ನುಡಿಯುತಿರುವೆನು ಎಂದು ಶಾಂತ ಧೀರೋದಾತ್ತ ಭಾವದಿಂದ ಕ್ರಿಸ್ತನು ರೋಮನ್ ನ್ಯಾಯಾಧೀಶನಿಗೆ ಹೇಳಿದನು. ಆದರೆ ಅದನ್ನು ಲಕ್ಷಿಸದೆ, ಚೇಷ್ಟೆಯಿಂದ 'ಸತ್ಯವಂತೆ ಸತ್ಯ! ಅದೇನು, ಸತ್ಯವೆಂದರೇನು?' ಎಂದು ಆ ನ್ಯಾಯಾಧೀಶನು ಗಲ್ಲಿನ ಶಿಕ್ಷೆಯನ್ನು ವಿಧಿಸಿಬಿಟ್ಟನು. ಎಂತಹ ಮಾನವೀ ದುರಂತವಿದು! ಇದೆಲ್ಲ ಯಾವ ನ್ಯಾಯಸಭೆಯಲ್ಲಿ ನಡೆಯಿತೊ ಆ ಸಭೆಯ ವಾತಾವರಣವು ಆಗ ಎಂಥ ದುರಂತ ವಾತಾವರಣದಿಂದ ತುಂಬಿ ಹೋಗಿತ್ತೆಂಬುದನ್ನು ನಾವು ಕಲ್ಪಿಸಬಲ್ಲೆವು. ಕ್ರಿಸ್ತನ ಉಪದೇಶದಲ್ಲಿ ಸತ್ಯಾಗ್ರಹದ ಹಲವು ಪ್ರಮೇಯಗಳು ಸ್ಪಷ್ಟವಾಗಿ ಒಡಮೂಡಿವೆ. ಈ ದೃಷ್ಟಿಯಿಂದ 'ಸರ್ಮನ್ ಆನ್ ದಿ ಮೌಂಟ', 'ದಿನ್ನೆಯ ಮೇಲಿನ ಧರ್ಮೋಪದೇಶ' ಎಂಬುದು ಮನನೀಯವಿರುವದು. 'ಕೆಡುಕನ್ನು ಕೆಡುಕಿನಿಂದ ವಿರೋಧಿಸಬೇಡ,' 'ಶತ್ರುವನ್ನು ಕೂಡ ಪ್ರೀತಿಸು,' 'ಕೊಲಬೇಡ ಎಂಬುದನ್ನಿಷ್ಟೇ ನಾನು ಹೇಳುವದಿಲ್ಲ, ಆದರೆ ಯಾರನ್ನೂ ದ್ವೇಷಿಸಬೇಡ ಎಂದು ನಾನು ಹೇಳುವೆ,' ಈ ಮುಂತಾದ ವಾಕ್ಯಗಳು ಸತ್ಯಾಗ್ರಹದ ತಿರುಳನ್ನು ನೆಮ್ಮೆದುರಿಗಿಡುವವು. ಅಂದಿನಿಂದ ಈವರೆಗೆ ಸುಮಾರು ಎರಡು ಸಾವಿರ ವರುಷಗಳಲ್ಲಿ ಸತ್ಯಾಗ್ರಹಮಾರ್ಗವು ಮತ್ತಷ್ಟು ಪರಿಪಕ್ವವಾಗುತ್ತ ಬಂದಿದೆ.

ಗಾಂಧೀಜಿಯವರು ಆ ಮಾರ್ಗವನ್ನು ಕೈಕೊಂಡು ತದನುಸಾರ ವರ್ತನ ಮಾಡಲು ಆರಂಭಿಸಿದಂದಿನಿಂದಂತೂ ಅದು ಪರಮಾವಧಿಗೆ ಮುಟ್ಟಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಬುದ್ಧ ಹಾಗೂ ಕ್ರಿಸ್ತ ಇವರಿಬ್ಬರೂ ಅಹಿಂಸಾತತ್ತ್ವವನ್ನು ತಮ್ಮ ಜೀವನದಲ್ಲಿ ಆಚರಣೆಯಲ್ಲಿ ತಂದರು. ಆ ತತ್ತ್ವದ ಉಪದೇಶವನ್ನು ಅನ್ಯರಿಗೆ ಮಾಡಿದರು. ಆದರೆ ರಾಜಕೀಯ, ಸಾಮಾಜಿಕ, ಆರ್ಥಿಕ ರಂಗಗಳಲ್ಲಿ ಸಾಮೂಹಿಕವಾಗಿ ಆ ತತ್ತ್ವವನ್ನು ಅವರು ಉಪದೇಶಿಸಿದ ಇಲ್ಲವೆ ಅದನ್ನು ಆಚರಣೆಯಲ್ಲಿ ತಂದ ಉದಾಹರಣೆಗಳ ಉಲ್ಲೇಖವು ಇತಿಹಾಸದಲ್ಲಿಯಾಗಲಿ ಅವರವರ ಚರಿತ್ರೆಗಳಲ್ಲಾಗಲಿ ಕಂಡು ಬರುವದಿಲ್ಲ. ಆ ಪ್ರಸಂಗವು ಕರನಿರಾಕರಣೆ ಕೈಕೊಳ್ಳಲು ಯೋಗ್ಯವಿತ್ತೋ ಇಲ್ಲವೊ ನಾನರಿಯೆ. ಆದರೆ ಒಮ್ಮೆ ಆಗಿನ ನಾಣ್ಯ ತೋರಿಸಿ ಒಬ್ಬರು ಕ್ರಿಸ್ತನನ್ನು, ಇದನ್ನು ಸರಕಾರಕ್ಕೆ ಕೊಡಬಹುದೇ, ಎಂದು ಕೇಳಿದ್ದಕ್ಕೆ 'ಸೀಝರನ (ಆಗಿನ ಅರಸು) ನಾಣ್ಯವನ್ನು ಸೀಝರನಿಗೆ ಕೊಟ್ಟುಬಿಡು' ಎಂದು ಹೇಳಿದ್ದುಂಟು.

## ಅಭ್ಯಾಸ

೧. **ಕಠಿಣ ಶಬ್ದಗಳ ಅರ್ಥ :—**

ಸತ್ಯಾಗ್ರಹ—ಸತ್ಯವೆಂದರೆ ನಿಜವಸ್ತು, ಯಥಾವಸ್ತು; ಆಗ್ರಹವೆಂದರೆ ಗಟ್ಟಿಯಾಗಿ ಹಿಡಿಯುವುದು, ಅಂಟಿಕೊಳ್ಳುವುದು, ಹಟ ಹಿಡಿಯುವುದು. ಸತ್ಯಾಗ್ರಹವೆಂದರೆ ಸತ್ಯಕ್ಕೆ ಅಂಟಿಕೊಳ್ಳುವುದು, ಸತ್ಯವನ್ನು ಬಿಗಿಯಾಗಿ ಹಿಡಿದುಕೊಳ್ಳುವುದು, ಸತ್ಯವನ್ನೇ ಹಟದಿಂದ ಹಿಂಬಾಲಿಸುವುದು.

ನಿಃಶಸ್ತ್ರ ಪ್ರತಿಕಾರ—ಯಾವ ಅಸ್ತ್ರವನ್ನೂ ಉಪಯೋಗಿಸದೆ ಪ್ರತಿಕಾರ ಮಾಡುವುದು. ಪ್ರಣೀತ—ರಚಿತವಾದ, ಮಾಡಲ್ಪಟ್ಟ. ಖತನೆಟ್ಟ—ತುಕ್ಕುಹಿಡಿದ, ತುಂಡಾದ. ಪ್ರಮೇಯ—ವಿಷಯ, ಅಳೆಯುವುದಕ್ಕಾಗದ. ಪರಿಮಾರ್ಜನೆ—ನಿವಾರಿಸುವುದು, ಬಿಡುವುದು, ತೊಳೆಯುವುದು. ವಿಪರೀತ—ವಿರುದ್ಧ, ವ್ಯತಿರಿಕ್ತ. ಉತ್ಪಾದಕ—ಸೃಜಿಸಿದ, ಮಾಡಿದ. ಸ್ಮಿತವದನ—ನಗುಮುಖ. ಉಲ್ಲೇಖ—ವಿವರಣೆ. ಆವಿಷ್ಕರಿಸು—ಕಂಡುಹಿಡಿ. ಅಜಾತಶತ್ರು—ಹಗೆಯಿಲ್ಲದವನು. ಜಾಗ್ರತಗೊಳಿಸು—ಎಚ್ಚರಗೊಳಿಸು. ಸುಸ್ಥ—ಭದ್ರವಾದ. ದಂಡ—ಕೋಲು, ಅಳತೆಗೋಲು, ಶಿಕ್ಷೆ. ದುರ್ದಮ್ಯ—ಅಡಗಿಸಲಾಗದ. ನಾಸ್ತಿಕ—ದೇವರಿಲ್ಲವೆಂದು ನಂಬಿರುವವನು. ಕಾಯಕ—ಕೆಲಸ, ಉದ್ಯೋಗ. ಪಥ—ಮಾರ್ಗ, ದಾರಿ. ಆಸ್ತಿಕ—ದೇವರಿರುವನೆಂದು ನಂಬಿರುವವನು. ಅರಸೊತ್ತಿಗೆ—ರಾಜ್ಯಕ್ಕೆ. ತಳೆ—ಹೊಂದು, ಧರಿಸು.

ಧರಣಿ ಕೂರುವುದು—ಹಟಹಿಡಿದು ಕೂರುವುದು. ಕರ—ತರಿಗೆ, ಕಂದಾಯ.

1 ಬುದ್ಧ—ಕಪಿಲವಸ್ತುವಿನ ರಾಜನಾದ ಶುದ್ಧೋದನನ ಮಗ. ಕ್ರಿಸ್ತ ಪೂರ್ವ ೫೫೭ನೇ ಇಸವಿಯಲ್ಲಿ ಜನಿಸಿದನು. ಮಡದಿ ಮಕ್ಕಳನ್ನು ತೊರೆದು ಜ್ಞಾನವನ್ನು ಸಂಪಾದಿಸಿ ಬೌದ್ಧ ಮತವನ್ನು ಸ್ಥಾಪಿಸಿ ತನ್ನ ಎಂಬತ್ತನೆಯ ವಯಸ್ಸಿನಲ್ಲಿ ಸ್ವರ್ಗಸ್ಥನಾದನು.

2 ಹಾಫೀಜ—ಸುಮಾರು ಹನ್ನೊಂದನೆಯ ಶತಮಾನದಲ್ಲಿದ್ದ ಪರ್ಷಿಯನ್ ಕವಿ.

3 ಸರಮದ್—ಅಕ್ಬರನ ಕಾಲದಲ್ಲಿದ್ದ ಒಬ್ಬ ಮಹಮದೀಯ ಸಾಧು.

4 ಮಹಾವೀರ—ಜೈನ ಮತದ ಕೊನೆಯ ತೀರ್ಥಂಕರ. ಕ್ರಿಸ್ತ ಪೂರ್ವ ೬ನೆಯ ಶತಮಾನದಲ್ಲಿ ಇದ್ದಿರಬಹುದು.

5 ನಂದನಾರ್—ತಮಿಳುನಾಡಿನ ಒಬ್ಬ ಶಿವಭಕ್ತ, ಚಿದಂಬರದ ನಟರಾಜನ ಭಕ್ತ.

6 ಯೇಸುಕ್ರಿಸ್ತ—ಕ್ರೈಸ್ತ ಮತದ ಸಂಸ್ಥಾಪಕ. ಪ್ಯಾಲೆಸ್ಟೈನ್ ಇವನ ಜನ್ಮಸ್ಥಳ. ಜುಡಾಸ್ ಎಂಬ ಇವನ ಶಿಷ್ಯನೇ ಇವನನ್ನು ಶತ್ರುಗಳಿಗೆ ಹಿಡಿದುಕೊಟ್ಟನು. ರೋಮನ್ ಗೌರ್ನರನು ಇವನನ್ನು ಶಿಲುಬೆಗೇರಿಸುವಂತೆ ಮಾಡಿದ.

7 ತುಕಾರಾಮ—೧೭ನೆಯ ಶತಮಾನದಲ್ಲಿದ್ದ ಮಹಾರಾಷ್ಟ್ರದ ವಿಷ್ಣುಭಕ್ತ. ವಿಷ್ಣುಭಕ್ತಿಯನ್ನು ಪ್ರತಿಪಾದಿಸುವ ಕೀರ್ತನೆಗಳನ್ನು ಮರಾಟಿಯಲ್ಲಿ ರಚಿಸಿದ್ದಾನೆ.

8 ಕನಕದಾಸ—೧೬ನೆಯ ಶತಮಾನದಲ್ಲಿದ್ದ ವಿಷ್ಣುಭಕ್ತ. ಕೆಲವು ಕಾಲ ವಿಜಯನಗರದಲ್ಲಿದ್ದು ಕನ್ನಡದಲ್ಲಿ ಅನೇಕ ಕೀರ್ತನೆಗಳನ್ನು ಹಾಡಿದನು.

9 ಸಾಕ್ರೇತೀಸ—ಕ್ರಿಸ್ತ ಪೂರ್ವ ೫ನೆಯ ಶತಮಾನದಲ್ಲಿ ಗ್ರೀಸಿನ ಅಥೆನ್ಸ್ ನಗರದಲ್ಲಿದ್ದ ಒಬ್ಬ ತತ್ತ್ವಜ್ಞಾನಿ.

10 ಅಹಿಂಸಾ ಪರಮೋಧರ್ಮಃ—ಅಹಿಂಸೆಯೇ ಉತ್ತಮವಾದ ಧರ್ಮ.

11 ಸತ್ಯಾನ್ನಾಸ್ತಿ ಪರೋಧರ್ಮಃ—ಸತ್ಯಕ್ಕಿಂತ ಮಿಗಿಲಾದ ಮತ್ತೊಂದು ಧರ್ಮವಿಲ್ಲ.

12 ಸರ್ಮನ್ ಆನ್ ದಿ ಮೌಂಟ್—ಗುಡ್ಡದ ಮೇಲೆ ನಿಂತು ಯೇಸು ಕ್ರಿಸ್ತನು ಹೇಗೆ ಪ್ರಾರ್ಥನೆ ಮಾಡಬೇಕು, ಹೇಗೆ ನಡೆದುಕೊಳ್ಳಬೇಕೆಂಬುದನ್ನು ಬೋಧಿಸಿದ ಧರ್ಮೋಪದೇಶ.

13 ಸುಫೀ ಸಾಧು—ಮುಸಲ್ಮಾನರಲ್ಲಿ ವೇದಾಂತಿಗಳ ಒಂದು ಪಂಗಡ.

14 ಸೀಝರ್—ಕ್ರಿಸ್ತ ಪೂರ್ವ ೧ನೆಯ ಶತಮಾನದಲ್ಲಿದ್ದ ರೋಮನ್ ಚಕ್ರವರ್ತಿ.

೨. ಇವುಗಳ ಸಂದರ್ಭೋಚಿತವಾದ ಟಿಪ್ಪಣಿ ಬರೆಯಿರಿ:—

೧. ದುಷ್ಟನನ್ನು ಗಾಯಗೊಳಿಸದೆ ದುಷ್ಟತನವನ್ನು ಸವರುವ ಜಿಲುಮೆ ಈ ಸತ್ಯಾಗ್ರಹ ಖಡ್ಗದ್ದು.

೨. ಸತ್ಯಾಗ್ರಹವೆಂಬುದು ಒಂದು ಜೀವನ ದೃಷ್ಟಿಯು; ಒಂದು ವೃತ್ತಿ ವಿಶೇಷವು.

೩. ವಿವೇಕ ಮತ್ತು ನೀತಿ ಇವೇ ಸತ್ಯಾಗ್ರಹಿಗಳ ಕೈದೀಪಗಳು.

೩. ಪ್ರಶ್ನೆಗಳು :—

೧. ಸತ್ಯಾಗ್ರಹದ ಮುಖ್ಯ ತತ್ತ್ವಗಳು ಯಾವುವು ?

೨. ಸತ್ಯಾಗ್ರಹಿಯ ಗುಣಗಳನ್ನು ವಿವರಿಸಿ.

೩. ಗಾಂಧೀಜಿ ಅವರ ಮೇಲೆ ಪೌರಾಣಿಕ ಸತ್ಯಾಗ್ರಹಿಗಳು ಹೇಗೆ ಪ್ರಭಾವ ಬೀರಿದರು?

K. Shanthaveerappa.
III 'B'

# ದೇವಪ್ರಯಾಗ

## ಸ್ವಾಮಿ ಸೋಮನಾಥಾನಂದ

ಸ್ವಾಮಿ ಸೋಮನಾಥಾನಂದ ಅವರು ಭಗವಾನ್ ಶ್ರೀರಾಮಕೃಷ್ಣ ಪರಮಹಂಸರ ಪಂಥಕ್ಕೆ ಸೇರಿ, ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ತಪೋನಿರತರಾಗಿದ್ದಾರೆ. ಕನ್ನಡ, ಸಂಸ್ಕೃತ, ಇಂಗ್ಲಿಷ್ ಮತ್ತು ಬಂಗಾಳಿ ಭಾಷೆಗಳನ್ನು ಚೆನ್ನಾಗಿ ಬಲ್ಲರು. ಕನ್ನಡದಲ್ಲಿ ನಿರರ್ಗಳವಾಗಿ ಬರೆಯಬಲ್ಲ ಸಾಮರ್ಥ್ಯವನ್ನು ಸಂಪಾದಿಸಿದ್ದಾರೆ. ಭರತಖಂಡವನ್ನೆಲ್ಲ ಸುತ್ತಿ ಅಪಾರವಾದ ಅನುಭವವನ್ನು ಪಡೆದಿದ್ದಾರೆ. ಭಗವದುಪಾಸನೆಯ ಜೊತೆಗೆ ಸಾಹಿತ್ಯ ವ್ಯವಸಾಯದಲ್ಲಿಯೂ ಮುಳುಗಿ, ಅದನ್ನೇ ಯೋಗವೆಂದು ತಿಳಿದು ಅದರಲ್ಲಿ ತಲ್ಲೀನರಾಗಿದ್ದಾರೆ. ಶ್ರೀರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದರ ಸಂಬಂಧವಾದ ಸಾಹಿತ್ಯವನ್ನೆಲ್ಲ ಕನ್ನಡಕ್ಕೆ ಪರಿವರ್ತಿಸಲು ಪಣತೊಟ್ಟು, ಈಗಾಗಲೇ ಬಹು ದೂರ ಮುಂದುವರಿದು, ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

'ದೇವಪ್ರಯಾಗ' ಎಂಬ ಈ ಭಾಗವನ್ನು ಅವರ ಪ್ರವಾಸ ಕಥೆಯಾದ 'ಹೈಮಾಚಲ ಸಾನ್ನಿಧ್ಯದಲ್ಲಿ' ಎಂಬ ಗ್ರಂಥದಿಂದ ಆರಿಸಿಕೊಂಡಿದೆ.

ನಾಳೆ ಅಂದರೆ ೧೯೫೪ ಮೇ ೯ನೇ ತಾರೀಖು ಭಾನುವಾರ ಹರಿದ್ವಾರವನ್ನು ಬಿಡಬೇಕು. ಬಿಡುವುದಕ್ಕೆ ಮುಂಚೆ ನಮಗೆ ಬೇಕಾದ ಚಿಲ್ಲರೆ ಪಲ್ಲರೆ ಸಾಮಾನನ್ನು ಕೊಳ್ಳಲು ಅಂಗಡಿಗೆ ಹೋದೆವು. ದಾರಿಯಲ್ಲಿ ನಡೆಯಬೇಕಾದರೆ ಎಲ್ಲರಿಗೂ ಒಂದೊಂದು ಕೋಲು ಬೇಕು. ಕೋಲಿನ ಅಡಿಗೆ ಅದು ಸವೆಯದಂತೆ ಒಂದು ಕಬ್ಬಿಣದ ಪಟ್ಟಿಯನ್ನು ಸಿಕ್ಕಿಸಿರಬೇಕು. ಕೋಲಿನ ಬೆಲೆ ಬಹಳ ಕಡಿಮೆಯೆಂದೇ ಹೇಳಬಹುದು. ಹತ್ತಿರ ಇರುವ ಬಿದಿರುಮೆಳೆಯಿಂದ ಬರುವುದು. ಒಂದೊಂದು ಕೋಲಿಗೆ ೯ ಆಣೆ. ಅದಕ್ಕೆ ಹಿಡಿ ಹಾಕಿಕೊಡುವುದಕ್ಕೆ ಐದಾಣೆ ಕೊಟ್ಟೆವು. ಆ ಕೋಲು ಸುಮಾರು ನಮ್ಮ ಎತ್ತರದಷ್ಟೇ ಇತ್ತು. ಅಷ್ಟು ಭಾರವೂ ಇರಲಿಲ್ಲ. ಅದೇ ನಮ್ಮ ಪ್ರವಾಸದಲ್ಲೆಲ್ಲ ಒಂದು ತಿಂಗಳು ನಮ್ಮ ಜೀವನದ ಅತಿ ನಿಕಟ ಬಂಧುವಾಗಬೇಕಾಯಿತು. ಅದರ ಸಹಾಯದಿಂದ ಎಷ್ಟು ಕಣಿವೆ ಇಳಿಯಬೇಕೋ, ದಿಣ್ಣೆ ಏರಬೇಕೋ; ನಡೆದು ನಡೆದು ಸಾಕಾದಾಗ ನಮ್ಮ ಎಷ್ಟು ಭಾರ ಅದರ ಮೇಲೆ ಬಿಡಬೇಕೋ ಗೊತ್ತಿಲ್ಲ. ನಾವು ತೆಗೆದುಕೊಂಡು ಹೋದವುಗಳಲ್ಲಿ ಕೆಲವು ಊಟದ

ಸಾಮಾನು, ಅದಕ್ಕಿಂತ ಬೆಲೆಬಾಳುವ ಬಟ್ಟೆ ಬರೆ, ಮತ್ತು ದುಡ್ಡು ಇದ್ದುವು. ಆದರೆ ಇವೆಲ್ಲಕ್ಕಿಂತ ಹೆಚ್ಚು ನಿಕಟವಾದುದು ಆ ದೊಣ್ಣೆ. ಪ್ರತಿಯೊಬ್ಬರೂ ಒಂದೊಂದು ದೊಣ್ಣೆಯನ್ನು ಆರಿಸಿಕೊಂಡೆವು. ಅನಂತರ ಮಳೆ ಬಂದರೆ ಹಾಸಿಗೆ ನೆನೆಯದಿರಲಿ ಎಂದು ಒಂದು ರಬ್ಬರ್ ಷೀಟನ್ನು ಕೊಂಡೆವು. ಕೆಲವರು ಕಾಲಿಗೆ ಹಾಕುವ ಕ್ಯಾನ್ವಾಸ್ ಷೂಗಳು ಹಳೆಯದಾಗಿದ್ದುದರಿಂದ ಹೊಸ ದೊಂದು ಜೊತೆಯನ್ನು ತೆಗೆದುಕೊಂಡು ರಿಸರ್ವ್‌ನಲ್ಲಿ ಇಟ್ಟರು. ಹೆತ್ತುವಾಗ ಮಾತ್ರ ನಾವು ಷೂಗಳನ್ನು ಹಾಕಿಕೊಂಡರೆ ಒಂದು ದಿನ ಎರಡು ಮೂರು ಮೈಲಿ ನಡೆದಮೇಲೆ ಕಾಲು ಕಿತ್ತು ಗಾಯವಾಗುವುದು; ಅನಂತರ ಅದನ್ನು ಹಾಕಿ ಕೊಳ್ಳಲು ಆಗುವುದಿಲ್ಲ. ಅದು ನಮ್ಮನ್ನು ಹೊತ್ತುಕೊಳ್ಳುವ ಬದಲು ನಾವು ಅದನ್ನು ಹೊತ್ತುಕೊಂಡು ಹೋಗಬೇಕಾಗುವುದು. ಅದಕ್ಕೇ ನಾವು ಮೈಸೂರಿ ನಲ್ಲಿ ಇರುವಾಗ ಸ್ವಲ್ಪ ಸ್ವಲ್ಪ ನಡೆದು ಅಭ್ಯಾಸಮಾಡಿಕೊಂಡಿದ್ದೆವು. ಬೆಳಿಗ್ಗೆ ನಡೆಯುವುದಕ್ಕೆ ಮುಂಚೆ ಏನನ್ನಾದರೂ ತಿಂದು ನಡೆಯಿರಿ, ಬರೀ ಹೊಟ್ಟೆ ಯಲ್ಲಿ ಹೋಗಬೇಡಿ ಎಂದು ನಮಗೆ ಎಚ್ಚರಿಕೆ ಕೊಟ್ಟದ್ದರು. ಅವರ ಸಲಹೆಯ ಮೇರೆಗೆ ಕೆಲವು ಬಿಸ್ಕೆಟ್ ಪ್ಯಾಕೆಟ್ ತೆಗೆದುಕೊಂಡೆವು. ದಾರಿಯಲ್ಲಿ ಬಾಯಾರಿಕೆ ಆದರೆ ದಾಹಶಮನಕ್ಕೆಂದು ಪೆಪ್ಪರ್‌ಮೆಂಟನ್ನು ಕೊಂಡೆವು. ನಾವೇ ದಾರಿಯ ಪ್ರಯಾಣಕ್ಕೆಂದು ಮೈಸೂರಿನಿಂದಲೇ ಕೆಲವು ಪದಾರ್ಥಗಳನ್ನು ತೆಗೆದು ಕೊಂಡು ಬಂದಿದ್ದೆವು. ಅದರಲ್ಲಿ ಹಪ್ಪಳ, ಉಪ್ಪಿನಕಾಯಿ, ಮೆಣಸಿನಪುಡಿ, ಚಟ್ನಿ ಪುಡಿ, ಮೆಂತ್ಯದಹಿಟ್ಟು, ಸ್ವಲ್ಪ ಅವಲಕ್ಕಿ ಇವೆಲ್ಲ ಇದ್ದವು. ಇವೆಲ್ಲಕ್ಕಿಂತ ಹೆಚ್ಚಾಗಿ ಹುಣಸೇಹಣ್ಣನ್ನು ತೆಗೆದುಕೊಂಡು ಬಂದಿದ್ದೆವು. ಈ ಊರಿನಕಡೆ ಜನರಿಗೆ ಹುಣಸೇಹಣ್ಣು ತಿನ್ನುವ ಅಭ್ಯಾಸವಿಲ್ಲ. ಅಂಗಡಿಯಲ್ಲಿ ದೊರಕುವು ದಿಲ್ಲ. ನಮ್ಮ ಜನರಿಗಂತೂ ಹುಣಸೇಹಣ್ಣು ಇಲ್ಲದೇ ಇದ್ದರೆ ಅಡಿಗೆಯೇ ರುಚಿಸುವಂತೆ ಇರಲಿಲ್ಲ. ಅದಕ್ಕಾಗಿ ಏಳೆಂಟು ಜನರಿಗೆ ಒಂದು ತಿಂಗಳಿಗೆ ಬೇಕಾಗುವ ಹುಣಸೇಹಣ್ಣು ಸುಮಾರು ಐದಾರು ವೀಸೆಗಳಿತ್ತು. ಎಲ್ಲರ ಹತ್ತಿ ರವೂ ಒಂದೊಂದು ಟಾರ್ಚ್‌ಲೈಟು ಇತ್ತು. ಅದಕ್ಕೆ ದಾರಿಯಲ್ಲಿ ಬೇಕಾಗುವ ಎಕ್ಸ್ಟ್ರಾ ಸೆಲ್ಲುಗಳನ್ನು ಕೊಂಡೆವು. ಅನಂತರ ಸೇವಾಶ್ರಮಕ್ಕೆ ಬಂದೆವು.

ನಾವು ಇದ್ದದ್ದು ಆರು ಜನ. ಅದರಲ್ಲಿ ಅನೇಕರಿಗೆ ಅಡಿಗೆಮಾಡಿ ಅಭ್ಯಾಸವಿರಲಿಲ್ಲ. ನಡೆದು ಸಾಕಾದಾಗ ಅಡಿಗೆಗೆ ಶುರು ಮಾಡಬೇಕಾದರೆ ಅದೊಂದು ದೊಡ್ಡ ಸಾಹಸವೇ ಆಗುವುದು. ಮೊದಲೆ ಬಿಸಿಲಲ್ಲಿ ನಡೆದು ಕಾಲು ಸೋತಿರುವುದು. ಇದಾದಮೇಲೆ ಒಲೆಯ ಮುಂದೆ ಕುಳಿತು ಊದು ವುದು, ಇದರಿಂದ ಹೊಗೆ ಕಣ್ಣು ಮೂಗು ಬಾಯಿಗೆಲ್ಲ ಹೋದಾಗ, ನಮ್ಮ

ಸಹನಶಕ್ತಿ ಕೆಲವುವೇಳೆ ಮೇರೆ ಮೀರಿಹೋಗಿ, ಹತ್ತಿರಿದ್ದವರ ಮೇಲೆ ಏನಾದರೂ ನೆಪ ತೆಗೆದುಕೊಂಡು ರೇಗುವುದು ರೂಢಿ. ಅಲ್ಲಿ ಅಡಿಗೆ ಮಾಡಬೇಕಾದರೆ ಮೊದಲು ನೀರನ್ನು ತೆಗೆದುಕೊಂಡು ಬರಬೇಕು. ಕೆಲವು ವೇಳೆ ನೀರು ತರಬೇಕಾದರೆ ಅರ್ಧ ಫರ್ಲಾಂಗ್ ಕೆಳಗೆ ಇಳಿಯಬೇಕು. ಇವೆಲ್ಲಕ್ಕಿಂತ ಕಷ್ಟ ಎಂದರೆ ಅಡಿಗೆ ಮಾಡಿದಮೇಲೆ ಪಾತ್ರೆ ತೊಳೆಯುವುದು. ದಾರಿಯಲ್ಲಿ ಸಿಕ್ಕುವ ನೀರು ಕೈಗೆ ತಾಕಿದರೆ ಕೊರೆದು ಹೋಗುವುದು. ಆ ನೀರಿನಿಂದ ಪಾತ್ರೆ ತೊಳೆಯಬೇಕಾದರೆ ಅದೊಂದು ಹಿಂಸೆಯೇ ಸರಿ. ಪಾತ್ರೆ ತೊಳೆಯುವುದನ್ನು ವಿಳಂಬ ಮಾಡಲಾಗುವುದಿಲ್ಲ. ರಾತ್ರಿಯೇ ಪಾತ್ರೆ ಮುಂತಾದುವನ್ನೆಲ್ಲ ತೊಳೆದು ಗಂಟು ಮೂಟೆ ಕಟ್ಟಿ ಇಟ್ಟರೆ ಮಾತ್ರ ಬೆಳಗ್ಗೆ ಸೂರ್ಯೋದಯಕ್ಕೆ ಮುಂಚೆ ಹೋಗಲು ಸಾಧ್ಯ. ಇವನ್ನೆಲ್ಲ ಗಮನಿಸಿ ಒಬ್ಬ ಅಡಿಗೆಯವನನ್ನು ಕರೆದುಕೊಂಡು ಹೋಗಲು ನಿರ್ಧರಿಸಿದೆ. ಆದರೆ ಜೊತೆಗೆ ಬಂದವರು ಬಡಪೆಟ್ಟಿಗೆ ಒಪ್ಪಲೊಲ್ಲರು. “ಆರು ಜನ ಇರುವಾಗ ಒಬ್ಬೊಬ್ಬರು ಒಂದೊಂದು ಕೆಲಸ ಮಾಡಿದರೆ ತೀರಿತು. ಅದಕ್ಕೆ ಅಡಿಗೆಯವನು ಬೇರೆ ಏತಕ್ಕೆ ?” ಎಂದು ಆಕ್ಷೇಪಣೆ ಮಾಡಿದರು. ಅವರ ಆಕ್ಷೇಪಣೆಗೆ ಕಿವಿಗೊಡದೆ “ಆರು ಜನ ಇರುವ ಪಾರ್ಟಿಗೆ ಒಬ್ಬ ಅಡಿಗೆಯವನು ಹೆಚ್ಚು ದುಬಾರಿಯಲ್ಲ. ದಾರಿಯಲ್ಲಿ ಅವನೊಬ್ಬನಿದ್ದರೆ ಎಷ್ಟೋ ಕಷ್ಟ ಕಡಮೆಯಾಗುವುದು. ಅದು ದಾರಿಯಲ್ಲಿ ನಡೆದ ಮೇಲೆ ವೇದ್ಯವಾಗುವುದು” ಎಂದೆ. ಹರಿದ್ವಾರದಲ್ಲಿ ಒಬ್ಬ ಅಡಿಗೆಯವನನ್ನು ಗೊತ್ತುಮಾಡಿದೆವು. ಆತ ತನ್ನ ಜೀವಮಾನದಲ್ಲಿ ಆಗಲೆ ೨೫-೩೦ ವೇಳೆ ಕೇದಾರ ಬದರಿಗೆ ಹೋಗಿ ಬಂದಿರುವನು. ಅವನು ತನಗೆ ಊಟ ಕೊಟ್ಟು ಅರವತ್ತು ರೂಪಾಯಿ ಕೊಡಬೇಕು ಎಂದ. ಆಗಲಿ ಎಂದೆವು. ಏನೇನು ಅಡಿಗೆ ಮಾಡುವುದಕ್ಕೆ ಬರುತ್ತದೆ ಎಂದಾಗ ಚಪಾತಿ, ಪೂರಿ, ಸಾಗು ಮುಂತಾದುವು ಬರುತ್ತದೆ ಎಂದ. ನಮಗೆ ಅದೆಲ್ಲ ಬೇಕಾಗಿರಲಿಲ್ಲ; ಬರೀ ಅನ್ನ ಬೇಯಿಸಿ ಸಾರೊ ಹುಳಿಯೊ ಮಾಡಿಕೊಟ್ಟರೆ ಸಾಕೆಂದು ಹೇಳಿದೆ. ಹೇಗೆ ಮಾಡುವುದೆಂಬುದನ್ನು ಹೇಳಿಕೊಟ್ಟರೆ ಮಾಡುತ್ತೇನೆ ಎಂದ. ಅಂದು ರಾತ್ರಿಯೇ ಸಾವಿರುವ ಕಡೆ ಮಲಗಲು ಬಂದ. ಜೊತೆಯಲ್ಲಿ ಒಂದು ಗಂಟನ್ನೂ ತಂದ. ಅದೋ ಒಂದೆರಡು ಸೇರುತೂಕ ಕೂಡ ಇರಲಿಲ್ಲ. ಅದರಲ್ಲಿ ಆತ ಒಂದು ತಿಂಗಳಿಗೆ ಬೇಕಾಗುವಷ್ಟು ಬಟ್ಟೆ ಬರೆ ಹಾಸಿಗೆ ಎಲ್ಲ ತೆಗೆದುಕೊಂಡು ಬಂದಿರುವೆನು ಎಂದ! ಆತ ಜಾತಿಯಲ್ಲಿ ಬ್ರಾಹ್ಮಣ ಎಂದ. ಅವನ ವೇಷ ಭೂಷಣಗಳನ್ನು ನೋಡಿದರೆ ಬ್ರಾಹ್ಮಣ್ಯದ ಯಾವ ಚಿಹ್ನೆಯೂ ಕಾಣುತ್ತಿರಲಿಲ್ಲ. ಬಹುಶಃ ಅವನ ಕೋಟಿನ ಒಳಗಡೆ

ದೊಡ್ಡದೊಂದು ಜನಿವಾರ ಇದ್ದಿರಬಹುದು! ಅದೂ ಕೂಡ ಗಾಯತ್ರಿಮಂತ್ರ ಕೇಳಿ, ನೀರಿನ ಸಂಗಮಾಡಿ, ಹಲವು ತಿಂಗಳಾಗಿರಬೇಕು. ಆತ ತೊಟ್ಟ ಒಂದು ಅಂಗಿ ಸುಮಾರು ಎಂಟು ಹತ್ತು ತ್ಯಾಪೆಯದು. ಆ ಕೋಟನ್ನು ಮೊದಲು ಯಾವ ಬಟ್ಟೆಯಿಂದ ಮಾಡಿರಬಹುದು ಎಂಬುದನ್ನು ಹೇಳುವುದೇ ಜಟಿಲಪ್ರಶ್ನೆಯಾಗಿತ್ತು. ಆತ ಉಟ್ಟ ಪಂಚೆಯೋ, ಫ್ಯಾಕ್ಟರಿಯಲ್ಲಿ ಕೆಲಸ ಮಾಡುವ ಜನರು ಹಾಕಿಕೊಳ್ಳುವ ಸ್ಪೆಷಲ್ ಉಡುಪನ್ನು ನೆನಪಿಗೆ ತರುತ್ತಿತ್ತು. ಈತ ಹತ್ತಿರ ಬಂದರೆ ಮೂಗನ್ನು ಮುಚ್ಚಿಕೊಳ್ಳಬೇಕಾಗಿತ್ತು. ಈತನೇ ನಮ್ಮ ಒಂದು ತಿಂಗಳ friend, philosopher, guide; ಜೊತೆಗೆ Lord Kitchner ಬೇರೆ. ಅವನಿಗೆ ಪ್ರತಿದಿನ ಸ್ನಾನಮಾಡಿ ಮಡಿಬಟ್ಟೆ ಉಟ್ಟು ಕೊಂಡು ಅಡಿಗೆ ಮಾಡು ಎಂದು ಹೇಳಿದೆವು. ಅದಕ್ಕೆ ಆತ ಒಪ್ಪಿಕೊಂಡ. ಸ್ನಾನವನ್ನೇನೋ ದಾರಿಯಲ್ಲಿ ಸಿಕ್ಕುವ ನೀರಿನಲ್ಲಿ ಆತ ಮಾಡಬಹುದು. ಆದರೆ ಮಡಿಬಟ್ಟೆ ಉಟ್ಟುಕೊಳ್ಳಬೇಕಾದರೆ ಅವನ ಹತ್ತಿರ ಬೇರೆ ಬಟ್ಟೆಯೇ ಇರಲಿಲ್ಲ. ನಾವೆ ಆತನಿಗೆ ಎರಡು ಪಂಚೆ ತೆಗೆದುಕೊಟ್ಟು ಇದನ್ನು ಅಡಿಗೆ ಮಾಡುವಾಗ ಮಾತ್ರ ಉಡಬೇಕು ಎಂದೆವು.

ಒಂಬತ್ತನೇ ತಾರೀಖು ಭಾನುವಾರ ಬೆಳಗ್ಗೆ ಅಷ್ಟುಹೊತ್ತಿಗೆ ಎದ್ದೆವು. ಸ್ನಾನಾದಿಗಳನ್ನು ಪೂರೈಸಿಕೊಂಡು ಒಂಬತ್ತು ಗಂಟೆಗೆ ಹೊರಡಲು ಅನು ವಾದೆವು. ಹೊರಡುವುದಕ್ಕೆ ಮುಂಚೆ ಎಲ್ಲರೂ ಆಶ್ರಮದ ದೇವರ ಮನೆಗೆ ಹೋಗಿ ನಮಸ್ಕಾರಮಾಡಿದೆವು. ನಾನಂತೂ ಪ್ರಾರ್ಥಿಸುವಾಗ, ಮಧ್ಯೆ ಮಧ್ಯೆ ಭಿನ್ನಾಭಿಪ್ರಾಯ ಮನಸ್ತಾಪಗಳು ಬರದಂತೆ ಅನುಗ್ರಹಿಸು ಎಂದು ಬೇಡಿಕೊಂಡೆ. ಇತರರೂ ಬಹುಶಃ ಹಾಗೆಯೇ ಪ್ರಾರ್ಥಿಸಿರಬೇಕು. ಏಕೆಂದರೆ, ದಾರಿಯಲ್ಲಿ ನಾವು ಹೋಗುವಾಗ ವ್ಯವಹರಿಸಿದ ರೀತಿಯಿಂದ ಇದನ್ನು ಊಹಿಸಿದೆ. ಹರಿದ್ವಾರದ ಬಸ್ಸಿನ ನಿಲ್ದಾಣಕ್ಕೆ ಹೋಗಿ ಅಲ್ಲಿಂದ ಹೃಷೀ ಕೇಶಕ್ಕೆ ಹೊರಟೆವು. ಹರಿದ್ವಾರದಿಂದ ಹೃಷೀಕೇಶಕ್ಕೆ ಹದಿನೈದು ಮೈಲಿಗಳು. ರಸ್ತೆ ಚೆನ್ನಾಗಿದೆ. ಟಾರು ಹಾಕಿರುವರು. ಒಂದೇ ಸಮನಾಗಿರುವ ರಸ್ತೆ. ಮಧ್ಯೆ ಸ್ವಲ್ಪ ಹೊತ್ತು ನಿಂತು 45 ನಿಮಿಷದ ಹೊತ್ತಿಗೆ ನಮ್ಮ ಅಡಿಗೆಯವ ನೊಂದಿಗೆ ಬಸ್ಸಿನ ನಿಲ್ದಾಣಕ್ಕೆ ತಲಪಿದೆವು. ನಮ್ಮ ಸಾಮಾನನ್ನು ಹೊರುವುದಕ್ಕೆ ಇನ್ನೂ ಕೂಲಿಯವರನ್ನು ಗೊತ್ತುಮಾಡಿರಲಿಲ್ಲ. ಬಸ್ಸಿನ ಆಫೀಸಿನಲ್ಲಿ ಕುಳಿ ತಾಗ ಒಬ್ಬ ಕೂಲಿಯ ಏಜೆಂಟ್ ಬಂದು ನಿಮಗೆ ಕೂಲಿಯ ಆವಶ್ಯಕತೆ ಇದೆಯೆ ಎಂದು ಕೇಳಿದ. ನಾವು ಬಸ್ಸು ನಿಂತು ನಡೆಯುವ ಸ್ಥಳದಿಂದ ಕೂಲಿಯನ್ನು ಗೊತ್ತುಮಾಡಿಕೊಳ್ಳುತ್ತೇವೆ; ಈಗಲೇ ಬೇಡ ಎಂದೆವು.

ಅವರು, "ನಮ್ಮ ಕೂಲಿಗಳು ಇಲ್ಲಿಂದಲೇ ನೀವು ಹೊರಡುವ ಬಸ್ಸಿನಲ್ಲಿ ಜೊತೆಯಲ್ಲೇ ತಾವೇ ಚಾರ್ಜುಕೊಟ್ಟು ಬರುವರು. ದಾರಿಯಲ್ಲಿ ನೀವು ಎರಡು ಮೂರು ಕಡೆ ಬಸ್ಸು ಬದಲಾಯಿಸಬೇಕು. ಒಂದು ಕಡೆ ಮೂರು ಮೈಲಿ ನಡೆಯಬೇಕು, ಅದನ್ನೆಲ್ಲ ನಮ್ಮ ಕೂಲಿಗಳೆ ಮಾಡುತ್ತಾರೆ. ಅದಕ್ಕೆ ಹೆಚ್ಚಿಗೆ ಏನೂ ಕೊಡಬೇಕಾಗಿಲ್ಲ" ಎಂದರು. ಏಜೆಂಟನ ಮೂಲಕ ಲೈಸೆನ್ಸ್ ಕೂಲಿ ಮಾಡಿಕೊಳ್ಳುವುದು ಮೇಲು. ಆ ಕೂಲಿಗಳ ವಿಳಾಸ ಮನೆ ಮಠ ಎಲ್ಲಾ ಅವನ ಹತ್ತಿರ ಇರುವುದು. ಕೂಲಿಯವನು ಮೋಸಮಾಡಿದರೆ ಅವನಿಗೆ ದೂರು ಕೊಟ್ಟರೆ ಅವನು ಸರಿಪಡಿಸುವನು. ಅದಕ್ಕೆ ನಾವು ಒಪ್ಪಿದೆವು. ಒಂದು ಕಾಂಟ್ರಾಕ್ಟ್ ಸ್ಲಿಪ್ಪಿನಲ್ಲಿ ರುಜುಮಾಡಿ ಅವರಿಗೆ ಅಡ್ವಾನ್ಸ್ ಕೊಟ್ಟೆವು. ಒಬ್ಬೊಬ್ಬ ಕೂಲಿಗೆ ಎಪ್ಪತ್ತು ರೂಪಾಯಿ. ಕೇದಾರನಾಥ ಬದರಿನಾರಾಯಣಕ್ಕೆ ಹೋಗಿ ನಾವು ಬಸ್ಸಿನಲ್ಲಿ ಕೂಡುವವರೆಗೆ ಅವರು ನಮ್ಮ ಸಾಮಾನನ್ನು ಹೊತ್ತುಕೊಂಡು ಬರಬೇಕು. ಹೀಗೆ ಮೂರು ಜನ ಕೂಲಿಗಳನ್ನು ಮಾಡಿಕೊಂಡೆವು. ಪ್ರತಿಯೊಬ್ಬರೂ ಒಂದೊಂದು ರೈಲ್ವೆ ಮಣ ಹೊರುವರು. ಅಂದರೆ ನಮ್ಮ ಕಡೆಯ ನಾಲ್ಕು ಮಣ ಆಯಿತು. ಅವರಲ್ಲಿ ಹಿರಿಯನ ಹೆಸರು ರಾಮಸಿಂಗ್, ಎರಡನೆಯವನ ಹೆಸರು ಬಹದ್ದೂರ್, ಮೂರನೆಯವನು ಕುಂಡ್ ಎಂದು. ಎಲ್ಲಾ ಹಿಮಾಲಯ ಪ್ರಾಂತದಲ್ಲಿ ವಾಸಿಸುವವರು. ಬಹಳ ಕಷ್ಟಸಹಿಷ್ಣುಗಳು. ಎಲ್ಲರಿಗೂ ಸ್ವಲ್ಪ ಭೂಮಿ ಇದೆ. ಬೆಟ್ಟ ಕಡಿದು ಮಾಡಿದ ಭೂಮಿಯಲ್ಲಿ ಬೆಳೆ ಬೆಳೆಯುವುದು ಬಹಳ ಅಲ್ಪ. ವಿಸ್ತಾರವಾಗುತ್ತಿರುವ ಸಂಸಾರಕ್ಕೆ ತಕ್ಕಂತೆ ಜಮೀನು ವಿಸ್ತಾರವಾಗಲಾರದು. ಹೊಟ್ಟೆಪಾಡಿಗಾಗಿ, ಯಾತ್ರೆಯಕಾಲ ಪ್ರಾರಂಭವಾದೊಡನೆ ಹರಿದ್ವಾರ ಹೃಷೀಕೇಶಗಳಲ್ಲಿ ಕೂಲಿಕೆಲಸಕ್ಕೆ ನೂಕುನುಗ್ಗಾಟ. ನಾವು ಹರಿದ್ವಾರದ ರೈಲ್ವೆ ಸ್ಟೇಷನ್ನಿಗೆ ಬಂದೊಡನೆಯೆ ಕೆಲವು ಕೂಲಿಗಳು "ನಾವು ಕೇದಾರನಾಥ ಬದರಿಗೆ ಬರುತ್ತೇವೆ, ಕರೆದುಕೊಂಡು ಹೋಗಿ" ಎಂದು ಮುತ್ತಿಕೊಂಡರು. ಆ ಕೂಲಿಗಳಿಂದ ಪಾರಾಗುವುದೇ ಒಂದು ಕಷ್ಟ. ನಮ್ಮ ಕೂಲಿಗಳಲ್ಲಿ ರಾಮಸಿಂಗನೇ ಸ್ವಲ್ಪ ಬುದ್ಧಿವಂತ. ಯಾರಿಗೂ ಓದಲು ಬರೆಯಲು ಬಾರದು. ಕೂಡುವುದು ಕಳೆಯುವುದು ಕೂಡ ಚೆನ್ನಾಗಿಬಾರದು. ಆದರೂ ಜನ ಪ್ರಾಮಾಣಿಕರು, ಕಷ್ಟಸಹಿಷ್ಣುಗಳು. ಯಾವ ಹೊತ್ತಿನಲ್ಲಿ ಏನು ಕೆಲಸ ಹೇಳಿದರೆ ತಕ್ಷಣ ಮಾಡುವುದಕ್ಕೆ ಸಿದ್ಧರಾಗಿರುತ್ತಿದ್ದರು. ಸುಮಾರು ಒಂದು ತಿಂಗಳು ಅವರೊಡನೆ ಬೆಳೆದ ಬಾಂಧವ್ಯ ಎಷ್ಟು ನಿಕಟವಾಯಿತೆಂದರೆ, ಕೊನೆಯಲ್ಲಿ ನಾವು ಹೊರಡುವಾಗ ಅವರು ಬಸ್ಸು ಹೋಗುವವರೆಗೆ ನಿಂತು ಹನಿಗಣ್ಣಿನಿಂದ ಹಿಂತಿರುಗಿ

ಹೋದರು. ಅವರ ಉಡಿಗೆ ತೊಡಿಗೆ ನಮ್ಮ ಅಡಿಗೆಯವನಿಗಿಂತ ಒಂದು ಕೈ ಕೆಳಗೇ ಇತ್ತು. ಅಶುಚಿ, ಅನೈರ್ಮಲ್ಯದಲ್ಲಂತೂ ಅವನನ್ನೇ ಮೀರಿಸುತ್ತಿದ್ದರು. ಆದರೆ ಆ ಕೊಳೆಯ ಬಟ್ಟೆ ಕೊಳಕು ದೇಹದೊಳಗಡೆ ಹುದುಗಿರುವ ಹೃದಯ ನಯನಾಜೂಕಿನಿಂದ ಮೆರೆಯುವ ಅನೇಕರಿಗಿಂತ ಸುಸಂಸ್ಕೃತವಾಗಿತ್ತು. ಮೊದಲು ನಾವು ಅವರನ್ನು ಸ್ವಲ್ಪ ಅನುಮಾನ ಅಸಡ್ಡೆಯಿಂದ ಸ್ವೀಕರಿಸಿದರೂ, ದಿನಕಳೆದಂತೆ ಅವರ ಶೀಲ ನಮ್ಮನ್ನು ಮುಗ್ಧರನ್ನಾಗಿಮಾಡಿತು.

ಬಸ್ಸು ಹನ್ನೆರಡು ಗಂಟೆಗೆ ಹೊರಟಿತು. ಬಸ್ಸಿನಲ್ಲಿದ್ದವರೆಲ್ಲ "ಜೈ ಕೇದಾರನಾಥ್‌ಕಿ, ಜೈ ಬದರೀವಿಶಾಲ್‌ಕಿ" ಎಂದರು. ನಮ್ಮ ಬಸ್ಸಿನಲ್ಲಿ ಸುಮಾರು ಹದಿನಾರು ಜನರಿದ್ದರು. ಅವರಲ್ಲಿ ನಮ್ಮ ಹಿಂದೆ ಕುಳಿತ ದಂಪತಿಗಳು ದಕ್ಷಿಣದೇಶದ ಯಾತ್ರೆಯನ್ನೆಲ್ಲ ಪೂರೈಸಿ ಈ ವೇಳೆ ಬದರೀನಾಥಕ್ಕೆ ಎಂದು ಹೊರಟ ತೆಲುಗರು. ಇಬ್ಬರು ಮೂರು ಜನ ತಮಿಳರಿದ್ದರು. ಕೆಲವರು ಬಂಗಾಳಿ ಮಾತನಾಡುವವರಿದ್ದರು; ಹಿಂದೀ ಮಾತನಾಡುವವರಿದ್ದರು. ಒಬ್ಬರೊ ಇಬ್ಬರೊ ಮಲಯಾಳದವರೂ ಇದ್ದರು. ಒಂದು ಸಂಕ್ಷಿಪ್ತ ಭರತ ಖಂಡವೇ ಹೊರಟಂತೆ ಇತ್ತು ಬಸ್ಸು. ಅದರಲ್ಲಿ ಎಲ್ಲಾ ದೇಶಭಾಷೆಗಳೂ ಮಿಶ್ರವಾಗಿತ್ತು. ಬಸ್ಸು ಹೊರಟಮೇಲೆ ಇವರು ಮಾತನಾಡುವುದನ್ನು ಕೇಳುವುದೊಂದು ಚೆಂದ. ಒಬ್ಬರು ಕನ್ನಡ, ಒಬ್ಬರು ತೆಲುಗು, ಒಬ್ಬರು ತಮಿಳು, ಬಂಗಾಳಿ, ಹಿಂದಿ ಮಾತನಾಡುವರು. ಮರದಮೇಲೆ ಹಲವು ಹಕ್ಕಿಗಳು ತಮ್ಮತಮ್ಮದೇ ಧ್ವನಿ ಮಾಡುತ್ತಿರುವಂತೆ ಕಂಡಿತು. ಬಸ್ಸು ಹೃಷೀಕೇಶದಿಂದ ಒಂದು ಮೈಲಿ ಹೋದುದೆ ತಡ, ಆಗಲೆ ಒಂದುಕಡೆ ನಿಂತಿತು. ಎಲ್ಲರೂ ಕಾಲರಾ ವ್ಯಾಕ್ಸಿನೇಷನ್ ಮಾಡಿಸಿಕೊಂಡಿರಬೇಕು. ಅದರ ಸರ್ಟಿಫಿಕೇಟನ್ನು ತೋರಿಸಿದರೆ ಮುಂದೆ ಹೋಗಲು ಬಿಡುವುದು. ಇಲ್ಲದೇ ಇದ್ದರೆ ಅಲ್ಲೆ ಕಾಲರಾ ವ್ಯಾಕ್ಸಿನೇಷನ್ ಮಾಡಿಸಿಕೊಂಡು ಸರ್ಟಿಫಿಕೇಟನ್ನು ತೆಗೆದುಕೊಳ್ಳಬೇಕು. ನಮ್ಮ ಗುಂಪಿನಲ್ಲಿರುವವರೆಲ್ಲ ಅವನ್ನು ತಮ್ಮ ಹತ್ತಿರವೇ ಇಟ್ಟುಕೊಂಡಿದ್ದರು. ಆದರೆ ನನ್ನ ಸರ್ಟಿಫಿಕೇಟ್ ಬಸ್ಸಿನ ಮೇಲಿರುವ ಹಾಸಿಗೆಯಲ್ಲಿ ಸೇರಿ ಹೋಗಿತ್ತು. ಅದಕ್ಕೆ ಒಂದು ರಬ್ಬರ್ ಶೀಟನ್ನು ಜೇರಿ ಬಿಗಿದಿದ್ದೆ. ಬಸ್ಸಿನಿಂದ ಇಳಿದು ಮೇಲಿರುವ ಒಂದು ರಬ್ಬರ್‌ಶೀಟ್ ಕಟ್ಟಿದ್ದ ಹಾಸಿಗೆಯನ್ನು ಕೆಳಗಿಳಿಸಿ ಬಿಚ್ಚಿ ನೋಡಿದಾಗ ಅದು ಬೇರೆ ಯಾರದೋ ಹಾಸಿಗೆ ಆಗಿತ್ತು. ಹಲವು ಹಾಸಿಗೆಗೆ ರಬ್ಬರ್‌ಶೀಟನ್ನು ಕಟ್ಟಿದ್ದರು. ಅದರಲ್ಲಿ ಯಾವುದು ನನ್ನದು ಎಂದು ಕಂಡುಹಿಡಿಯಬೇಕಾದರೆ ನಾನೆ ಮೇಲೆ ಹತ್ತಿ ನೋಡಬೇಕಾಗಿತ್ತು. ಈ ರಗಳೆಯೆಲ್ಲ ಏತಕ್ಕೆ ಎಂದು ಇನ್ನೊಂದು ಸಲ ವ್ಯಾಕ್ಸಿನೇಷನ್ ಮಾಡಿಸಿಕೊಳ್ಳಲು

ನಿಂತೆ. ನಮ್ಮ ಬಸ್ಸಿನ ಹಿಂದೆಯೇ ಇನ್ನೂ ನಾಲ್ಕಾರು ಬಸ್ಸುಗಳು ಬಂದು ನಿಂತವು. ಅವರೆಲ್ಲರೂ ವ್ಯಾಕ್ಸಿನೇಷನ್‌ಗೆ ನಿಂತರು. ದೊಡ್ಡದೊಂದು ಕ್ಯೂ ಆಯಿತು, ಸೂಜಿ ಚುಚ್ಚಿಸಿಕೊಳ್ಳುವುದಕ್ಕೆ. ವ್ಯಾಕ್ಸೀನೇಷನ್ ಕೊಡುವವರು ನಿಷ್ಣಾತರಾಗಿ ಬಿಟ್ಟಿರುವರು ಕಸಬಿನಲ್ಲಿ. ದೊಡ್ಡದೊಂದು ಸಿರಂಜಿನಲ್ಲಿ ವ್ಯಾಕ್ಸಿನೇಷನ್ ತುಂಬಿ ಹತ್ತು ಹದಿನೈದು ಜನರಿಗೆ ಎಂಟು ಹತ್ತು ನಿಮಿಷದಲ್ಲಿ ಪೂರೈಸುವರು. ಚುಚ್ಚುವಾಗ ಚುಚ್ಚಿಸಿಕೊಳ್ಳುವರು ಮನುಷ್ಯರೇ ದನಗಳೇ ಎಂಬ ಲಕ್ಷ್ಯಕೂಡ ಇರುವುದಿಲ್ಲ. ಕೈ ಒಂದು ಯಂತ್ರವಾಗಿಬಿಟ್ಟಿರುವುದು. ಪಾಪ ಅವರು ತಾನೇ ಮಾಡುವುದೇನು? ಒಂದು ದಿನಕ್ಕೆ ಸುಮಾರು ಏಳುನೂರು ಎಂಟುನೂರು ಯಾತ್ರಿಕರಿಗೆ ಒಂದೇ ಸಮನಾಗಿ ಚುಚ್ಚುತ್ತಿದ್ದರೆ ಯಾವ ಮನುಷ್ಯ ತಾನೆ ಯಂತ್ರವಾಗದೆ ಉಳಿದಾನು? ಅಂತೂ ಯಾತ್ರೆಗೆ ಮುಂಚೆ ಸಣ್ಣದೊಂದು ಕಿರುಕುಳವನ್ನು ಸಹಿಸಿಕೊಂಡು ಪುನಃ ಬಸ್ಸುಹತ್ತಿದೆ. ಈಗ ಡಬ್ಬಲ್ ಕಾಲರಾ ಪ್ರಿವೆನ್‌ಷನ್ ಆಯಿತು!

ಬಸ್ಸು ಗಂಗಾನದಿಯ ತೀರದಲ್ಲೆ ಹೋಗುವುದು. ಸುಮಾರು ಎರಡು ಮೂರು ಮೈಲಿ ಹೋದ ಮೇಲೆ ಏರು ಪ್ರಾರಂಭವಾಯಿತು. ಬೆಟ್ಟವನ್ನು ಕೊರೆದು ಅಲ್ಲಿ ರಸ್ತೆ ಮಾಡಿರುವರು. ರಸ್ತೆ ವಿಶಾಲವಾಗಿಲ್ಲ. ಸುಮಾರು ಹತ್ತು ಅಡಿ ಅಗಲವಿರಬಹುದು, ಅಷ್ಟೆ. ಅದೋ ಸುತ್ತಿ, ಸುತ್ತಿಕೊಂಡು ಕಂಬಳಿ ಹುಳುವಿನಂತೆ ತೆವಳುತ್ತ ಹೋಗಬೇಕು. ಬಸ್ಸಿನ ಎಡಗಡೆ ಕೈಗೆ ತಾಕುವಂತೆಯೆ ಬೆಟ್ಟ, ಬಲಗಡೆ ಗಂಗಾನದಿ. ಕೆಲವು ವೇಳೆ ನದಿ, ಬಸ್ಸಿನ ದಾರಿ ಸಮೀಪದಲ್ಲೇ ಹರಿಯುತ್ತಿರುವುದು. ಮತ್ತೆ ಕೆಲವು ವೇಳೆ ಅದು ಕಣಿವೆ ಯೊಳಗೆ ದೂರದಲ್ಲಿ ಭೋರ್ಗರೆದುಕೊಂಡು ಹೋಗುವುದು. ಅದು ಬಸ್ಸಿಗೆ ಒಂದು ಹಿನ್ನೆಲೆಯ ಸಂಗೀತದಂತೆ ಇರುವುದು. ನದಿಯ ವಕ್ಷದ ಮೇಲಂತೂ ನೂರಾರು ಪೈನ್ ಹಲಗೆಗಳು ಮೇಲಿನಿಂದ ತೇಲಿ ಬರುತ್ತಿರುತ್ತವೆ. ಕೆಲವು ವೇಳೆ ಬಸ್ಸು ಮೇಲೆ ಮೇಲೆ ಹೋದಾಗ ನದಿ ಕೆಳಗಿನ ಕಣಿವೆಯೊಳಗೆ ಹರಿಯುವುದು. ರಸ್ತೆ ಕೆಲವುವೇಳೆ ನದಿಗಿಂತ ೪೦೦, ೫೦೦ ಅಡಿಗಳ ಮೇಲೆ ಇರುತ್ತದೆ. ಆಗ ಗಂಗಾ ಮಹಾತಾಯಿ ದರ್ಶನ ಭೀಕರವಾಗಿ ಕಾಣುವುದು. ಭಕ್ತಿಯನ್ನು ಉದ್ರೇಕಿಸುವ ಬದಲು ಆ ಮಹಾತಾಯಿ ಕಣಿವೆಯೊಳಗೆ ಬಾಯಿ ತೆಗೆದುಕೊಂಡು ನುಂಗಲು ಸಿದ್ಧವಾಗಿರುವ ಮಹಾ ಅಜಗರದಂತೆ ಕಾಣುವಳು. ಬಸ್ಸು ಹೋಗುತ್ತಿರುವಾಗ ಏನಾದರೂ ಸ್ವಲ್ಪ ಅಚಾತುರ್ಯ ವಾದರೂ ಗಂಗಾಮಾತೆಗೆ ಸಮರ್ಪಣೆ ಬಸ್ಸು. ಹೀಗೆ ಆಗುವುದು ಅಪರೂಪ ವಲ್ಲವಂತೆ. ಕಳೆದ ವರ್ಷ ಒಂದು ಬಸ್ಸು ಉರುಳಿ ಯಾತ್ರಿಕರ ಸಮೇತ

ಗಂಗಾನದಿಯಲ್ಲಿ ಸಂಪೂರ್ಣ ಮಾಯವಾಯಿತೆಂದು ಪೇಪರಿನಲ್ಲಿ ಓದಿದ್ದ ನೆನಪೂ ಬಂತು. ಅಂತೂ ದೇವಪ್ರಯಾಗ ಸೇರುವವರೆಗೆ ಅಪಾಯ ಯಾವಾಗಲೂ ಬಲಗಡೆ ಕಾದುಕೊಂಡಿತ್ತು. ಯಾವಾಗ ಅಪಾಯ ನಮ್ಮನ್ನು ಕಾಡುತ್ತಿರುವುದೊ ಆಗ ದೇವರನ್ನು ಚಿಂತಿಸದೆ ವಿಧಿಯಿಲ್ಲ. ಅದಕ್ಕೇ ಕುಂತಿ ಶ್ರೀ ಕೃಷ್ಣನನ್ನು ಪ್ರಾರ್ಥಿಸುವಾಗ "ಯಾವಾಗಲೂ ವಿಪತ್ತಿನ ಪರಂಪರೆಯನ್ನೇ ಕರುಣಿಸು. ಆಗ ಮಾತ್ರ ನಿನ್ನನ್ನು ಚಿಂತಿಸುತ್ತಿರುವೆವು. ಸುಖ ಬಂದರೆ ನಿನ್ನನ್ನು ಮರೆಯುವ ಅಪಾಯವಿದೆ" ಎಂದು ಬೇಡಿಕೊಂಡಳು.

ದಾರಿ ಅಗಲವಿಲ್ಲದೆ ಇರುವುದರಿಂದ ಒಂದು ಬಸ್ಸು ಬರುವಾಗ ಮತ್ತೊಂದು ಅದಕ್ಕೆ ಎದುರಾಗಿ ಹೋಗಲು ಅವಕಾಶವಿಲ್ಲ. ಆದಕಾರಣ ಬಸ್ಸುಗಳೆಲ್ಲ ಹೋಗುವಾಗ ಒಂದರ ಹಿಂದೆ ಒಂದು ಹೋಗುವುವು. ಅಲ್ಲಿ ಹೋಗುವುದು ಒಂದು ಎರಡು ಬಸ್ಸುಗಳಲ್ಲ, ೫೦-೬೦ ಬಸ್ಸುಗಳ ಸಾಲೇ ಒಂದೊಂದು ಸಲಕ್ಕೆ ಹೋಗುವುವು. ಬಸ್ಸುಗಳ ಜೊತೆಯಲ್ಲಿ ಲಾರಿಗಳು ಬೇರೆ ಇರುತ್ತವೆ. ಬೆಟ್ಟ ಹತ್ತಿ ಹತ್ತಿ ಹೋಗುವಾಗ ಎಂಜಿನ್ ಶಾಖವಾಗಿ ಹೋಗುವುದು. ನಾಲ್ಕೈದು ಮೈಲಿಗೆ ಒಂದೊಂದು ಸಲ ನಿಲ್ಲಿಸಿ ಹತ್ತಿರ ಹರಿಯುವ ಝರಿಯ ನೀರನ್ನು ರೇಡಿಯೇಟರಿಗೆ ಹಾಕಿ ಕೋಪ ಶಮನಮಾಡಿ ಹೋಗಬೇಕು. ಆ ರೇಡಿಯೇಟರ್ ತೆಗೆಯುವಾಗಲಂತೂ ಮುಚ್ಚಳ ಕಾದುಹೋಗಿರುತ್ತದೆ. ಬಿರಟೆಯನ್ನು ತೆಗೆದೊಡನೆಯೆ ಭುಗ್ಗೆಂದು ಆವಿಯ ನೀರು ಮೇಲೇಳುವಾಗ ಶಿವನ ಉರಿಗಣ್ಣನ್ನು ನೆನಪಿಗೆ ತರುತ್ತಿತ್ತು.

ದಾರಿಯಲ್ಲಿ ಹೋಗುತ್ತಿರುವಾಗ ನಮ್ಮ ಬಸ್ಸು ಹೋಗುತ್ತಿದ್ದ ರೀತಿ ಮತ್ತು ಆ ರಸ್ತೆ ನೋಡಿ ಪಕ್ಕದಲ್ಲಿರುವವರಿಗೆ 'ನಾವು ಎಲ್ಲದಕ್ಕೂ ಸಿದ್ಧವಾಗಿರಬೇಕು' ಎಂದೆ. ಅನೇಕರಿಗೆ ಈ ಮಾತು ಅಷ್ಟು ಹಿಡಿಸಲಿಲ್ಲ. ಪ್ರಯಾಣಕ್ಕೆ ಮುಂಚೆ ಈ ಮಾತು ನಿಮ್ಮ ಬಾಯಿಂದ ಬರಬೇಕೆ ಎಂದು ಅವರು ಆಕ್ಷೇಪಣೆ ಮಾಡಿದರು. ಅವರಿಗೆ ಪ್ರಯಾಣವೆಂದರೆ ಎಲ್ಲ ಸುಸೂತ್ರವಾಗಿ ನಡೆಯಬೇಕು. ಆದರೆ ನನ್ನ ಜೀವನದಲ್ಲಿ ಪ್ರಯಾಣ ಒಂದೇ ಅಲ್ಲ, ಹಲವು ವಿಷಯಗಳು ನಾವೊಂದೆಣಿಸಿದರೆ ಅದೊಂದು ಆಗಿರುವುದು. ಪ್ರಯಾಣದಲ್ಲಂತೂ ರೈಲು ಲೇಟಾಗಿ ಹೋಗುವುದು, ಬಸ್ಸು ನಿಂತುಹೋಗುವುದು, ಸಮಯಕ್ಕೆ ಸರಿಯಾಗಿ ಸಿಕ್ಕದೆ ಇರುವುದು ಇವೆಲ್ಲಾ ಮಾಮೂಲು. ಅದಕ್ಕೇ ಪ್ರಯಾಣ ಮಾಡುವಾಗ ಇವುಗಳನ್ನೆಲ್ಲ ನಿರೀಕ್ಷಿಸುವುದು ನನ್ನ ಸ್ವಭಾವವಾಗಿಬಿಟ್ಟಿದೆ. ಭವಿಷ್ಯದ ಗರ್ಭದಲ್ಲಿ ಏನೇನು ಹುದುಗಿರುವುದೋ ಯಾರಿಗೆ ಗೊತ್ತು. ಯಾವ ಯಾವ ಪೆಟ್ಟು ಯಾವ ಯಾವ ಶಹಭಾಸ್‌ಗಿರಿ

ನಮ್ಮ ಆತ್ಮವಿಕಾಸಕ್ಕೆ ಬೇಕೊ ಅದೆಲ್ಲ ನಮ್ಮನ್ನು ಇಲ್ಲಿಗೆ ಕಳುಹಿಸಿರುವವನಿಗೆ ಗೊತ್ತು. ಅವನು ಏತಕ್ಕೆ ಇದನ್ನೆಲ್ಲ ಕಳುಹಿಸುವನು ಎಂಬುದನ್ನು ತರ್ಕಿಸುವುದಕ್ಕಿಂತ ಅವನ ಶೀರ್ಷಿಗೆ ತಲೆಯೊಡ್ಡುವುದೆ ಲೇಸೆನಿಸುವುದು.

ಬಸ್ಸು ಸುತ್ತಿ ಸುತ್ತಿ ಹತ್ತಿ ಹೋಗುತ್ತಿತ್ತು. ಆ ಇಕ್ಕಾಟದ ವಕ್ರಾಕಾರದ ರಸ್ತೆಯಲ್ಲಿ ಡ್ರೈವರು ಎಷ್ಟು ನಿರ್ಲಕ್ಷ್ಯವಾಗಿ ಹೋಗುವನು. ಅವನಿಗೆ ಕೆಳಗೆ ಬಾಯೊಡ್ಡಿ ಹರಿಯುವ ಗಂಗಾ ನದಿಯ ಅಂಜಿಕೆಯೇ ಇಲ್ಲದಂತೆ ತೋರುವುದು. ನಾವು ಜೀವನದಲ್ಲಿ ಇಂತಹ ದೃಶ್ಯವನ್ನು ನೋಡುವುದು ಅಪರೂಪ. ಆದರೆ ಡ್ರೈವರು ದಿನಾ ಬೆಳಗೆದ್ದರೆ ಆ ರಸ್ತೆಯಲ್ಲಿ ಹೋಗುತ್ತಿರಬೇಕು. ಅಪಾಯ ಅಪರೂಪವಾಗಿ ಬಂದರೆ ಮನುಷ್ಯ ಅಂಜುತ್ತಾನೆ. ಆದರೆ ಯಾವಾಗಲೂ ಅದರ ಛಾಯೆಯಡಿ ಬೆಳೆಯುವವರಿಗೆ ಇದರ ಪರಿವೆಯೇ ಇರುವಂತೆ ಕಾಣುವುದಿಲ್ಲ. ಬಸ್ಸು ಹೋಗುತ್ತಿದ್ದಾಗ ದೊಡ್ಡದೊಂದು ಶಬ್ದ ಕೇಳಿಸಿತು. ತಕ್ಷಣ ಡ್ರೈವರ್ ನಿಲ್ಲಿಸಿ ನೋಡಲು ಮುಂದಿನ ಟೈರ್ ಬರ್ಸ್ಟ ಆಗಿತ್ತು. ಸರಿ, ನನ್ನೊಡನೆ ಬಂದಿರುವವರು "ನಿಮ್ಮ ಬಾಯಲ್ಲಿ ಬಂದುದೇ ತಡ್ರ, ಆಗಲೇ ಏನೋ ಆಯಿತಲ್ಲ" ಎಂದು ಹಂಗಿಸಿದರು. "ಆದರೆ ಅದು ಇಷ್ಟರಲ್ಲೆ ಪರ್ಯವಸಾನವಾಯಿತಲ್ಲ. ಇನ್ನೇನಾದರೂ ಆಗಿದ್ದರೆ ಆಕ್ಷೇಪಣೆ ಮಾಡುವುದಕ್ಕೂ ಯಾರೂ ಇರುತ್ತಿರಲಿಲ್ಲ" ಎಂದೆ. ತಕ್ಷಣ ಬೇರೊಂದು ಟೈರನ್ನು ಇಟ್ಟು ಹದಿನೈದು ನಿಮಿಷದಲ್ಲಿ ಬಸ್ಸನ್ನು ರಿಪೇರಿ ಮಾಡಿ ಹೊರಟ.

ಸುಮಾರು ನಾಲ್ಕು ಗಂಟೆ ಹೊತ್ತಿಗೆ ಬಸ್ಸು ದೇವಪ್ರಯಾಗಕ್ಕೆ ಬಂದಿತು. ಇದು ಸಮುದ್ರ ಮಟ್ಟಕ್ಕೆ ೧೫೫೦ ಅಡಿ ಎತ್ತರದಲ್ಲಿದೆ. ದೂರದಿಂದಲೇ ದೇವಪ್ರಯಾಗದ ಊರು ಕಾಣುವುದು. ಬೆಟ್ಟದ ಅಂಚಿನಲ್ಲಿ ಮನೆಗಳನ್ನು ಕಟ್ಟಿರುವರು. ಮನೆಯ ಕೆಳಗೆ ಕಣಿವೆಯಲ್ಲಿ ಭಾಗೀರಥಿ ಮತ್ತು ಅಳಕನಂದಾ ನದಿಗಳು ಹರಿದುಕೊಂಡು ಬಂದು ಒಂದು ಕಡೆ ಸೇರುವುವು. ಎರಡು ನದಿ ಅಂಚಿನಲ್ಲಿಯೂ ಇಕ್ಕಟ್ಟಾಗಿರುವ ಕಡೆ ಆ ಊರು ಬೆಳೆದಿದೆ. ನದಿಯ ಪಕ್ಕದಲ್ಲಿ ಮನೆಗಳ ಸಾಲಿದೆ. ಯಾವಾಗಲೂ ಭೋರ್ಗರೆದು ಹರಿಯುತ್ತಿರುವ ಹಿಮ ಪ್ರವಾಹಗಳೆರಡು ನಿತ್ಯವಾದ್ಯ ಧ್ವನಿಯ ಹಿನ್ನೆಲೆಯನ್ನು ಕಲ್ಪಿಸಿವೆ, ಆ ನಗರಿಗೆ. ಬಸ್ಸಿನಿಂದ ಇಳಿದುದೆ ತಡ, ಪಂಡರ ತಂಡ ಮುತ್ತಿತು. ಪಂಡರೆಂಬ ಪದ ಉತ್ತರಕಾಂಡದ ತೀರ್ಥಯಾತ್ರೆಯಲ್ಲಿ ಯಾತ್ರಿಕರ ಸಹಾಯಾರ್ಥವಾಗಿ ಇರುವ ಒಂದು ಜನ. ಅವರ ಕಸಬೆ ಯಾತ್ರಿಕರನ್ನು ಸುಲಿದು ತಿನ್ನುವುದು. ಆ ಪೂಜೆ ಮಾಡಿಸಿ, ಈ ಪೂಜೆ ಮಾಡಿಸಿ ಎನ್ನುವರು. ಪಿತೃಗಳನ್ನು ಪರಲೋಕಕ್ಕೆ ಕಳುಹಿಸುವುದಕ್ಕೆ ಇದು ಶ್ರೇಷ್ಠಸ್ಥಾನವೆನ್ನುವರು. ಇಲ್ಲಿ ದಾನ ಮಾಡಿದರೆ

ಒಂದಕ್ಕೆ ಸಾವಿರದಷ್ಟು ಪುಣ್ಯ ಫಲಿಸುವುದು ಎನ್ನುವರು. ಇವರನ್ನು ನೋಡಿದರೆ ಜಿಗುಪ್ಸೆ ಬರುವುದು. ಪೂಜೆ ಮಾಡಿಸುವರು, ಆದರೆ ಮಂತ್ರವೇ ಚೆನ್ನಾಗಿ ಬರುವುದಿಲ್ಲ. ಬ್ರಾಹ್ಮಣರೆಂದು ಕರೆಸಿಕೊಳ್ಳುವರು, ಸ್ನಾನ ಸಂಧ್ಯಾವಂದನೆ ಯಾವುದರ ಅವಶ್ಯಕತೆಯೂ ಇವರಿಗಿಲ್ಲ. ವಿದ್ಯೆಯಿಲ್ಲ, ಸಂಸ್ಕೃತಿಯಿಲ್ಲ. ಜನರನ್ನು ಪೀಡಿಸಿ ದುಡ್ಡು ವಸೂಲು ಮಾಡುವ ರಣಹದ್ದುಗಳಂತೆ ಇರುವರು. ಸರಿಯಾಗಿ ದುಡ್ಡು ಕೊಡದೆ ಹೋದರೆ ಮನಸ್ಸಿ ನಿಂದೆಯ ಮಳೆ ಕರೆಯುವರು. ದಾರಿಯಲ್ಲಿ ಸಿಕ್ಕುವ ಭಿಕ್ಷುಕರನ್ನಾದರೂ ಮೆಚ್ಚಬಹುದು, ಆದರೆ ಈ ಪಂಡರನ್ನು ಸಹಿಸುವುದು ದುಸ್ಸಾಧ್ಯವಾಗುವುದು. ಈ ಸಂಸ್ಥೆ ಯಾವುದೋ ಕಾಲದಲ್ಲಿ ಪ್ರಯೋಜನಕಾರಿಯಾಗಿದ್ದಿರಬಹುದು. ಆದರೆ ಈಗ ಹಿಂದೂ ಸಂಸ್ಕೃತಿಯಲ್ಲಿ ಬೆಳೆದ ಒಂದು ಕಳೆ. ಇದನ್ನು ಸಾಧ್ಯವಾದಷ್ಟು ಬೇಗ ನಿರ್ಮೂಲ ಮಾಡಿದರೆ ಮೇಲು ಎನಿಸುವುದು, ಅವರ ಕಾಟವನ್ನು ಸಹಿಸದಾಗ.

ದೇವಪ್ರಯಾಗದಲ್ಲಿ ಒಂದು ಕಡೆ ತಂಗಿದೆವು. ಮನೆ ಆಳದ ಕಣಿವೆಯಲ್ಲಿ ಹರಿವ ನದಿಯ ಮೇಲೆ ಇತ್ತು. ಮನೆ ಹಿಂದುಗಡೆ ಬಂದು ನಿಂತರೆ ಸುಮಾರು ನೂರಡಿ ಕೆಳಗೆ ನದಿ ಹರಿದುಹೋಗುತ್ತಿರುವುದು ಕಾಣುವುದು. ಕಡಿದಾದ ಕಣಿವೆಯಲ್ಲಿ ಅಕ್ಕಪಕ್ಕದ ಕಲ್ಲುಬಂಡೆಗಳನ್ನು ಝಾಡಿಸಿಕೊಂಡು ಹೋಗುವಾಗ ಹೊರಹೊಮ್ಮುವ ಧ್ವನಿ ದೇವಪ್ರಯಾಗದ ಊರಿನ ಚಟುವಟಿಕೆಗೆ ಬೃಹತ್ ರುದ್ರವೀಣಾಧ್ವನಿಯ ಹಿನ್ನೆಲೆಯಂತಿದೆ. ಅಂದು ಸಂಜೆ ಕೆಳಗಿಳಿದು ನದೀತೀರದಲ್ಲಿ ಇರುವ ಸೈಕತರಾಶಿಯ ಮೇಲೆ ಕುಳಿತೆ. ಸೂರ್ಯಾಸ್ತಮಯವಾಗಿತ್ತು. ತಿಳಿ ಆಗಸದಲ್ಲಿ ಅಷ್ಟಮಿಯ ಚಂದ್ರ ತೇಲುತ್ತಿದ್ದ. ತಂಪಾದ ನೀರಿನ ಮೇಲಿನಿಂದ ಬೀಸಿಕೊಂಡು ಬರುವ ಗಾಳಿ ಆಹ್ಲಾದಕರವಾಗಿತ್ತು. ಇದೇ ಊರಿನಲ್ಲಿ ಹಿಂದೆ ಶ್ರೀರಾಮ ತಪಸ್ಸನ್ನು ಮಾಡಿದನಂತೆ. ರಾವಣವಧಾನಂತರ ಬ್ರಹ್ಮಹತ್ಯಾದೋಷ ಬರಲು ಅದರಿಂದ ಪಾರಾಗುವುದಕ್ಕೆ ಈ ತಪಸ್ಸು. ಈ ಬ್ರಹ್ಮಹತ್ಯಾದೋಷ ಯಾರನ್ನೂ ಬಿಡುವುದಿಲ್ಲ. ರಾಮನನ್ನೂ ಬಿಡಲಿಲ್ಲ. ಶಿವನನ್ನೂ ಬಿಡಲಿಲ್ಲ. ಶಿವ ಬ್ರಹ್ಮನ ನಾಲ್ಕು ತಲೆಗಳಲ್ಲಿ ಒಂದನ್ನು ಉಗುರಿನಿಂದ ಚಿವುಟಿದಾಗ ಆ ತಲೆ ಅವನ ಕೈ ಬೆರಳಿಗೇ ಅಂಟಿಕೊಂಡಿತಂತೆ. ಆ ಪಾಪದಿಂದ ಪಾರಾಗುವುದಕ್ಕೆ ಶಿವ ಹಿಮಾಲಯದಲ್ಲಿ ಬದರೀನಾಥಕ್ಕೆ ಯಾತ್ರೆ ಮಾಡಬೇಕಾಯಿತು. ಅಲ್ಲಿಗೆ ಹೋದಾಗ ಅದು ಬಿದ್ದುಹೋಯಿತೆಂದು ಹೇಳುವರು. ತನಗೆ ಏನೂ ಕೆಡಕುಮಾಡದೆ, ಲೋಕಕಂಟಕನಾಗದೆ ಇದ್ದ ವಾಲಿಯನ್ನು ಕೊಂದುದಕ್ಕೆ ರಾಮ ಪಶ್ಚಾತ್ತಾಪ ಪಡಲಿಲ್ಲ, ತಪಸ್ಸು ಮಾಡಲಿಲ್ಲ. ಲೋಕಕಂಟಕನಾದ

ರಾವಣನನ್ನು ಸಂಹರಿಸಿದುದಕ್ಕೆ ರಾಮನನ್ನೇ ತಪಸ್ಸು ಮಾಡುವಂತೆ ನಮ್ಮ ಜನ ಬಲಾತ್ಕರಿಸುವರು. ಏಕೆಂದರೆ ರಾವಣ ಜಾತಿಯಲ್ಲಿ ಬ್ರಾಹ್ಮಣನಾಗಿದ್ದನಂತೆ! ವೇದಪಾರಾಯಣ ಮಾಡಬಲ್ಲವನಾಗಿದ್ದನಂತೆ! ಜಾತಿಗೆ ಎಷ್ಟು ಪ್ರಾಶಸ್ತ್ಯಕೊಟ್ಟಿರುವರು ನಮ್ಮವರು ಎಂದುಕೊಂಡೆ. ಅದೇ ಧರ್ಮಶಾಸ್ತ್ರಗಳನ್ನು, ಪುರಾಣಗಳನ್ನು ಬೇರೆ ಕೋಮಿನವರು ಬರೆದಿದ್ದರೆ ಅದು ಬೇರೆ ವಿಧವಾಗಿರುತ್ತಿತ್ತು. ಸ್ವಲ್ಪ ಹೊತ್ತು ಅಲ್ಲೇ ಕುಳಿತಿದ್ದೆ. ಶಿವನ ಜಟಾಜೂಟದಿಂದ ಇಳಿದು ಬಂದ ಗಂಗಾನದಿ ಎದುರಿಗೇ ಹರಿಯುತ್ತಿತ್ತು. ಅವನ ಕೇಶಗಳಲ್ಲಿ ಅಲಂಕೃತನಾದ ಚಂದ್ರನು ನಭೋಮಂಡಲದಲ್ಲಿ ತೇಲುತ್ತಿದ್ದನು. ಸುತ್ತಲೂ ತಿಳಿಬೆಳುದಿಂಗಳಲ್ಲಿ ಮಿಂದ ದೃಶ್ಯ ಉಪನಿಷತ್ತಿನ ಈ ಶ್ಲೋಕವನ್ನು ನೆನಪಿಗೆ ತರುತ್ತಿತ್ತು.

ಆನಂದೋ ಬ್ರಹ್ಮೇತಿ ವ್ಯಜಾನಾತ್ ।<br>
ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ ।<br>
ಆನಂದೇನ ಜಾತಾನಿ ಜೀವನ್ತಿ ।<br>
ಆನಂದಂ ಪ್ರಯಂತ್ಯಭಿಸಂವಿಶಂತಿ ॥

## ಅಭ್ಯಾಸ

### ೧. ಕಠಿಣ ಶಬ್ದಗಳ ಅರ್ಥ:—

ದುಬಾರಿ—ಹೆಚ್ಚು ಕರ್ಚಿನ (ಎರಡರಷ್ಟು). ಕಾಂಟ್ರಾಕ್ಟ್ ಸ್ಲಿಪ್—ಒಪ್ಪಂದವನ್ನು ಮಾಡಿಕೊಳ್ಳುವ ಕಾಗದ. ರಗಳೆ—ವ್ಯರ್ಥವಾದ ಮಾತು, ಗಲಾಟೆ, ಒಂದು ಬಗೆಯ ಕನ್ನಡ ಛಂದಸ್ಸು. ಪೈನ್—ದೇವದಾರು ಮರ. ಅಜಗರ—ಒಂದು ಬಗೆಯ ದೊಡ್ಡ ಸರ್ಪ. ಝುರಿ—ಹೊಳೆ, ನದಿ. ಪರ್ಯವಸಾನ—ಮುಗಿಯುವುದು, ಕೊನೆಗೊಳ್ಳುವುದು. ಸೈಕತ—ಮರಳು. ರೇಡಿಯೇಟರ್—ಮೋಟಾರಿನಲ್ಲಿ ಎಂಜಿನ್ನಿನ ಶಾಖವನ್ನು ಶಮನಮಾಡುವ ಉಪಕರಣ.

ಹರಿದ್ವಾರ—ಕೇದಾರನಾಥ ಬದರೀನಾಥ ಕ್ಷೇತ್ರಗಳಿಗೆ ಹೋಗುವಾಗ ಹರಿದ್ವಾರಕ್ಕೆ ಹೋಗಿ ಹೋಗಬೇಕು. ಡೆಲ್ಲಿಯಿಂದ ಹರಿದ್ವಾರಕ್ಕೆ ರೈಲಿದೆ. ಹರಿದ್ವಾರವೆಂದರೆ ಬದರಿಯಲ್ಲಿರುವ ಹರಿಯ ಬಳಿಗೆ ಹೋಗುವ ರಸ್ತೆ. ಹರಿದ್ವಾರ ಹಿಮಾಲಯದ ತಪ್ಪಲಿನಲ್ಲಿ ಗಂಗಾತೀರದಲ್ಲಿದೆ. ಇದು ಭಾರತದ ಒಂದು ಮುಖ್ಯ ಯಾತ್ರಾ ಸ್ಥಳ. ಹಿಂದೆ ದಕ್ಷನು ಮಾಡಿದ ಯಜ್ಞಕುಂಡ ಇಲ್ಲಿದೆ.

ಹೃಷೀಕೇಶ—ಕೇದಾರನಾಥ ಬದರೀನಾಥಕ್ಕೆ ಹೋಗುವಾಗ ಹರಿದ್ವಾರದಿಂದ

ಹೃಷೀಕೇಶಕ್ಕೆ ಹೋಗಿ ಹೋಗಬೇಕು. ಹರಿದ್ವಾರದಿಂದ ಹೃಷೀಕೇಶಕ್ಕೆ ರೈಲು ಮತ್ತು ಬಸ್ಸಿನ ಮಾರ್ಗಗಳಿವೆ. ಇಲ್ಲಿ ಭರತ ಮತ್ತು ಶತ್ರುಘ್ನರ ದೇವಾಲಯಗಳಿವೆ.

ದೇವಪ್ರಯಾಗ—ಹೃಷೀಕೇಶದಿಂದ ನಲವತ್ತೆರಡು ಮೈಲಿ ದೂರದಲ್ಲಿದೆ. ಇಲ್ಲಿಂದ ರುದ್ರಪ್ರಯಾಗ, ರಾಮಪುರ, ಚಂದ್ರಪುರಿ, ಗುಪ್ತಕಾಶಿ, ಗೌರಿಕುಂಡ ಮೊದಲಾದ ಸ್ಥಳಗಳನ್ನು ಹಾಯ್ದು ಕೇದಾರಕ್ಕೆ ಹೋಗಬೇಕು.

Lord Kitchner—ಸನ್ಯಾಸಿ ಮಠದ ಅಡುಗೆಯ ಪಾರುಪತ್ಯಗಾರ.

ಆನಂದೋ ಬ್ರಹ್ಮೇತಿ ........ ಪ್ರಯತ್ನಭಿಸಂವಿಶಂತಿ—ಆನಂದವನ್ನೇ ಬ್ರಹ್ಮನೆಂದು ತಿಳಿಯಬೇಕು. ಆನಂದದಿಂದಲೇ ಈ ಎಲ್ಲಾ ಭೂತಗಳು ಹುಟ್ಟುತ್ತವೆ; ಅವು ಆನಂದದಿಂದ ಹುಟ್ಟಿ ಬಾಳುತ್ತವೆ ಮತ್ತು ಕಡೆಗೆ ಆನಂದದೊಡನೆ ಸೇರಿ ಲಯ ಹೊಂದುತ್ತವೆ.

೨. ಇವುಗಳಿಗೆ ಸಂದರ್ಭೋಚಿತವಾದ ಟಿಪ್ಪಣಿ ಬರೆಯಿರಿ:—

೧. ಒಂದು ಸಂಕ್ಷಿಪ್ತ ಭರತಖಂಡವೇ ಹೊರಟಂತೆ ಇತ್ತು ಬಸ್ಸು.

೨. ಯಾವಾಗ ಅಪಾಯ ನಮ್ಮನ್ನು ಕಾಡುತ್ತಿರುವುದೊ ಆಗ ದೇವರನ್ನು ಚಿಂತಿಸದೆ ವಿಧಿಯಿಲ್ಲ.

೩. ಭವಿಷ್ಯ ಗರ್ಭದಲ್ಲಿ ಏನೇನು ಹುದುಗಿರುವುದೋ ಯಾರಿಗೆ ಗೊತ್ತು !

೪. 'ನಿಮ್ಮ ಬಾಯಲ್ಲಿ ಬಂದುದೇ ತಡ ಆಗಲೇ ಏನೋ ಆಯಿತಲ್ಲ'.

೫. ಈ ಬ್ರಹ್ಮಹತ್ಯಾದೋಷ ಯಾರನ್ನೂ ಬಿಡುವುದಿಲ್ಲ.

೬. ಅಪಾಯ ಅಪುರೂಪವಾಗಿ ಬಂದರೆ ಮನುಷ್ಯ ಅಂಜುತ್ತಾನೆ.

೩. ಪ್ರಶ್ನೆಗಳು :—

೧. ಹೃಷೀಕೇಶದಿಂದ ದೇವಪ್ರಯಾಗಕ್ಕೆ ಲೇಖಕರು ಪ್ರಯಾಣಮಾಡಿದುದನ್ನು ವರ್ಣಿಸಿ.

೨. ದೇವಪ್ರಯಾಗಕ್ಕೆ ಹೋಗುವಾಗ ಲೇಖಕರಿಗಾದ ಬಸ್ಸಿನ ಅನುಭವವೇನು ?

೩. ದೇವಪ್ರಯಾಗಕ್ಕೆ ಹೊರಡುವ ಮೊದಲು ಲೇಖಕರು ಮಾಡಿಕೊಂಡ ಸಿದ್ಧತೆಗಳೇನು ?

# ನಿರಂಕುಶಮತಿಯಿಂದ ಆತ್ಮಶ್ರೀ

ಕುವೆಂಪು

ಕುವೆಂಪು ಅವರ ನಿಜನಾಮಧೇಯ ಕೆ. ವಿ. ಪುಟ್ಟಪ್ಪ. ೨೯-೧೨-೧೯೦೪ ರಲ್ಲಿ ಮಲೆನಾಡಿನ ಗರ್ಭದಂತಿರುವ ತೀರ್ಥಹಳ್ಳಿ ತಾಲ್ಲೂಕು ಕುಪ್ಪಳ್ಳಿಯಲ್ಲಿ ಜನ್ಮಧಾರಣೆ ಮಾಡಿದರು. ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೆ ಆಂಗ್ಲಭಾಷೆಯಲ್ಲಿ ಕವಿತೆಗಳನ್ನು ರಚಿಸಲಾರಂಭಿಸಿ 'ಬಿಗಿನರ್ಸ್ ಮ್ಯೂಸ್' ಎಂಬ ಕಿರುಹೊತ್ತಗೆಯನ್ನು ಪ್ರಕಟಿಸಿದರು. ಅನಂತರ ಕನ್ನಡದ ಕಡೆಗೆ ತಿರುಗಿ, ಎಂ. ಎ. ಡಿಗ್ರಿ ಪಡೆಯುವ ಹೊತ್ತಿಗೆ ಉದ್ದಾಮ ಕವಿಯೆಂದು ಮಾನ್ಯತೆ ಪಡೆದು, ಕನ್ನಡನಾಡಿನ ಮನೆಮನೆಯ ಆಬಾಲ ವೃದ್ಧರಿಗೆಲ್ಲ ಸುಪರಿಚಿತರಾದರು. ಕುವೆಂಪು ಅವರ ಕಾರ್ಯಕ್ಷೇತ್ರ ತುಂಬ ವಿಶಾಲವಾದುದು, ಬಹುಮುಖವಾದುದು. ಅಡು ಮುಟ್ಟದ ಗಿಡವಿಲ್ಲವೆಂಬಂತೆ ಅವರು ಸಾಹಿತ್ಯ ಕ್ಷೇತ್ರದಲ್ಲಿ ಕೈಯಾಡಿಸದ ಪ್ರಕಾರವಿಲ್ಲ. ಅಂತೆಯೇ ಅವರು ಮುಟ್ಟಿದ್ದೆಲ್ಲ ಚಿನ್ನವಾಗಿದೆ. ಕತೆ, ಕವಿತೆ, ನಾಟಕ, ಹರಟೆ, ಪ್ರಬಂಧ, ಕಥನಕವನ, ಜೀವನಚರಿತ್ರೆ, ಉಪನ್ಯಾಸ, ಕಾದಂಬರಿ, ಮಹಾಕಾವ್ಯ—ಎಲ್ಲದರಲ್ಲಿಯೂ ಅವರು ಸಿದ್ಧಿ ಪಡೆದಿದ್ದಾರೆ. 'ಬೊಮ್ಮನ ಹಳ್ಳಿಯ ಕಿಂದರಿಜೋಗಿ' ಕನ್ನಡನಾಡಿನ ಮಕ್ಕಳಿಗೆಲ್ಲ ಅಚ್ಚು ಮೆಚ್ಚಾಗಿರುವಂತೆ, 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯ ಭಾರತ ಸರ್ಕಾರದ ಮನ್ನಣೆಗೆ ಪಾತ್ರವಾಗಿದೆ. ಈಗಾಗಲೇ ಅವರ ಪ್ರಕಟಿತ ಗ್ರಂಥಗಳು ೫೦ ರಷ್ಟಿವೆ.

ಕನ್ನಡಭಾಷೆ ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಘ ಸಂಸ್ಥೆಗಳಿಗೆಲ್ಲ ಅವರು ಆಧಾರ ಸ್ತಂಭವಾಗಿದ್ದಾರೆ, ಮಾರ್ಗದರ್ಶಕರಾಗಿದ್ದಾರೆ, ನೇತಾರರಾಗಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದ ಆಚಾರ್ಯ ಪುರುಷರಲ್ಲೊಬ್ಬರಾಗಿದ್ದಾರೆ. ಅವರ ಸಾಹಿತ್ಯಸೇವೆಯನ್ನು ಮೆಚ್ಚಿ ಮೈಸೂರು ವಿಶ್ವವಿದ್ಯಾನಿಲಯ ಅಪೂರ್ವವಾದ ಡಾಕ್ಟರೇಟ್ ಪ್ರಶಸ್ತಿಯನ್ನು ನೀಡಿದೆ. ಕನ್ನಡ ಅಧ್ಯಾಪಕರಾಗಿ, ಉಪಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಮಹಾರಾಜ ಕಾಲೇಜಿನ ಪ್ರಿನ್ಸಿಪಾಲರಾಗಿದ್ದು ಬಹುಮುಖವಾದ ಸೇವೆಯನ್ನು ಸಲ್ಲಿಸಿ, ಈಗ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದಾರೆ. ಕರ್ಣಾಟಕ ಏಕೀಕರಣವಾದ ಮೇಲೆ ಧಾರವಾಡದಲ್ಲಿ ನಡೆದ ೩೯ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿದ್ದಾರೆ.

ಪ್ರಕೃತ ಭಾಗವನ್ನು 'ನಿರಂಕುಶಮತಿಗಳಾಗಿ' ಎಂಬ ಅವರ ಭಾಷಣ ಸಂಗ್ರಹದಿಂದ ಆರಿಸಿಕೊಂಡಿದೆ.

ಅಮೃತಪುತ್ರರಲ್ಲಿ ವಿಜ್ಞಾಪನೆ.

ಮಿತ್ರರೇ, ನಿಮ್ಮ ಮುಂದೆ ನಿಂತು, ನನ್ನ ಕೆಲವು ಅಭಿಪ್ರಾಯಗಳನ್ನು ಪ್ರಕಾಶಪಡಿಸಲು ಅವಕಾಶ ಕಲ್ಪಿಸಿಕೊಟ್ಟುದಕ್ಕಾಗಿ ನಾನು ನಿಮ್ಮೆಲ್ಲರನ್ನು ಮನಮುಟ್ಟಿ ವಂದಿಸುತ್ತೇನೆ.

ನನ್ನ ಅಭಿಪ್ರಾಯಗಳು ಕೆಲವರಿಗೆ ರುಚಿಸದಿರಬಹುದು, ಮತ್ತೆ ಕೆಲವರಿಗೆ ಕ್ರಾಂತಿಕಾರಿಗಳಾಗಿ ತೋರಬಹುದು. ಆದರೂ ನನ್ನ ಮನಸ್ಸಿನಲ್ಲಿ ಯಾರನ್ನಾದರೂ ನೋಯಿಸಬೇಕೆಂಬ ಇಚ್ಛೆ ಲವಲೇಶವೂ ಇಲ್ಲ. ಅಲ್ಲದೆ, ನಾನು ಹೇಳಲಿರುವ ಅಭಿಪ್ರಾಯಗಳು ಅಲ್ಪಾಲೋಚನೆಯಿಂದಾಗಲಿ, ಉದ್ರೇಕದ ಬುದ್ಧಿಯಿಂದಾಗಲಿ, ಅನುದಾರತೆಯಿಂದಾಗಲಿ, ಪ್ರತಿ ಹಿಂಸಾಭಾವದಿಂದಾಗಲಿ ಬಂದುವಲ್ಲ; ಬಹುಕಾಲದ ದೀರ್ಘಮಂಥನದಿಂದ, ಪ್ರಶಾಂತ ಧ್ಯಾನದಿಂದ, ಅನ್ಯಾಯಗಳನ್ನೂ ಅವಿವೇಕಗಳನ್ನೂ ಅಜ್ಞಾನಜನ್ಯವಾದ ಕ್ರೂರ ವರ್ತನೆಗಳನ್ನೂ ಕಂಡಾಗ ಮೂಡಿದ ಸಾತ್ತ್ವಿಕ ಕ್ರೋಧದಿಂದ, ನಮ್ಮ ದೇಶ ನಮ್ಮ ನಾಡು ನಮ್ಮ ಭಾಷೆ ನಮ್ಮ ಸಂಸ್ಕೃತಿ ನಮ್ಮ ಸ್ಥಿತಿಗತಿಗಳು ಉಚ್ಛ್ರಾಯವಾಗಬೇಕೆಂಬ ಹಂಬಲದಿಂದ ಮೂಡಿದುವಾಗಿವೆ. ಆದಕಾರಣ, ತಾಳ್ಮೆಯಿಂದ ಆಲಿಸಿ, ವಿವೇಕದಿಂದ ಭಾವಿಸಿ, ವಿಮರ್ಶಬುದ್ಧಿಯಿಂದ ಪರೀಕ್ಷಿಸಿ, ಒಪ್ಪಿಗೆಯಾದುದನ್ನು ಸ್ವೀಕರಿಸಿ, ತಪ್ಪುಗಳನ್ನು ತಿದ್ದಿಕೊಳ್ಳಬೇಕೆಂದು ವಿನಯದಿಂದ ಕೇಳಿಕೊಳ್ಳುತ್ತೇನೆ.

ನಾನಿಲ್ಲಿ ಗುರುಸ್ಥಾನದಲ್ಲಿ ನಿಂತಿಲ್ಲ; ನೀವೂ ಶಿಷ್ಯಸ್ಥಾನದಲ್ಲಿ ಕುಳಿತಿಲ್ಲ. ನಾನು ಉಪದೇಶ ಮಾಡುತ್ತಿಲ್ಲ: ವಿಜ್ಞಾಪಿಸುತ್ತಿದ್ದೇನೆ. ನನ್ನಂತೆಯೇ ನಿಮ್ಮಲ್ಲಿ ಅನೇಕರು ಜಿಜ್ಞಾಸೆ ಮಾಡಿರಬಹುದು. ಹಾಗಿದ್ದರೆ ನಮ್ಮ ಅಭಿಪ್ರಾಯಗಳು ಘರ್ಷಿಸದೆ ಮೃದುವಾಗಿ ಹೊಂದಿಕೊಳ್ಳುತ್ತವೆ; ಜಿಜ್ಞಾಸೆ ಮಾಡದೆ ಇದ್ದವರಿಗೆ ಜಿಜ್ಞಾಸೆ ಮಾಡಲು ಭಾವಾವಕಾಶಗಳು ದೊರೆಯುತ್ತವೆ. ಆದ್ದರಿಂದ ಯಾರೊಬ್ಬರೂ ನನ್ನ ಮಾತುಗಳನ್ನು ಪಚನಮಾಡದೆ ನುಂಗದಿರಲಿ; ಮತಿಯ ಒರೆಗಲ್ಲಿಗೆ ಹಚ್ಚದೆ ಸ್ವೀಕರಿಸದಿರಲಿ; ಧೀರವಾಗಿ ವಿಮರ್ಶಿಸದೆ ಒಪ್ಪದಿರಲಿ. ಆದರೆ ಪಕ್ಷಪಾತವಿಲ್ಲದೆ ಕಿವಿಗೊಟ್ಟು ಮಾತ್ರ ಕೇಳಿ.

ಯುವಕರು 'ನಿರಂಕುಶಮತಿ'ಗಳಾಗಬೇಕು. 'ನಿರಂಕುಶಮತಿ'ತ್ವ ಎಂದರೆ ನಿರಂಕುಶ ಪ್ರಭುತ್ವದಂತೆ ಎಂದು ತಿಳಿಯಬಾರದು. ನಿರಂಕುಶ ಪ್ರಭುತ್ವದ ಲಕ್ಷಣವೆಂದರೆ ವಿವೇಕಹೀನವಾದ ಸ್ವಚ್ಛಂದ ವರ್ತನೆ. ಸಂಯಮಪೂರ್ಣವಾದ ಬುದ್ಧಿಸ್ವಾತಂತ್ರ್ಯವೇ 'ನಿರಂಕುಶಮತಿ.'

ಮತಿ ಮಾನವನ ಸರ್ವೋತ್ಕೃಷ್ಟವಾದ ಆಯುಧ. ಮತಿಯೇ ಕತ್ತಲಲ್ಲಿ

ದಾರಿ ತೋರುವ ರತ್ನದ ಕೈದೀವಿಗೆ. ಮತಿಯ ದೆಸೆಯಿಂದಲೇ, ಪ್ರಾಣಿಮಾತ್ರವಾಗುತ್ತಿದ್ದ ನರಜೀವಿ ಮನುಷ್ಯತ್ವಕ್ಕೆ ಏರಿದ್ದಾನೆ. ಮತಿಯ ಕೃಪಾಮಹಿಮೆಯಿಂದಲೇ ನಾವು ಮನುಷ್ಯತ್ವದಿಂದ ದೇವತ್ವಕ್ಕೆ ಏರಬೇಕಾಗಿದೆ. ಮತಿ ಮನುಷ್ಯತ್ವದ ಹಕ್ಕು. ಆ ಹಕ್ಕನ್ನು ಬಿಟ್ಟವನು ಮನುಷ್ಯತ್ವವನ್ನೇ ಕಳೆದುಕೊಳ್ಳುತ್ತಾನೆ. ಆದ್ದರಿಂದ, ಸಹೋದರರೇ, ಮತಿ ನಿಮ್ಮ ನಚ್ಚಿನ ರನ್ನದೀವಿಗೆಯಾಗಲಿ.

ಸ್ವಲ್ಪವಾಗಿಯೋ ಹೆಚ್ಚಾಗಿಯೋ ಮತಿ ಮನುಷ್ಯರೆಲ್ಲರಲ್ಲಿಯೂ ಇರುತ್ತದೆ. ಆದರೆ ಈಗೇನಾಗಿದೆ ಅದರ ಗತಿ? ಮೌಢ್ಯದಿಂದಲೂ ಮತಾಚಾರಗಳಿಂದಲೂ ಸಮಾಜಭೀತಿಯಿಂದಲೂ ರಾಜಭಯದಿಂದಲೂ ಸ್ವರ್ಗ ನರಕ ದೇವಾನುದೇವತೆಗಳ ಮೋಹ ಮಾಯೆಗಳಿಂದಲೂ ಅದು ಸತ್ವರಹಿತವಾಗಿದೆ; ಕಾಂತಿಹೀನವಾಗಿದೆ. ಚಕ್ರವರ್ತಿಯಂತೆ ಸಿಂಹಾಸನದಲ್ಲಿ ಮಂಡಿಸಬೇಕಾದುದು ತೊತ್ತಾಗಿ ಕಾಲೊತ್ತಬೇಕಾಗಿದೆ. ಎಂದರೆ ಮತಿಗೆ ಅಂಕುಶಗಳು ಅತಿಯಾಗಿ ಹೋಗಿ ಅದರ ಜೀವವೇ ನಿಸ್ತೇಜವಾಗಿದೆ. ಯುವಕ ಮಿತ್ರರೇ, ಅಧೋಗತಿಗಿಳಿದಿರುವ ನಮ್ಮ ಮತಿಯನ್ನು ಮತ್ತೆ ಆಕಾಶಕ್ಕೆತ್ತಬೇಕು.

ಮತಿಯನ್ನು ನಿಸ್ತೇಜಗೈದಿರುವ ಕೆಲವು ಅಂಕುಶಗಳನ್ನು ವಿವರಿಸುತ್ತೇನೆ. ಸಾವಧಾನದಿಂದ ಕೇಳಿ.

ಮತ ನಮಗೊಂದು ದೊಡ್ಡ ಬಂಧನವಾಗಿದೆ; ನಾಡಿನ ಏಳ್ಗೆಯ ಕುತ್ತಿಗೆಗೆ ಉರುಳಾಗಿದೆ. ಪರಮಶಾಂತಿಯೂ ಪರಮಾನಂದವೂ ಆಗಿರುವ ಪರಮೇಶ್ವರನನ್ನು ಪಡೆಯಲೆಂದು ಜೀವ ಮಾಡುವ ಪ್ರಯತ್ನವೇ, ಮತದ ನಿಜಾವಸ್ಥೆ. ಆದರೆ ಈಗ ನಾವು ಮತ ಎಂದು ಕರೆದುಕೊಳ್ಳುವ ಆಚಾರಸಮೂಹ ಬರಿಯ ಸಾಮಾಜಿಕವಾದ ಕಟ್ಟು ಕಟ್ಟಳೆಗಳ ಕಾಟವಾಗಿದೆ. ಒಬ್ಬರನ್ನೊಬ್ಬರು ಮುಟ್ಟದಿರುವುದು, ನೋಡದಿರುವುದು; ಒಬ್ಬರೊಡನೊಬ್ಬರು ಕುಳಿತು ಭೋಜನ ಮಾಡದಿರುವುದು; ನಾಮಹಾಕಿಕೊಳ್ಳುವುದು; ವಿಭೂತಿ ಹಚ್ಚಿಕೊಳ್ಳುವುದು, ಮುದ್ರೆ ಹೊಡೆದುಕೊಳ್ಳುವುದು, ಶಿಲುಬೆ ಧರಿಸಿಕೊಳ್ಳುವುದು, ಕೆಲವರನ್ನು ಸಾರ್ವಜನಿಕವಾದ ಬಾವಿ ಕೆರೆಗಳಲ್ಲಿ ನೀರು ತೆಗೆದುಕೊಳ್ಳದಂತೆ ಮಾಡುವುದು; ಕೆಲವರನ್ನು ದೇವಸ್ಥಾನದೊಳಗೆ ಸೇರಿಸದಿರುವುದು; ಮತ್ತೆ ಕೆಲವರನ್ನು ಗುಡಿಯೊಳಗೆ ಹತ್ತು ಮಾರು ಮಾತ್ರ ಬರಗೊಡಿಸುವುದು; ಹಾಗೆ ಬರಗೊಡಿಸಬೇಕೇ ಬೇಡವೇ ಎಂದು ಚರ್ಚೆ ನಡೆಸುವುದು;—ಇತ್ಯಾದಿ ಕೆಲಸಕ್ಕೂ ಬಾರದ, ಶ್ರೇಯಸ್ಕರವೂ ಅಲ್ಲದ ನೂರಾರು ಆಚಾರ ವ್ಯವಹಾರಗಳ ಸಮಷ್ಟಿಯೇ ನಮ್ಮ ಮತದ ಹುರುಳಾಗಿ ಕುಳಿತಿದೆ. ಉಪನಿಷತ್ತು,

ಭಗವದ್ಗೀತೆ ಮತ್ತು ಮಹಾವಿಭೂತಿಗಳು ಸಾರಿದ ಮತ್ತು ಸಾರುತ್ತಿರುವ ಅಮೃತಸಂದೇಶ ಅರಣ್ಯರೋದನವಾಗಿದೆ.

ಆದರೆ ಇನ್ನು ಹೆಚ್ಚು ಕಾಲ ಆ ಅಮೃತಸಂದೇಶಕ್ಕೆ ಕಿವುಡಾಗಿರಲಾರೆವು. ಹಾಗಿದ್ದರೆ ನಮಗೂ ನಮ್ಮ ಸಂಸ್ಕೃತಿಗೂ ಮರಣವೇ ಗತಿಯಾಗುತ್ತದೆ. ಯುವಕರಾದವರು ಎಚ್ಚೆತ್ತುಕೊಂಡು ದೀರ್ಘದೃಷ್ಟಿಯಿಂದಲೂ ವಿಶಾಲ ಹೃದಯದಿಂದಲೂ ಸನಾತನವಾದರೂ ಚಿರನವೀನವಾದ ಆತ್ಮನ ಚಿರಂತನ 'ದರ್ಶನ'ವನ್ನು ಪಡೆದು ತಮ್ಮನ್ನೂ ದೇಶವನ್ನೂ ಉದ್ಧಾರ ಮಾಡಿಕೊಳ್ಳಬೇಕಾಗಿದೆ.

ಸರ್ವ ಮತಗಳಿಗಿಂತಲೂ ಶುದ್ಧಹೃದಯದ ಮತ್ತು ಸನ್ಮತಿಯ ಮತವೇ ಮಹೋನ್ನತವಾದುದು. ಆ ಗುರು, ಈ ಆಚಾರ್ಯ, ಆ ಧರ್ಮಶಾಸ್ತ್ರ, ಈ ಮನುಸ್ಮೃತಿ ಮೊದಲಾದುವು ಏನೇ ಹೇಳಲಿ; ಎಲ್ಲವನ್ನೂ ವಿಮರ್ಶಿಸುವ, ಪರೀಕ್ಷಿಸುವ, ಒರೆಗಲ್ಲಿಗೆ ಹಚ್ಚುವ ಹಕ್ಕು ನಮ್ಮದಾಗಿರುತ್ತದೆ. ಈಶ್ವರನು ನಮ್ಮಲ್ಲಿಯೂ ಇದ್ದಾನೆ. ಆತನ ಮಹಾಜ್ಯೋತಿಯ ಕಿರಣಗಳು ನಮ್ಮ ಬುದ್ಧಿಯಲ್ಲಿಯೂ ಪ್ರಕಾಶಿಸುತ್ತವೆ. ಆ ಪ್ರಕಾಶವೇ ಮತಿ. ಮತಿಯನ್ನು ತಿರಸ್ಕರಿಸಿದರೆ ಈಶ್ವರನ ಜ್ಯೋತಿಯನ್ನು ತಿರಸ್ಕರಿಸಿದಂತಾಗುತ್ತದೆ. ಹಾಗೆ ಮಾಡುವವನೇ ನಿಜವಾಗಿಯೂ ನಾಸ್ತಿಕನು. ಮೌಢ್ಯವೇ ಈಶ್ವರ ನಿಂದೆ. ಯಾವ ರೂಪದಲ್ಲಿಯೇ ಆಗಲಿ, ಯಾವ ವೇಷದಲ್ಲಿಯೇ ಆಗಲಿ, ತಿಳಿದೂ ತಿಳಿದೂ ಮೂಢತನವನ್ನು ಆರಾಧಿಸಿ, ಬೋಧಿಸಿ, ಲಾಭ ಪಡೆಯುತ್ತ ನೆಮ್ಮದಿಯಾಗಿರುವವನು ಪಾಷಂಡಿಯಾಗುತ್ತಾನೆ.

ಚತುರ್ಮುಖ ಬ್ರಹ್ಮನೇ ಸಾಕ್ಷಾತ್ತಾಗಿ ಬಂದು, ನಾನೀಗ ನಿಮ್ಮೊಡನೆ ಮಾತಾಡುತ್ತಿರುವಂತೆ, ಋಷಿಗಳಿಗೆ ವೇದಗಳನ್ನು ಉಪನ್ಯಸಿಸಿದನು ಎಂದು ಹೇಳಿದರೆ, ಕಣ್ಣುಮುಚ್ಚಿಕೊಂಡು ನಂಬಬೇಡಿ. ಯಾವ ಕಾಲದಲ್ಲಿಯೋ ಯಾವ ಸಮಾಜಕ್ಕಾಗಿಯೋ ಮನು ಬರೆದಿಟ್ಟ ಕಟ್ಟಳೆಗಳು ಇಂದಿಗೂ ನಮ್ಮನ್ನಾಳಬೇಕೆಂದು ಹೇಳಿದರೆ ತಲೆದೂಗಿಬಿಡಬೇಡಿ. ಆಗಿನ ಮನು ಪವಿತ್ರನಾದರೆ ಈಗಿನ ಮಹಾತ್ಮ ಗಾಂಧಿ ಪವಿತ್ರನಲ್ಲವೆ? ನಂಬುಗೆ ಪುರಾತನವಾದ ಮಾತ್ರಕ್ಕೆ ಸತ್ಯವಾದುದೆಂದು ಭಾವಿಸಬೇಡಿ. ವಿಜ್ಞಾನಪ್ರಪಂಚದಲ್ಲಿ ಹೊಸದಾಗಿ ಕಂಡುಹಿಡಿದ ಸತ್ಯಗಳು ಹಳೆಯ ಅರ್ಧಸತ್ಯಗಳಿಗಿಂತಲೂ ಮಾನ್ಯವಾಗುವುದಾದರೆ ಧರ್ಮ ಪ್ರಪಂಚದಲ್ಲೇಕೆ ಹಾಗಾಗಬಾರದು? ವೇದ ಅನಾದಿಯಾದರೆ ಅನಂತವೂ ಆಗಿರುವುದಿಲ್ಲವೆ? ವೇದ ಪೂರೈಸಿದ ಗ್ರಂಥವಲ್ಲ; ವೇದದ ಕಟ್ಟಕಡೆಯ ಅಧ್ಯಾಯ ಅಂದಿಗೇ ಮುಗಿದಿಲ್ಲ. ಅದು

ಇಂದಿಗೂ ನಾಳೆಗೂ ಮುಂದುವರಿಯುತ್ತದೆ. ಹಾಗೆಯೇ ಋಷಿಗಳೂ ಆಚಾರ್ಯರೂ ಅಂದಿಗೇ ಪೂರೈಸಿಲ್ಲ, ಕೊನೆಗಂಡಿಲ್ಲ; ಇಂದಿಗೂ ನಾಳೆಗೂ ಬರುತ್ತಲೇ ಇರುತ್ತಾರೆ. ಆದ್ದರಿಂದ ಹೊಸ ಋಷಿಗಳ ಹೊಸ ವೇದವಾಕ್ಯಗಳನ್ನು ಕಿವಿಗೊಟ್ಟು ಕೇಳಿ. ಸಂಕುಚಿತ ಬುದ್ಧಿಯನ್ನು ದೂರಮಾಡಿ. ಹೃದಯ ಜೀವನ ಹಳೆಯ ನೀರಿನ ಕೊಳಕು ಕೊಳವಾಗದಿರಲಿ; ಯಾವಾಗಲೂ ಹೊಸ ನೀರು ಬಂದು ಹರಿಯುತ್ತಿರುವ ಸ್ವಚ್ಛ ಸಲಿಲ ಸ್ರೋತವಾಗಿರಲಿ.

ಮಹನೀಯರೇ, ಕೆಲವು ಉದಾಹರಣೆಗಳನ್ನು ತೆಗೆದುಕೊಂಡರೆ ನನ್ನ ಆಶಯ ನಿಮಗೆ ಇನ್ನೂ ಸ್ಪಷ್ಟವಾಗುತ್ತದೆ. ಅಸ್ಫುಟವಾಗಿ ಅನಿರ್ದಿಷ್ಟವಾಗಿ ನಿರಾಕಾರವಾಗಿ ತತ್ತ್ವಪ್ರತಿಪಾದನೆ ಮಾಡುವುದಕ್ಕಿಂತ ದೃಷ್ಟಾಂತಗಳನ್ನೂ ನಿದರ್ಶನಗಳನ್ನೂ ತೆಗೆದುಕೊಂಡು ಭಾವವನ್ನು ವಿವರಿಸುವುದು ಮೇಲು.

ಮತಭ್ರಾಂತಿಯೂ ಮೌಢ್ಯವೂ ವೈಜ್ಞಾನಿಕ ಪ್ರಗತಿಗೆ ಹೇಗೆ ಮಹಾ ಕಂಟಕಗಳಾದುವು ಎಂಬುದಕ್ಕೆ ಪಾಶ್ಚಾತ್ಯ ದೇಶಗಳ ಕ್ರೈಸ್ತ ಧರ್ಮಚರಿತ್ರೆಯಲ್ಲಿ ಬೇಕಾದಷ್ಟು ನಿದರ್ಶನಗಳಿವೆ. ಅವುಗಳಲ್ಲಿ ಒಂದು, ಸುಪ್ರಸಿದ್ಧ ವಿಜ್ಞಾನಿಯಾಗಿದ್ದ ಗೆಲಿಲಿಯೊ ಎಂಬಾತನನ್ನು ಕುರಿತದ್ದು. ಕ್ರೈಸ್ತರಿಗೆ ಬೈಬಲ್ ಪರಮ ಪ್ರಮಾಣವಾದ ಪವಿತ್ರ ಗ್ರಂಥ, ಹಿಂದೂಗಳಿಗೆ ವೇದಗಳಿರುವಂತೆ. ಆದ್ದರಿಂದ ಕ್ರೈಸ್ತ ಪುರೋಹಿತರೂ ಗುರುಗಳೂ ಭಕ್ತಜನರೂ ಬೈಬಲ್ಲಿಗೆ ವ್ಯತಿರಿಕ್ತವಾದುವೆಲ್ಲ ಪಾಷಂಡ ಮತವೆಂದು ಸಾರಿ, ಅಂತಹ ದುರ್ಮತಕ್ಕೆ ಕಾರಣರಾದವರನ್ನು ಜೀವಸಹಿತವಾಗಿ ಸುಡುವುದೇ ಮೊದಲಾದ ಶಿಕ್ಷೆಗಳಿಗೆ ಗುರಿಮಾಡುತ್ತಿದ್ದರು. ಎಷ್ಟೋ ಜನ ಸಾತ್ತ್ವಿಕಜೀವಿಗಳೂ ಮೇಧಾವಿಗಳೂ ಆದ ಸತ್ಯಾರಾಧಕರು ಬೈಬಲ್ಲಿಗೂ ಮತ್ತು ಕ್ರೈಸ್ತ ಗುರುಸಂಪ್ರದಾಯಕ್ಕೂ ವ್ಯತಿರಿಕ್ತವಾದ ಖಗೋಲಶಾಸ್ತ್ರ, ಜೀವಶಾಸ್ತ್ರ ಮತ್ತು ಭೌತಶಾಸ್ತ್ರಗಳ ಅಮೂಲ್ಯ ಸತ್ಯಗಳನ್ನು ಕಂಡುಹಿಡಿದು ಹೇಳಿದುದರ ಫಲವಾಗಿ ಆ ಪುರೋಹಿತರ ಕ್ರೋಧಾಗ್ನಿಗೆ ಸಿಕ್ಕಿ ಭಸ್ಮೀಭೂತರಾಗಬೇಕಾಯಿತು.

ಗೆಲಿಲಿಯೊ ಎಂಬಾತನು ದೂರದರ್ಶಕ ಯಂತ್ರವನ್ನು ಕಂಡುಹಿಡಿದು, ಗ್ರಹ ಚಂದ್ರ ತಾರೆಗಳನ್ನು ನೋಡಿ ಪರೀಕ್ಷಿಸಿದುದರ ಫಲರೂಪವಾಗಿ ಭೂಮಿ ಇತರ ಗ್ರಹಗಳಂತೆ ಸೂರ್ಯನ ಸುತ್ತ ಸುತ್ತುತ್ತದೆ ಎಂದು ಪ್ರಯೋಗಪೂರ್ವಕವಾಗಿ ಸಿದ್ಧಾಂತ ಮಾಡಿದನು. ಆದರೆ ಕ್ರೈಸ್ತಸಂಪ್ರದಾಯಕ್ಕನುಸಾರವಾಗಿ ಭೂಮಿ ಜಗತ್ತಿನ ಕೇಂದ್ರಸ್ಥಾನ; ಸೂರ್ಯ ನಕ್ಷತ್ರಗಳೆಲ್ಲ ಭೂಮಿಯ ಸುತ್ತ

ಸುತ್ತುತ್ತವೆ. ಆ ಕಾರಣದಿಂದಲೇ ಕ್ರೈಸ್ತಗುರುಗಳು ಗೆಲಿಲಿಯೊವನ್ನು ಪಾಷಂಡಿಯೆಂದು ಸಾರಿ ವಿಚಾರಣೆಗೆ ಒಳಪಡಿಸಿದರು. ಮುಟ್ಠಾಳರೆಲ್ಲ ಸೇರಿ ಮೇಧಾವಿಯನ್ನು ಕುರಿತು ಹೀಗೆ ಹೇಳಿದರು: "ನಮ್ಮ ಪವಿತ್ರ ಧರ್ಮಶಾಸ್ತ್ರ ಭೂಮಿಯೇ ವಿಶ್ವದ ಕೇಂದ್ರವೆಂದು ಹೇಳುತ್ತದೆ. ಸೂರ್ಯ ಚಂದ್ರ ನಕ್ಷತ್ರಗಳೆಲ್ಲ ದೇವರು ತನ್ನ ಮಕ್ಕಳಾದ ಮನುಷ್ಯರ ಪ್ರಯೋಜನಕ್ಕಾಗಿ ಆಕಾಶದಲ್ಲಿಟ್ಟಿರುವ ಅಲಂಕಾರ ದೀಪಗಳು. ಅವು ಭೂಮಿಯ ಸುತ್ತ ಸುತ್ತುತ್ತವೆ. ಭೂಮಿ ತನಗಿಂತಲೂ ಬಹುಪಾಲು ದೊಡ್ಡದಾಗಿರುವ ಸೂರ್ಯನ ಸುತ್ತಲೂ ಸುತ್ತುವ ಅನೇಕ ಗ್ರಹಗಳಲ್ಲಿ ಒಂದು ಸಣ್ಣ ಯಃಕಶ್ಚಿತ ಗ್ರಹಮಾತ್ರವೆಂದು ಸಿದ್ಧಾಂತಮಾಡಿ ನಮ್ಮನ್ನು ಸೃಷ್ಟಿಸಿದ ಕರುಣಾಮಯನಾದ ಸೃಷ್ಟಿಕರ್ತನಿಗೂ, ಆತನ ವಾಣಿಗೂ, ಆತನ ಭಕ್ತರಿಗೂ ಅವಮಾನ ಮಾಡಿದ್ದೀಯೆ. ಅಲ್ಲದೆ ನೀನು ಹೇಳುವುದು ಬೈಬಲ್ಲಿಗೆ ವ್ಯತಿರಿಕ್ತವಾದುದರಿಂದ ಅದು ಸುಳ್ಳು. ನಿನ್ನ ಸಿದ್ಧಾಂತವನ್ನು ವಾಪಸು ತೆಗೆದುಕೊಂಡು ನಮ್ಮ ಪವಿತ್ರಮತ ಹೇಳುವ ಸಿದ್ಧಾಂತವನ್ನು ಒಪ್ಪಿಕೊಳ್ಳದಿದ್ದರೆ, ಪವಿತ್ರಮತದ ಉದ್ಧಾರಕ್ಕಾಗಿಯೂ ಬೈಬಲ್ಲಿನ ಗೌರವಾರ್ಥವಾಗಿಯೂ ಪಾಷಂಡಿಗಳಿಗೆ ಭೀತಿ ಹುಟ್ಟಿಸುವ ಸಲುವಾಗಿಯೂ ಸೃಷ್ಟಿಕರ್ತನ ಮಹಿಮೆ ಪೂಜೆಗಳಿಗಾಗಿಯೂ ನಿನ್ನ ಆತ್ಮದ ಪ್ರಾಯಶ್ಚಿತ್ತ ಮತ್ತು ಮೋಕ್ಷಾರ್ಥವಾಗಿಯೂ ನಿನ್ನನ್ನು ಜೀವಸಹಿತವಾಗಿ ಸುಡುತ್ತೇವೆ! ಹೇಳು! ಸುಳ್ಳು ಸಿದ್ಧಾಂತವನ್ನು ವಾಪಸು ತೆಗೆದುಕೊಳ್ಳುತ್ತೀಯೊ! ಜೀವಸಹಿತವಾಗಿ ಸುಡಿಸಿಕೊಳ್ಳುತ್ತೀಯೊ?"

ಗೆಲಿಲಿಯೊಗೆ ಚೆನ್ನಾಗಿ ಗೊತ್ತು, ತನ್ನ ಸಿದ್ಧಾಂತವೇ ಸರಿ ಎಂದು. ಆದರೆ ವಾಪಸು ತೆಗೆದುಕೊಳ್ಳದಿದ್ದರೆ, ಹಿಂದೆ ಕೆಲವರನ್ನು ಸುಟ್ಟ ಹಾಗೆ ತನ್ನನ್ನೂ ಸುಡುತ್ತಾರೆ ಎಂದೂ ಆತನಿಗೆ ಚೆನ್ನಾಗಿ ಗೊತ್ತು. ಆದ್ದರಿಂದ ಆ ಮುಟ್ಠಾಳರ ತೃಪ್ತಿಗಾಗಿ ತನ್ನ ಸಿದ್ಧಾಂತವನ್ನು ವಾಪಸು ತೆಗೆದುಕೊಂಡು, ಅವರ ಸಿದ್ಧಾಂತವೇ ಸರಿಯೆಂದು ಒಪ್ಪಿ ಬಿಡುಗಡೆ ಪಡೆದನು. ಆದರೆ ಕೋರ್ಟಿನಿಂದ ಹೊರಗೆ ಬರುವಾಗ ತನ್ನಷ್ಟಕ್ಕೆ ತಾನೇ "ನಾನು ನೋವಿಗೆ ಹೆದರಿ ವಾಪಸು ತೆಗೆದುಕೊಂಡರೇನಾಯಿತು? ಭೂಮಿ ಸೂರ್ಯನ ಸುತ್ತ ಸುತ್ತಿಯೇ ಸುತ್ತುತ್ತದೆ" ಎಂದುಕೊಂಡನಂತೆ. ಹೀಗೆ ಮತಿಹೀನವಾದ ಮತ ಜ್ಞಾನದ ಪ್ರಗತಿಗೆ ಅಡಚಣೆಯಾಗಿರುವುದಕ್ಕೆ ಸಾವಿರಾರು ನಿದರ್ಶನಗಳು ಹಿಂದೆಯೂ ಸಿಕ್ಕುತ್ತವೆ; ಇಂದೂ ದೊರೆಯುತ್ತವೆ.

ಕೆಲವು ತಿಂಗಳ ಹಿಂದೆ ಪತ್ರಿಕೆಯೊಂದರಲ್ಲಿ ಯಾರೋ ಒಬ್ಬರಿಗೆ ಯಾವುದೋ ದೇವತೆ ಯಾವುದೋ ತೋಟದಲ್ಲಿ ಕಾಣಿಸಿಕೊಂಡಂತೆಯೂ,

ಆ ದೇವತೆ "ಎಲ್ಲರೂ ಇಂತಿಷ್ಟು ದಿನಗಳ ಒಳಗಾಗಿ ಉಗಾದಿ ಹಬ್ಬವನ್ನು ಮಾಡದಿದ್ದರೆ ಮನೆಮನೆಗೂ ಒಂದೊಂದು ಜೀವವನ್ನು ಅಪಹರಿಸುತ್ತೇನೆ" ಎಂದು ಹೇಳಿದ ಹಾಗೂ ಪ್ರಕಟವಾಗಿದ್ದಿತು. ಮಾಡಬೇಕಾದ ನೈವೇದ್ಯಗಳ ವಿವರವೂ ಪ್ರಮಾಣವೂ ಕೂಡ ಅಚ್ಚಾಗಿತ್ತು. ಅನೇಕರು ಹೆದರಿಯೇ ಹಬ್ಬ ಮಾಡಿಕೊಂಡು ತಿಂದರು. ಹಬ್ಬಮಾಡಿಕೊಂಡು ತಿಂದುದರಿಂದ ಅಪಾಯ ವೇನಿಲ್ಲ. ಆದರೆ ಅಂತಹ ಮೂಢ ಭಾವಗಳ ಪ್ರಚಾರ ದುಷ್ಪರಿಣಾಮಕಾರಿ ಯಾದುದಲ್ಲವೇ? ಅದರಲ್ಲಿಯೂ ಹಳ್ಳಿಗಳಲ್ಲಿ ಪತ್ರಿಕೆಗಳೆಂದರೆ ವೇದಸಮ ವಾಗಿವೆ. ಪತ್ರಿಕೆಗಳಲ್ಲಿ ಬಂದಿದೆ ಎಂದರೆ ಏನನ್ನು ಬೇಕಾದರೂ ನಂಬುತ್ತಾರೆ. ವೇದ ಧರ್ಮಶಾಸ್ತ್ರಗಳಲ್ಲಿ ಹೇಳಿದೆ ಎಂದರೆ ಎಂತಹ ಕ್ರೂರಕರ್ಮವನ್ನಾದರೂ ಸರಿ ಎಂದು ನಂಬುವಂತೆ! ಅಚ್ಚಿನಲ್ಲಿ ಅವರಿಗಷ್ಟು ಗೌರವ; ನಮಗೆ ಸಂಸ್ಕೃತ ಶ್ಲೋಕಗಳಲ್ಲಿರುವಂತೆ. ದುಡ್ಡು ಇದ್ದರೆ ಸರಿ. 'ಮೊಲಕ್ಕೆ ಮೂರು ಕೊಂಬುಗಳ ತುದಿಯಲ್ಲಿ ಕಣ್ಣುಗಳಿವೆ' ಎಂದು ಬೇಕಾದರೂ ಅಚ್ಚು ಮಾಡ ಬಹುದು ಎಂಬ ಸಂಗತಿ, ಪಾಪ, ಆ ಹಳ್ಳಿಗರಿಗೇನು ಗೊತ್ತು?

ಹಾಗೆಯೇ ಪರ್ಜನ್ಯಜಪ ಮಾಡಿ ಮಳೆ ಬರಿಸಿದರು ಎನ್ನುವ ವಿಷಯ. ಅದನ್ನು ಕುರಿತು ಎಷ್ಟು ಮಂದಿ ನಿಷ್ಪಕ್ಷಪಾತವಾಗಿ ಧೀರಮತಿಯಿಂದ ಆಲೋ ಚಿಸಿದ್ದಾರೆ? ಸಹರಾ ಮರುಭೂಮಿಗೆ ಪುರೋಹಿತರನ್ನು ಕಳುಹಿಸಿ ಪರ್ಜನ್ಯಜಪ ಮಾಡಿಸಿದರೆ ಮಳೆ ಬಂದು ಅದು ಫಲವತ್ತಾಗುತ್ತದೆಯೆ? ಆಗುತ್ತದೆ ಎಂದು ನಿರ್ಣಯವಾಗುವವರೆಗೆ ನಂಬುಗೆ ಕುರುಡಲ್ಲವೆ? ಹೃತ್ಪೂರ್ವಕವಾದ ಪ್ರಾರ್ಥನೆ ಯಿಂದ ಪ್ರಕೃತಿ ನಿಯಮಗಳು ಮನಕರಗುತ್ತವೆಯೆ? ಒಂದು ವೇಳೆ ಕರಗು ವುದಾದರೂ ರೈತಾದಿ ಜನಗಳು ಮನೆಮನೆಯಲ್ಲಿಯೂ ಮೂರುಹೊತ್ತೂ 'ಭಗ ವಂತ, ಮಳೆಯನ್ನು ದಯಪಾಲಿಸು' ಎಂದು ಬೇಡುವ ಆರ್ತಧ್ವನಿಗಿಂತಲೂ ದುಡ್ಡುಕೊಟ್ಟು ಮಾಡಿಸುವ ಜಪಕ್ಕೆ ಜಗಚ್ಛಕ್ತಿ ಹೆಚ್ಚಾಗಿ ಕೃಪೆದೋರುತ್ತದೆಯೆ? ಯುವಕರೆಲ್ಲರೂ ಇಂತಹ ಪ್ರಶ್ನೆಗಳನ್ನು ಧೀರವಾಗಿ ಕೇಳಿಕೊಳ್ಳಬೇಕು. ಧೀರವಾದ ಉತ್ತರಗಳನ್ನು ಕಂಡುಹಿಡಿದುಕೊಳ್ಳಬೇಕು.

ಏಕೆಂದರೆ ಇಂದು ಪರ್ಜನ್ಯಜಪ ಮಾಡಿ ಮಳೆಬರಿಸಿದವರು ನಾಳೆ ರಾಮಧ್ಯಾನಮಾಡಿ ಪ್ಲೇಗು ಓಡಿಸಲಾರರೆ ಎಂದು ಮೂಢರು ಆ ರೋಗಕ್ಕೆ ಬೇಕಾಗುವ ವೈದ್ಯಕಾರ್ಯಗಳನ್ನು ಮಾಡದೆ ನಾಶವಾಗಬಹುದು! ಅಂತಹ ಮೌಢ್ಯದಿಂದ ನಾಶವಾಗುತ್ತಿರುವುದನ್ನು ನಾವು ಕಣ್ಣಾರೆ ಕಾಣಬಹುದು. ಉದ್ದೇಶ ಎಷ್ಟೇ ಶ್ಲಾಘ್ಯವಾಗಲಿ, ಅದು ತಿಳಿವಳಿಕೆಯಿಂದ ಕೂಡಿರದಿದ್ದರೆ ಅಪಾಯವಾಗುತ್ತದೆ. ಒಂದು ಪಟ್ಟಣದಲ್ಲಿ ಸಿಡುಬು ರೋಗ ತಲೆದೋರಿ

ಎಲ್ಲೆಲ್ಲಿಯೂ ಜನರು ಸಾಯುತ್ತಿದ್ದರಂತೆ. ಆ ನಗರದ ದೊಡ್ಡ ಪಾದ್ರಿ ಸಿಡುಬಿನ ರೋಗವನ್ನು ಓಡಿಸುವುದಕ್ಕೆಂದು ಜನರನ್ನೆಲ್ಲ ಚರ್ಚಿನಲ್ಲಿ ಒಟ್ಟು ಗೂಡಿಸಿ ದೇವರ ಪ್ರಾರ್ಥನೆ ಮಾಡಿಸಿದನಂತೆ. ಆದರೆ ಆ ಗುಂಪಿನಲ್ಲಿ ಸಿಡು ಬಿನ ಸೋಂಕು ತಗುಲಿದವರು ಇದ್ದುದರಿಂದ ಜನರು ಸಿಡುಬಿನಿಂದ ಪಾರು ಮಾಡು ಎಂದು ದೇವರನ್ನು ಬೇಡುತ್ತಿದ್ದಾಗಲೇ ಆ ಭಯಂಕರ ರೋಗ ನೆರೆ ದವರಲ್ಲಿ ಒಬ್ಬರಿಂದೊಬ್ಬರಿಗೆ ಹರಡುತ್ತಿತ್ತು. ಇಲ್ಲಿ ಪಾದ್ರಿಯ ಮತ್ತು ಜನ ಗಳ ಉದ್ದೇಶ ಸದ್ಭಾವದಿಂದ ಕೂಡಿದ್ದರೂ ಸಿಡುಬಿನ ರೋಗದ ವಿಚಾರವಾಗಿದ್ದ ಅವರ ಅಜ್ಞಾನ ಸದುದ್ದೇಶವನ್ನು ಅದು ಭಯಂಕರ ವ್ಯಾಪಾರಕ್ಕೆ ಕಾರಣ ವಾಗುವಂತೆ ಮಾಡಿತು. ಅಂತಹ ಅನಾಹುತಗಳಿಂದ ಜನರನ್ನು ಪಾರು ಮಾಡಬೇಕಾದರೆ ಅವರ ಕೈಗೆ ಮತಿಯ ದೀವಿಗೆಯನ್ನು ಕೊಡಬೇಕು. ಅವ ರಲ್ಲಿ ಪರೀಕ್ಷಿಸುವ ಬುದ್ಧಿಯೂ ವಿಮರ್ಶಿಸುವ ಧೈರ್ಯವೂ ಉದ್ಭವಿಸುವಂತೆ ಮಾಡಬೇಕು. "ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ! ದಂದ್ರಮ್ಯಮಾಣಾಃ ಪರಿಯಂತಿ ಮೂಢಾ ಅಂಧೇ ನೈವ ನೀಯಮಾನಾ ಯಥಾಂಧಾಃ॥-ಅವಿದ್ಯೆಯ ಮಧ್ಯೆ ಬಿದ್ದುಕೊಂಡಿದ್ದರೂ ತಾವು ಬುದ್ಧಿವಂತರೆಂದೂ ಪಂಡಿತರೆಂದೂ ಭ್ರಮಿಸಿ, ಕುರುಡರಿಂದ ನಡೆಯಿಸ ಲ್ಪಡುವ ಕುರುಡರಂತೆ, ಅಜ್ಞಾನಿಗಳು ಕಷ್ಟಕ್ಕೀಡಾಗಿ ತೊಳಲುತ್ತಾರೆ" ಎಂದು ಹೇಳುವ ಉಪನಿಷತ್ತಿನ ಎಚ್ಚರಿಕೆಗೆ ಕಿವಿಗೊಡಬೇಕು.

ಹಾಗೆಯೇ 'ದೇವಾಲಯಪ್ರವೇಶ'ದ ಪ್ರಶ್ನೆ–ಮುಂತಾದುವುಗಳನ್ನು ಕೆಚ್ಚಿನಿಂದ ಮತಿಯ ಒರೆಗಲ್ಲಿಗೆ ಹಚ್ಚಿ ನೋಡಬೇಕು. ಮೊನ್ನೆ ಪತ್ರಿಕೆಗಳಲ್ಲಿ ನಾನು ಓದಿದೆ. ಒಬ್ಬರು ಕೃತವಿದ್ಯರಾದ ಗೌರವಸ್ಥರು ದೇವಾಲಯಕ್ಕೆ ಹೋಗಿಬಂದುದಕ್ಕೆ ಪ್ರತಿಯಾಗಿ ಸಂಪ್ರೋಕ್ಷಣೆಗೆ ಜುಲುಮಾನೆ ಕೊಡಬೇಕಾಗಿ ಬಂದಿತಂತೆ. ಕಾರಣ, ಅವರು ಅಸ್ಪೃಶ್ಯರ ಜಾತಿಗೆ ಸೇರಿದವರಂತೆ. ಅವರಿ ಗಿಂತಲೂ ಮೂಢರೂ ಕೊಳಕರೂ ದುಷ್ಟರೂ ರೋಗಿಗಳೂ ದುರಾಚಾರಿಗಳೂ ಆದ 'ಸ್ಪೃಶ್ಯ' ರೆಂದೆನಿಸಿಕೊಂಡವರು ಗುಡಿಯೊಳಗೆ ಹೋದರೆ ಮೈಲಿಗೆ ಯಾಗುವುದಿಲ್ಲವಂತೆ! 'ಸ್ಪೃಶ್ಯ' ಯುವಕರು ತಮ್ಮ ಸಹೋದರನಿಗಾದ ಅವಮಾನ ತಮ್ಮದೆಂದು ಭಾವಿಸಿ ದೇವಾಲಯಗಳಿಗೆ ಹೋಗುವುದನ್ನೇ ಬಿಟ್ಟು, ಹೊರಗೆ, ಪ್ರಕೃತಿ ಸೌಂದರ್ಯದಲ್ಲಿ, ಉದಯಿಸುವ ಸೂರ್ಯನಲ್ಲಿ, ಸಾಹಿತ್ಯ ದಲ್ಲಿ, ಸಂಸ್ಕೃತಿಯಲ್ಲಿ, ದರಿದ್ರನಾರಾಯಣನ ಸೇವೆಯಲ್ಲಿ ನಮ್ಮ ದೇವಾಲಯ ಗಳನ್ನು ಕಟ್ಟಿಕೊಂಡು, ಮತದ ಅನೌದಾರ್ಯವನ್ನು ಮುರಿಯಬೇಕು. ಅಸ್ಪೃಶ್ಯ ಯುವಕರಾದವರಿಗೆ ನನ್ನದೊಂದು ಬಿನ್ನಹ. ನೀವು ಅವಮಾನ ಮಾಡಿಸಿ

ಕೊಂಡು ದೇವಾಲಯಕ್ಕೆ ಹೋಗದಿದ್ದರೆ ಏನಾಗುತ್ತದೆ? ಗುಡಿಯ ಕಲ್ಲಿನಲ್ಲಿ ದೇವರಿದ್ದಾನೆ ಎಂಬ ಭ್ರಾಂತಿ ನಿಮಗೇಕೆ? 'ಪ್ರಭುಲಿಂಗ ಲೀಲೆ' ಯಲ್ಲಿ ಸತ್ಯ ಸಾಕ್ಷಾತ್ಕಾರದ ಕಾರ್ಯವನ್ನು ಬಿಟ್ಟು ಕೀರ್ತಿಪೂಜಾಲಾಭದಾಶೆಗೆ ದೇವ ಸ್ಥಾನವನ್ನು ಕಟ್ಟಿಸುತ್ತಿದ್ದ ಸಿದ್ಧರಾಮನನ್ನು ಕುರಿತು ಅಲ್ಲಮನು—

ಸಕಲ ಕಲ್ಲನು ಕಡಿದು, ಕಲ್ಲಿಗೆ
ಶಿಖರ ದೇಗುಲವೆಂದು ಮಾಡಿಸಿ,
ಮಕರಿಸುವರಿವರೊಡ್ಡರಲ್ಲದೆ ಸಿದ್ಧರಲ್ಲ—

ಎಂದಿದ್ದಾನೆ. ಒಡ್ಡತನದ ಕೆಲಸವನ್ನು ನಾವೇಕೆ ಮಾಡಬೇಕು! ಗುಡಿಯೊಳಗೆ ಹೋಗಿ ಮತದ ಮೌಢ್ಯಕ್ಕೂ ಪುರೋಹಿತರ ಸುಲಿಗೆಗೂ ಒಳಗಾಗುವುದಕ್ಕಿಂತ ದೂರವಾಗಿದ್ದುಕೊಂಡು ಎದೆಯ ದೇಗುಲದಲ್ಲಿಯೇ ಈಶ್ವರನನ್ನು ಇನ್ನಷ್ಟು ಅತಿಶಯವಾದ ಭಾವಭಕ್ತಿಯಿಂದ ಪೂಜಿಸಬಾರದೆ? ಅಸ್ಪೃಶ್ಯರನ್ನು ದೇವಾಲಯಗಳಿಗೆ ಪ್ರವೇಶ ಮಾಡಲು ಬಿಡಬೇಕೆಂದು ಹೇಳುತ್ತಿರುವುದು ಉಚ್ಚವರ್ಗದ ಹಿಂದುಗಳ ಪರಿಶುದ್ಧತೆಗಾಗಿ ಮತ್ತು ದೃಷ್ಟಿವೈಶಾಲ್ಯ ಸಾಧನೆಗಾಗಿಯೇ ಹೊರತು ಹರಿಜನರ ಮೋಕ್ಷಕ್ಕಾಗಿಯಲ್ಲ. ಹೊರಗಿನ ಸುಂದರ ಪ್ರಕೃತಿಮಯ ಜಗತ್ತೂ, ಅಂತರಂಗದ ದಿವ್ಯಭಾವಗಳ ಪ್ರಪಂಚವೂ, ಸರ್ವರಿಗೂ ಸುಲಭವಾದ ಮಹಾ ಪುರುಷರ ಕೃತಿಗಳಲ್ಲಿರುವ ಮಹದಾಲೋಚನೆಗಳೂ ನಮಗೆ ದೇವಸ್ಥಾನ, ಪೂಜೆ, ಗುರು ಮಂತ್ರ ಇವುಗಳೆಲ್ಲವೂ ಆಗಲಿ; ಪ್ರಯತ್ನಿಸುವವರಿಗೆಲ್ಲ ಆ 'ದರ್ಶನ' ಲಭಿಸುವುದರಲ್ಲಿ ಸಂದೇಹವಿಲ್ಲ. ಅದು ಸಿದ್ಧಿಸುವವರೆಗೂ ನಮಗಾಗಲಿ ನಮ್ಮ ದೇಶಕ್ಕಾಗಲಿ ಮೋಕ್ಷವಿಲ್ಲ; ಸುಖವಿಲ್ಲ; ಶಾಂತಿಯಿಲ್ಲ; ದಾಸ್ಯದಿಂದ ಬಿಡುಗಡೆಯಿಲ್ಲ.

ಆದ್ದರಿಂದ ಯುವಕ ಸಹೋದರರೇ, ಯಾವ ಒಂದು ಸಂಪ್ರದಾಯದ ಸಂಕೋಚಕ್ಕೂ ಸಿಕ್ಕಿಕೊಳ್ಳಬಾರದು. ಯಾವ ಒಂದು ಪಂಥದ ಇಕ್ಕಟ್ಟಿಗೂ ಒಳಗಾಗಬಾರದು. ಸರ್ವಧರ್ಮಗಳ ಸಾರವಾದ ಉದಾರ 'ದರ್ಶನ'ವೊಂದನ್ನು ಕಂಡು, ಕಟ್ಟಿಕೊಂಡು ಬಾಳಬೇಕು. ಜಾತಿ ಮತ ದೇಶ ಕಾಲಗಳ ಭೇದವಿಲ್ಲದೆ ಎಲ್ಲ ಮಹಾಪುರುಷರ ಜ್ಞಾನಗಂಗೆಗಳ ಮಂಗಳಸಂಗಮದಲ್ಲಿ ತೀರ್ಥಸ್ನಾನಮಾಡಿ ಪೂರ್ಣ ಜೀವನವನ್ನು ಪೂರ್ಣವಾಗಿ ಅನುಭವಿಸಬೇಕು.

ಸೋದರರೇ, ಅಂತಹ 'ದರ್ಶನ'ದ ಸಂಪಾದನೆ ಅಷ್ಟೇನೂ ದುಸ್ಸಾಧ್ಯವಲ್ಲ. ಮತಭ್ರಾಂತಿಯನ್ನು ಬಿಟ್ಟು ಮತಿಯ ದೀವಿಗೆಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಹೊರಡುವ ಸರ್ವರಿಗೂ ಅದು ಸುಲಭಸಾಧ್ಯ.

ಆ 'ದರ್ಶನ'ವನ್ನು ಪಡೆದ ಮೇಲೆ ನಮಗೆ ದೇವಸ್ಥಾನಗಳ ಆವಶ್ಯಕತೆ ಇರುವುದಿಲ್ಲ. ದೇವದೇವನ ಶರೀರರೂಪಿಯಾದ ಜಗತ್ತೆಲ್ಲವೂ ದೇವಸ್ಥಾನ ವಾಗುತ್ತದೆ. ಅಸ್ಪೃಶ್ಯರೆಂದು ಪರಿಗಣಿತರಾಗಿರುವ ಈಶ್ವರ ಶಿಶುಗಳು ಕಲ್ಲು ಕಟ್ಟಡದ ದೇವಸ್ಥಾನಗಳಿಗೆ ಹೋಗಿ ಭಕ್ತಿಪ್ರದರ್ಶನ ಮಾಡಿದ ಪಾಪಕ್ಕೆ ಆಮೇಲೆ, ಸಂಪ್ರೋಕ್ಷಣೆಗಾಗಿ ಜುಲುಮಾನೆ ಕೊಡುವುದೂ ತಪ್ಪುತ್ತದೆ.

ಇಂತಹ ದಿವ್ಯ 'ದರ್ಶನ'ದ ಪ್ರಾಪ್ತಿಗಾಗಿ ನಮಗೆ ಬೇಕಾಗುವ ಧೀರ, ಸ್ವತಂತ್ರ, ಉದಾರ ಪ್ರತಿಭಾಪೂರ್ಣವಾದ ಬುದ್ಧಿಯನ್ನೇ ನಾನು 'ನಿರಂಕುಶ ಮತಿ' ಎಂದು ಕರೆದಿದ್ದೇನೆ. ಆದ್ದರಿಂದ ತಮ್ಮ ಮತ್ತು ಜಗತ್ತಿನ ಶ್ರೇಯ ಸ್ಸನ್ನು ಕೋರುವ ಯುವಕರೆಲ್ಲರೂ 'ನಿರಂಕುಶಮತಿ' ಗಳಾಗಬೇಕು.

'ನಿರಂಕುಶಮತಿ' ಗಳಾಗಬೇಕಾದರೆ ದಾಸ್ಯಬುದ್ಧಿ ತೊಲಗಬೇಕು; ದಾಸ್ಯಬುದ್ಧಿ ತೊಲಗಬೇಕಾದರೆ ಸ್ವತಂತ್ರವಾಗಿ ಜೀವಿಸಲು ಪ್ರಯತ್ನಿಸ ಬೇಕು; ಎಂದರೆ ಸ್ವಾವಲಂಬನ ಬೇಕು; ಎಂದರೆ ಇನ್ನೊಬ್ಬರ ಕೈ ಹಾರೈಸಿ ಹೊಟ್ಟೆ ಹೊರೆಯುವುದು ತಪ್ಪಬೇಕು. ಮುಚ್ಚುಮರೆಯಿಲ್ಲದೆ ಬಿಚ್ಚಿ ಹೇಳು ವುದಾದರೆ, ಸಂಪತ್ತು ಬೇಕು, ಹಣಬೇಕು; ಉದ್ಯೋಗ ಬೇಕು. ಮಿತ್ರರೇ, ನಾನು ಒಪ್ಪಿಕೊಳ್ಳುತ್ತೇನೆ, ಈ ಸಮಸ್ಯೆಯು ನಿಜವಾಗಿಯೂ ಕಗ್ಗಂಟಾ ಗಿದೆ. ಆ ಸಮಸ್ಯೆಯನ್ನು ಪರಿಹರಿಸಲೆಂದೇ ದೇಶದ ನಾಯಕರೆಲ್ಲರೂ ಕಷ್ಟ ಪಡುತ್ತಿದ್ದಾರೆ. ಆಶಾಬುದ್ಧಿಯಿಂದ ಅವರ ಉದ್ಯಮದಲ್ಲಿ ನಾವೂ ಭಾಗಿಗಳಾಗಿ ಇಂದಿನ ತಪಸ್ಸು ಮುಂದಿನ ಸತ್ಫಲಕ್ಕೆ ಮಾರ್ಗವೆಂದು ಶ್ರದ್ಧೆಯಿಂದ ಮುಂದು ವರಿಯಬೇಕಾಗಿದೆ. ಸಮಸ್ಯೆಯ ಆಗಾಧತೆ ನಮ್ಮ ಮುಂದಿರುವ ಸಾಹಸದ ಆಳ ಅಗಲಗಳನ್ನು ಸೂಚಿಸುತ್ತದೆ.

ಆದರೂ ಪಾರಾಗಲು ಕೆಲವು ಸೂಚನೆಗಳನ್ನು ಕೊಡಬಹುದು. ಹೀಗೆಯೇ ಮಾಡಿ ಎಂದು ಇತಿವಿಧಿಗಳನ್ನು ಸೂಚಿಸುವುದು ಕಷ್ಟಸಾಧ್ಯ ವಾದರೂ ಹೀಗೆ ಮಾಡದಿದ್ದರೆ ಒಂದಿಷ್ಟು ಲೇಸಾಗಬಹುದೆಂದು ನೀತಿವಿಧಾನ ವನ್ನಾದರೂ ಹೇಳಲು ಸಾಧ್ಯ.

ಕೃತವಿದ್ಯರಾದ ಯುವಕರು ನಾಗರಿಕತೆಯ ಮೆರುಗಿಗೆ ಮನಸೋತು ಪಟ್ಟಣಗಳನ್ನು ಸೇರುತ್ತಿದ್ದಾರೆ. ಅಲ್ಲಿಯೂ ಕೂಡ ಅವರು ಕೈಕೊಳ್ಳುವ ವೃತ್ತಿ ಸ್ವಲ್ಪ ಹೆಚ್ಚು ಕಡಿಮೆ 'ಉತ್ಪತ್ತಿಕಾರಕ' ವಾಗಿರುವುದಿಲ್ಲ; 'ಸಂಗ್ರಹ ಕಾರಕ' ವಾಗಿರುತ್ತದೆ. ಹಾಗೆ ಮಾಡುವುದರಿಂದ ಹಲಕೆಲವರಿಗೆ ಅವರವರ ಮಟ್ಟಿಗೆ ನೆಮ್ಮದಿಯಾಗಬಹುದು. ಆದರೆ ಎಲ್ಲರೂ ಎಷ್ಟು ಕಾಲ ತಾನೇ ಸಂಪತ್ತನ್ನು ಸೃಷ್ಟಿಸದೆ ಸಂಗ್ರಹಿಸುತ್ತಲೇ ಹೋಗಲಾಗುತ್ತದೆ? ಆದ್ದರಿಂದ

ಮೇಧಾವಿಗಳಾದ ಯುವಕರು ತಮಗೆ ನವನಾಗರಿಕತೆಯ ಮಾಯಾಸ್ಮಿತರುಚಿ ದೊರಕೊಳ್ಳದಿದ್ದರೂ ಚಿಂತೆಯಿಲ್ಲ ಎಂದುಕೊಂಡು, ಗ್ರಾಮಗಳಲ್ಲಿಯೇ ನಿಂತು ಜನರ ಅಧ್ಯಾತ್ಮಿಕ ಅಜ್ಞಾನವನ್ನೂ ಆಧಿದೈವಿಕ ಮೌಢ್ಯವನ್ನೂ ಆಧಿಭೌತಿಕ ಕಷ್ಟನಷ್ಟಗಳನ್ನೂ ಪರಿಹರಿಸಲು ಪ್ರಯತ್ನಿಸುವ ತಪಸ್ಸನ್ನು ಕೈಕೊಳ್ಳಬೇಕು.

ಮತದ ಹೆಸರಿನಲ್ಲಿ, ಸಮಾಜದ ಕಟ್ಟುಕಟ್ಟಳೆಗಳ ಹೆಸರಿನಲ್ಲಿ, ದೆವ್ವ ಪಿಶಾಚಿ ಗ್ರಹಗಳ ಹೆಸರಿನಲ್ಲಿ, ಮಾಮೂಲುಗಳ ಹೆಸರಿನಲ್ಲಿ ದುರ್ವ್ಯಯವಾಗುತ್ತಿರುವ ಸಂಪತ್ತನ್ನು ತಡೆಗಟ್ಟಿ, ಅದನ್ನು ಹೆಚ್ಚು ಆವಶ್ಯಕವಾಗಿರುವ ಮತ್ತು ಹೆಚ್ಚು ಉಪಯೋಗಕರವಾಗಿರುವ ಜೀವನ ಪಥಗಳಲ್ಲಿ ವಿನಿಯೋಗಿಸುವಂತೆ ಮಾಡಬೇಕು.

ಯುವಕರು ವೇಷ ಭೂಷಣಗಳಲ್ಲಿ ಅತಿ ಷೋಕಿಗೆ ಹೋಗದೆ ಸರಳ ಸಾಧಾರಣವಾಗಿದ್ದರೆ ಸ್ವಲ್ಪವಾದರೂ ಉಳಿತಾಯವಾಗುತ್ತದೆ. ಅಲ್ಲದೆ ಷೋಕಿ ಮಾಡಲೆಂದು ಮದುವೆ ಮಾಡಿಕೊಂಡು ಮಾವಂದಿರ ಮೂಲಧನಕ್ಕೆ ಬಾಯಿ ಬಾಯಿ ಬಿಡುವುದೂ ತಪ್ಪುತ್ತದೆ.

ಯುವಕನು ಸಂಪಾದನೆ ಮಾಡುವ ಸಾಮರ್ಥ್ಯವನ್ನು ಪಡೆಯುವ ಮೊದಲೆ ಮದುವೆ ಮಾಡಿಕೊಂಡಲ್ಲಿ ಒಡನೆಯೇ ಚತುಷ್ಪಾದಿಯಾಗುತ್ತಾನೆ. ಅವನ ಸ್ವತಂತ್ರ ಬುದ್ಧಿ, ನಿರಂಕುಶ ಮತಿ ಎಲ್ಲವೂ ಮಣ್ಣುಗೂಡುತ್ತವೆ. ಅವರಿವರ ಕೈ ಹಾರೈಸಿ, ನಾಲ್ಕು ಕಾಸು ಸಂಪಾದನೆಗಾಗಿ ಅವರಿವರನ್ನು ಓಲಗಿಸಿ, ಅಧಿಕಾರಿಗಳ ಅಥವಾ ಸಾಹುಕಾರರ ಕಾಲಬಳಿ ಮೂಲಗಿಸಿ, ತನ್ನಲ್ಲಿರುವ ದಿವ್ಯಾತ್ಮವನ್ನು ಸಂಪೂರ್ಣವಾಗಿ ಅವಮಾನಪಡಿಸುತ್ತಾನೆ. ಆತನ ತಾರುಣ್ಯದ 'ದರ್ಶನ' ಜ್ಯೋತಿ ಸಾಂಸಾರಿಕ ಜೀವನದ ದಾಸ್ಯದಲ್ಲಿ, ಕೋಟಲೆಯಲ್ಲಿ, ಕಷ್ಟದಲ್ಲಿ, ಧೂಳಿಧೂಮಗಳಲ್ಲಿ ನಂದಿಹೋಗುತ್ತದೆ ಅಥವಾ ನಂದಿಹೋಗುವಷ್ಟರ ಮಟ್ಟಿಗೆ ಮಾಸಿಹೋಗುತ್ತದೆ, ಕಡೆಕಡೆಗೆ ಅನೀತಿ ಕೂಡ ಹೀನವಾಗಿ ತೋರುವುದಿಲ್ಲ. ಅವನ ಔದಾರ್ಯದ ವಲಯವು ಬರಬರುತ್ತಾ ಕಿರಿದಾಗಿ, ಕಡೆಗೆ ತಾನು, ತನ್ನ ಹೆಂಡತಿ, ತನ್ನ ಮಗು ಮೂವರನ್ನು ಮಾತ್ರ ಸುತ್ತುವರಿಯುತ್ತದೆ. ಅವರಿಗಾಗಿ ಏನನ್ನು ಬೇಕಾದರೂ ಮಾಡಲು ಹೇಸುವುದಿಲ್ಲ. ಹಾಗಾಗುವವರು ದೇಶದ ಪ್ರಗತಿಗೆ ಕಂಟಕಪ್ರಾಯರಾಗುತ್ತಾರೆ. ಆದ್ದರಿಂದ ಮಿತ್ರರೇ, ನಿಮ್ಮ ಕಾಲ ಮೇಲೆ ನೀವು ನೆಮ್ಮದಿಯಾಗಿ ನಿಲ್ಲುವ ಶಕ್ತಿ ಬರುವ ಮೊದಲು ಮದುವೆಯಾಗಬೇಡಿ; ಆತ್ಮಕ್ಕೆ ಅಗೌರವವನ್ನೂ ಮನಸ್ಸಿಗೆ ಯಾತನೆಯನ್ನೂ ದೇಶಕ್ಕೆ ಹಾನಿಯನ್ನೂ ತರಬೇಡಿ.

ಅದಕ್ಕೆ ಬದಲು ವೈವಾಹಿಕ ಜೀವನವನ್ನು ಸಾಂಗವಾಗಿ ನಡೆಸಲು ತಕ್ಕ

ಸಂಪತ್ತೂ ಸಾಮರ್ಥ್ಯವೂ ಲಭಿಸುವ ತನಕ ಬ್ರಹ್ಮಚಾರಿಗಳಾಗಿದ್ದುಕೊಂಡು ದೇಶಕ್ಕೆ ಹಿತಕರವಾದ ಕಾರ್ಯಗಳನ್ನು ಮಾಡುತ್ತಿರಬಹುದು. ಭೀಷ್ಮನು ಬ್ರಹ್ಮಚಾರಿಯಾಗಿದ್ದನು. ಹನುಮಂತನು ಬ್ರಹ್ಮಚಾರಿಯಾಗಿದ್ದನು. ಅವರು ಮಹತ್ಕಾರ್ಯಗಳನ್ನು ಸಾಧಿಸಿದರು. ಇಂದಿನ ಮನಶ್ಶಾಸ್ತ್ರವೂ ಕೂಡ ಬ್ರಹ್ಮಚರ್ಯದಿಂದ ತೇಜಸ್ಸು ಓಜಸ್ಸುಗಳೂ ದರ್ಪ ಬಲ ಅಧಿಕಾರಗಳೂ ಲಭಿಸುತ್ತವೆ ಎಂದು ಹೇಳುತ್ತಿದೆ. "ನಾಯಮಾತ್ಮಾ ಬಲಹೀನೇನ ಲಭ್ಯಃ."

ದೇಶವು ಸರ್ವತೋಮುಖವಾಗಿ ಎಚ್ಚರಗೊಳ್ಳುತ್ತಿರುವ ಕಾಲವಿದು. ಎಲ್ಲೆಲ್ಲಿಯೂ ಎಲ್ಲ ಶಾಖೆಗಳಲ್ಲಿಯೂ ಕೆಲಸಗಾರರು ಬೇಕಾಗಿದ್ದಾರೆ. ಸಂಘಬದ್ಧರಾಗಿಯೋ, ಸಂಸ್ಥೆಗಳಿಗೆ ಸದಸ್ಯರಾಗಿಯೋ, ಅಥವಾ ವ್ಯಕ್ತಿಶಃವಾಗಿಯೋ ಎಲ್ಲರೂ ಕಾರ್ಯೋನ್ಮುಖರಾಗಬೇಕು. ಆ ಕಾರ್ಯಗಳ ರೀತಿ ನೀತಿ ವಲಯ ವಿಸ್ತಾರಗಳನ್ನು ಯಾರೊಬ್ಬರೂ ನಿಷ್ಕರ್ಷಿಸಿ ಹೇಳಲಾರರು. ಆಯಾ ಸನ್ನಿವೇಶಕ್ಕೆ ತಕ್ಕಂತೆ ಅವರವರ ಮನೋಧರ್ಮ ಆತ್ಮಾನುಭವ ಅಭಿರುಚಿ ಉದ್ದೇಶಗಳಿಗೆ ತಕ್ಕಂತೆ ಕಾರ್ಯಾರಂಭ ಮಾಡಬೇಕು. ಮೈಸೂರು ಪಟ್ಟಣದಲ್ಲಿರುವ ಯುವಕರು ಕೈಕೊಳ್ಳಬೇಕಾಗಿರುವ ಕಾರ್ಯದ ಸ್ವಭಾವ ರೀತಿ ನೀತಿ ವಲಯಗಳು ಶ್ರೀರಂಗಪಟ್ಟಣಕ್ಕೆ ಹೊಂದದಿರಬಹುದು; ಶ್ರೀರಂಗಪಟ್ಟಣಕ್ಕೆ ಹೊಂದುವ ಕಾರ್ಯಗಳು ಪಕ್ಕದ ಹಳ್ಳಿಗೆ ಹೊಂದದಿರಬಹುದು. ಹಳ್ಳಿಗಳಲ್ಲಿ ನೈರ್ಮಲ್ಯ ವಿದ್ಯಾಪ್ರಚಾರಗಳು ಬೇಕಾಗುವಂತೆ ಪಟ್ಟಣಗಳಲ್ಲಿ ಬಹುಶಃ ಅನೌದಾರ್ಯ ಮತಭ್ರಾಂತಿಗಳನ್ನು ಪರಿಹಾರಮಾಡುವ ಬೋಧಪ್ರದ ಕಾರ್ಯಗಳು ಬೇಕಾಗಬಹುದು. ಆದ್ದರಿಂದ ಮಿತ್ರರೇ, ನೂತನ ಭಾರತರಾಷ್ಟ್ರಭವನ ನಿರ್ಮಾಣಕಾರ್ಯದಲ್ಲಿ ನಮ್ಮಲ್ಲಿ ಪ್ರತಿಯೊಬ್ಬರಿಗೂ ಗೌರವಪೂರ್ಣವಾದ ಸ್ಥಾನವಿದೆ. ಪ್ರತಿಯೊಬ್ಬರ ಸಾಹಸಕ್ಕೂ ಅವಕಾಶವಿದೆ.

ಆದರೆ ಇಲ್ಲಿ ಒಂದು ಎಚ್ಚರಿಕೆಯ ಮಾತನ್ನು ಹೇಳಿ ಮುಂದುವರಿಯಬೇಕಾಗಿದೆ.

ನಮ್ಮಲ್ಲಿ ಅನೇಕರು ಸದ್ಯಃಫಲಾಕಾಂಕ್ಷಿಗಳು. ದೀರ್ಘಕಾಲ ಸಾಧನೆ ಮಾಡುವ ತಾಳ್ಮೆಯಿಲ್ಲ. ದೃಢಚಿತ್ತವಿಲ್ಲ. ಸತ್ಕರ್ಮ ಸತ್ಫಲವನ್ನು ತಂದೇ ತರುತ್ತದೆ ಎಂಬ ಶ್ರದ್ಧೆಯಿಲ್ಲ. ಗೀತೆಯಲ್ಲಿ ಶ್ರೀಕೃಷ್ಣನು "ಪಾರ್ಥ, ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ । ನಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ೬–೪೦. ಪೃಥಾ ನಂದನನೇ, ಇಹದಲ್ಲಿಯಾಗಲಿ ಪರದಲ್ಲಿಯಾಗಲಿ ಅವನಿಗೆ ವಿನಾಶವಿಲ್ಲ. ಎಳ್ಳನಿತಾದರೂ ಆಗಲಿ ಒಳ್ಳೆಯದನ್ನು ಮಾಡಿದವನಿಗೆ ದುರ್ಗತಿಯಿಲ್ಲ" ಎಂದು ಆಘೋಷಿಸಿದ್ದಾನೆ. ಮಹಾಫಲಕ್ಕೆ

ಹೆಚ್ಚು ಕಾಲವೂ ಹೆಚ್ಚು ಸಾಧನೆಯೂ ಬೇಕಾಗುತ್ತವೆ. ಆದ್ದರಿಂದ ಅಲ್ಪಕಾಲದಲ್ಲಿ ಫಲ ಲಭಿಸದಿದ್ದರೆ ಹತಾಶರಾಗದೆ ಮುಂದುವರಿಯುವ ಉಕ್ಕಿನಂತಹ ಚಿತ್ತದಾರ್ಢ್ಯವನ್ನು ನಾವು ಸಂಪಾದಿಸಬೇಕು. ನಮ್ಮ ಉತ್ಸಾಹ ಹುಲ್ಲಿನ ಬೆಂಕಿಯಾಗಬಾರದು; ಕಲ್ಲಿದ್ದಲ ಕಾವಾಗಬೇಕು.

ಸದ್ಯಃಫಲಾಕಾಂಕ್ಷೆಗಿಂತಲೂ ಕೀರ್ತಿಮೋಹದಿಂದ ಹೆಚ್ಚು ಅನಾಹುತವಾಗುತ್ತದೆ! 'ಕೀರ್ತಿ ಮಹಾಪುರುಷರಲ್ಲಿರುವ ಕಟ್ಟಕಡೆಯ ದೌರ್ಬಲ್ಯ' ಎಂಬುದಾಗಿ ಒಂದು ಸಂಭಾಷಿತವಿದೆ. ಮಹಾಪುರುಷರಾದವರೇ ಈ ಯಶೋಲೋಭಕ್ಕೊಳಗಾದ ಮೇಲೆ ಸಾಮಾನ್ಯರ ಗತಿಯೇನು? ಆದರೂ ಮಹಾಪುರುಷರಲ್ಲಿರುವ ದೌರ್ಬಲ್ಯವನ್ನು ಸಾಮಾನ್ಯರೂ ಪೋಷಿಸಬೇಕೆಂಬ ನಿಯಮವಿಲ್ಲ. ಮಹಾಪುರುಷರಿಗೆ ಬಂದೊದಗುವ ಕೀರ್ತಿಯ ಪ್ರಭಾವದಿಂದಲೇ ಅದರ ಲೋಭವನ್ನು ಗೆಲ್ಲಲು ಅವರಿಂದ ಸಾಧ್ಯವಾಗದಿರಬಹುದು. ನಮಗೆ ಅದರ ಅಭಾವವೇ ಅದರ ಲೋಭದಿಂದ ಪಾರಾಗಲು ಸಹಾಯವಾಗುತ್ತದೆ. ಮುಂದಿಯ ಕೈಚಪ್ಪಾಳೆ, ವೃತ್ತಪತ್ರಿಕೆಗಳ ಅಗ್ಗದ ಸ್ತುತಿ, ಬಿರುದು ಬಾವಲಿಗಳ ವ್ಯಾಮೋಹ ಇವುಗಳಿಗೆ ವಶನಾಗದೆ, ತಾನು ಹಿಡಿದ ಕೆಲಸವನ್ನು ಪಟ್ಟು ಹಿಡಿದು ನಿಶ್ಶಬ್ದವಾಗಿ ಮಾಡುವಾತನೇ ನಿಜವಾದ ಕರ್ಮಯೋಗಿ. ಸ್ವಾಮಿ ವಿವೇಕಾನಂದರು ಒಂದು ಕಡೆ ಈ ಅರ್ಥದ ಮಾತುಗಳನ್ನು ಹೇಳಿದ್ದಾರೆ: ಸಾವಿರಾರು ಜನರು ಸುತ್ತಲೂ ನೆರೆದು ಕರತಾಡನ ಮಾಡುವಾಗ, ಜಯಘೋಷದಿಂದ ಹುರಿದುಂಬಿಸುವಾಗ, ಸ್ಮಾರಕ ಸ್ತೂಪಗಳೂ ಜೀವನ ಚರಿತ್ರೆಗಳೂ ತನ್ನನ್ನು ಕೊಂಡಾಡುತ್ತವೆ ಎಂದು ಗೊತ್ತಾದಾಗ, ತನ್ನ ಮರಣವೇ ತನ್ನ ಯಶೋದುಂದುಭಿಯನ್ನು ಮೊಳಗುತ್ತದೆಂದು ತಿಳಿದಾಗ, ಯಾವ ಹೇಡಿ ತಾನೇ ಮುಂದುವರಿದು ರಣರಂಗದಲ್ಲಿ ಮಡಿಯಲಾರನು? ಯಾವ ಕ್ರಿಮಿ ತಾನೇ ಸಾಹಸಿಯಾಗಲಾರದು? ಆದರೆ ಕೀರ್ತಿಯ ಕಿರಣಮಾತ್ರವೂ ಪ್ರಕಾಶಿಸದಿರುವಾಗ, ಪ್ರಶಂಸೆ ಮಾಡುವವರಾಗಲಿ ಹುರಿದುಂಬಿಸುವವರಾಗಲಿ ಒಬ್ಬರೂ ಇಲ್ಲದಿರುವಾಗ, ಬಹುಕಾಲದ ಪ್ರಯತ್ನದಿಂದಲೂ ಕಾರ್ಯಸಿದ್ಧಿಯಾಗದಿರುವಾಗ, ದೃಢಚಿತ್ತನಾಗಿ, ಶ್ರದ್ಧಾನ್ವಿತನಾಗಿ, ಮೌನಿಯಾಗಿ, ಹಲ್ಲುಕಚ್ಚಿಕೊಂಡು, ಹಣೆ ಸುಕ್ಕಿಕೊಂಡು, ಬೆವರು ಸುರಿಸುತ್ತಾ, ನಸುಬಾಗಿ, ಕಟ್ಟಕಡೆಯ ಕಲ್ಯಾಣದಲ್ಲಿ ನೆಚ್ಚಿಟ್ಟುಕೊಂಡು, ಈಶ್ವರನನ್ನು ನೆನೆದು ಕರ್ಮಪರ್ವತವನ್ನೇರುವವನೇ ಮಹಾ ತಪಸ್ವಿ; ಅವನಿಗಿಂತಲೂ ಹೆಚ್ಚಾದ ವಿಭೂತಿಗಳಿನ್ನಿಲ್ಲ. ಅವನ ಹೆಸರು ಪತ್ರಿಕೆಗಳಿಗೆ ಗೊತ್ತಿಲ್ಲದಿರಬಹುದು; ಆದರೆ ಈಶ್ವರನ ದೃಷ್ಟಿಯಲ್ಲಿ ಅವನು ಅಗ್ರಗಣ್ಯನಾಗುತ್ತಾನೆ.

ಆದ್ದರಿಂದ ಪ್ರತಿಯೊಬ್ಬ ಯುವಕನೂ ಅಂತಿಮದ ಅನಂತ ಕಲ್ಯಾಣದಲ್ಲಿ ಶ್ರದ್ಧೆಯಿಟ್ಟು ಕಾರ್ಯರಂಗಕ್ಕಿಳಿಯಬೇಕು. ತಾನು ರಂಗಕ್ಕಿಳಿದೊಡನೆಯೇ ಜಗತ್ತು ಉದ್ಧಾರವಾಗುತ್ತದೆಂದಾಗಲಿ, ಲೋಕಲೋಚನವಲಯಕ್ಕೆ ತಾನು ಕೇಂದ್ರವಾಗುತ್ತೇನೆಂದಾಗಲಿ, ಶಾಂತಿ ಸ್ಥಾಪನೆಗಾಗಿ ಕೊಡುವ ನೋಬೆಲ್ ಬಹುಮಾನ ತನಗೇ ಬರುತ್ತದೆ ಎಂದಾಗಲಿ ಹೊಂಗನಸುಗಳನ್ನೂ ಆಕಾಶ ಗೋಪುರಗಳನ್ನೂ ಕಟ್ಟಬಾರದು.

ಇನ್ನು ನನಗೆ ಅತ್ಯಂತ ಪ್ರಿಯತಮವಾದ ಒಂದೆರಡು ವಿಷಯಗಳನ್ನು ಕುರಿತು ಪ್ರಸ್ತಾಪಿಸಿ ಉಪನ್ಯಾಸವನ್ನು ಕೊನೆಗಾಣಿಸುತ್ತೇನೆ. ಆ ವಿಷಯಗಳು ನಿಮ್ಮೆಲ್ಲರಿಗೂ ಕೂಡ ಪ್ರಿಯವಾಗಿರುತ್ತವೆ ಎನ್ನುವುದರಲ್ಲಿ ನನಗೆ ಸಂದೇಹವಿಲ್ಲ.

ಯುವಕರು ಕೈಕೊಳ್ಳಬೇಕಾಗಿರುವ ಅನೇಕ ಉದ್ಯಮಗಳಲ್ಲಿ ಭಾಷೆಯ ಅಭ್ಯುದಯವೂ ಸಾಹಿತ್ಯ ನಿರ್ಮಾಣ ಮತ್ತು ಪ್ರಚಾರಗಳೂ ಗಣ್ಯವಾಗಿವೆ. ಹಿಂದಿ, ಲ್ಯಾಟಿನ್, ಗ್ರೀಕ್, ಸಂಸ್ಕೃತ, ತೆಲುಗುಗಳನ್ನಲ್ಲ ನಾನು ಹೇಳುತ್ತಿರುವುದು; ಕನ್ನಡದ ಭಾಷೆ, ಕನ್ನಡ ಸಾಹಿತ್ಯ! ನಮ್ಮ ಮಾತೃಭಾಷೆ ಮತ್ತು ಅದರ ಸಾಹಿತ್ಯ!

ಜನಜೀವನವನ್ನು ಎಚ್ಚರಿಸುವ ತೂರ್ಯಧ್ವನಿ ಸಾಹಿತ್ಯದಿಂದ ಬರುತ್ತದೆ. ಸಾಹಿತ್ಯ ಜನಜೀವನದ ಇಂದಿನ ಸ್ಥಿತಿಯನ್ನು ವರ್ಣಿಸಿ, ಮುಂದಿನ ಗತಿಯನ್ನು ನಿರ್ಣಯಿಸುತ್ತದೆ. ಕೃತವಿದ್ಯರಾದ ಯುವಕರು ತಮ್ಮ ಆಶೆ ಆಕಾಂಕ್ಷೆಗಳನ್ನು ಬರೆದು ಓದಿ, ಮತ್ತೆ ಮತ್ತೆ ಹೇಳಿ ಹೇಳಿ, ಜನರ ಹೃದಯಗಳಲ್ಲಿ ಕಿಡಿಗಳನ್ನು ಬಿತ್ತಬೇಕು. ಈಗಾಗಲೇ ನಮ್ಮ ನಾಡಿನ ಜೀವನ ಕೃತ್ತಿಕಾದೀಪೋತ್ಸವದಂತೆ ಸಾವಿರಾರು ಸೊಡರ್ಮಾಲೆಗಳಾಗಿ ಉರಿಯುತ್ತಿರುವ ಮನೋಹರ ಭವ್ಯ ದೃಶ್ಯ ಕಂಗೊಳಿಸುತ್ತಿದೆ. ಎಲ್ಲೆಲ್ಲಿಯೂ ಕರ್ಣಾಟಕ ಸಂಘಗಳೇಳುತ್ತಿವೆ; ಕನ್ನಡದ ಪುನರುಜ್ಜೀವನಕ್ಕಾಗಿಯೂ ಉದ್ಧಾರಕ್ಕಾಗಿಯೂ ದೀಕ್ಷೆ ತೊಟ್ಟು ಸೊಂಟಕಟ್ಟಿ ಕಂಕಣಬದ್ಧರಾಗಿರುವ ಅನೇಕ ಪ್ರತಿಭಾಸಂಪನ್ನರಾದ ಮಹನೀಯರು ಕರ್ಣಾಟಕದಲ್ಲೆಲ್ಲ ಸಂಚರಿಸಿ ಹಣತೆಗಳನ್ನು ಹೊತ್ತಿಸುತ್ತಿದ್ದಾರೆ: ಕೇಂದ್ರಸಂಸ್ಥೆಯಾಗಿರುವ ಸಾಹಿತ್ಯಪರಿಷತ್ತು ತನ್ನ ಕೈಯಲ್ಲಾದಮಟ್ಟಿಗೆ, ಹುರುಪಿನಿಂದ ಕಾರ್ಯಸಾಧನೆ ಮಾಡುತ್ತಿದೆ; ವಿದ್ಯಾಭ್ಯಾಸದ ಇಲಾಖೆ ಕನ್ನಡದಲ್ಲಿಯೇ ಪಾಠ ಹೇಳುವ ಏರ್ಪಾಡು ಮಾಡುತ್ತಿದೆ; ವಿಶ್ವವಿದ್ಯಾನಿಲಯ ಕನ್ನಡಗ್ರಂಥ ಪ್ರಕಟನೆಗಳಿಂದ ತನ್ನ ಭಾಗದ ತೈಲವನ್ನು ಹೊಯ್ದು ಉರಿಯನ್ನು ಪೋಷಿಸುತ್ತಿದೆ. ಇಂತಹ ಮಹಾಸಾಹಿತ್ಯ ದೀಪೋತ್ಸವದಲ್ಲಿ ನಾವೆಲ್ಲರೂ ಉತ್ಸಾಹದಿಂದ ಭಾಗಿ

ಗಳಾಗದಿದ್ದರೆ, ಅದು ನಮ್ಮೆದೆಯ ಕಗ್ಗವಿಯ ಗಾಢಾಂಧಕಾರವನ್ನು ಮಾತ್ರ ಸೂಚಿಸುತ್ತದೆ. ಇಲ್ಲಿ ನೆರೆದಿರುವವರಲ್ಲಿ ಯಾರ ಹೃದಯದಲ್ಲಿಯೂ ಅಂತಹ ಕಗ್ಗತ್ತಲಿಲ್ಲವೆಂದು ದೃಢವಾಗಿ ನಂಬುತ್ತೇನೆ.

ಮಹನೀಯರೇ, ಮತ್ತೊಮ್ಮೆ ಹೇಳುತ್ತೇನೆ. ಮೇಲೆ ಹೇಳಿದಂತೆ ಜೀವನದಲ್ಲಿ ಮುಂಬರಿಯಬೇಕಾದರೆ ನಮ್ಮ ಹೃದಯದಲ್ಲಿ ಒಂದು ಶಕ್ತಿಯ ನಿಧಿಯನ್ನು ಶೇಖರಿಸಬೇಕು; ನಮ್ಮ ಆತ್ಮ ಓಜಸ್ವಿಯಾಗಬೇಕು; ನಾವೆಲ್ಲರೂ 'ನಿರಂಕುಶಮತಿ' ಗಳಾಗಿ 'ದರ್ಶನ' ದ್ರಷ್ಟರಾಗಬೇಕು. ಧ್ಯಾನಮಯ ನಿರ್ಮಲ ಜೀವನದಿಂದ ಅಂತಹ ಓಜಸ್ಸು ಲಭಿಸುತ್ತದೆ. ಪುಣ್ಯಜೀವನವೇ ಪಾವನ ತಪಸ್ಸು.

ನಮ್ಮೆಲ್ಲರ ದಿವ್ಯ 'ದರ್ಶನ' ಕ್ಕೆ ಈ ಮಹಾಮಂತ್ರಗಳು ಅಡಿಗಲ್ಲುಗಳಾಗಿರಲಿ:

"ಏಕಂ ಸತ್ ವಿಪ್ರಾ ಬಹುಧಾ ವದಂತಿ."

ಇರುವುದೊಂದೇ ಸತ್ಯ; ತಿಳಿದವರು ಬೇರೆ ಬೇರೆ ರೀತಿಯಿಂದ ಹೇಳುತ್ತಾರೆ.

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಂ ॥

ಚರಾಚರ ಜಗತ್ತೆಲ್ಲವನ್ನೂ ಈಶ್ವರನಿಂದ ಆವರಿಸು, ತ್ಯಾಗದಿಂದ ಅದನ್ನು ಆಸ್ವಾದಿಸು. ಇತರರ ಸಿರಿಗೆ ಆಳುಪದಿರು.

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ॥
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥

ಒಂದು ಶತಮಾನ ಬಾಳಬೇಕೆಂದು ಇಚ್ಛಿಸುವಾತನು ಕರ್ಮ ಮಾಡುತ್ತಲೇ ಬಾಳಬೇಕು. ಹಾಗೆ (ಜಗತ್ತೆಲ್ಲವನ್ನೂ ಈಶ್ವರನಿಂದ ಆವರಿಸಿ) ಬಾಳಿದರೆ ಕರ್ಮಲೇಪನವಿಲ್ಲ.

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ!
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।
ಸ್ಥಿರೈರಂಗೈಸ್ತುಷ್ಟುವಾಂ ಸಸ್ತನೂಭಿಃ ।
ವ್ಯಶೇಮ ದೇವಹಿತಂ ಯದಾಯುಃ ॥

ಶುಭವಾದುದನ್ನೇ ನಮ್ಮ ಕಿವಿಯಾಲಿಸಲಿ. ಪೂಜಾರ್ಹವಾಗಿ ಮಂಗಳವಾದುದನ್ನೇ ನಮ್ಮ ಕಣ್ಣು ನೋಡಲಿ. ದೃಢದೇಹದಿಂದಲೂ ಆನಂದದಿಂದಲೂ ಜೀವಮಾನ ದೇವಹಿತವಾಗಿ ಸಾಗಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

## ಅಭ್ಯಾಸ

### ೧. ಕಠಿಣ ಶಬ್ದಗಳ ಅರ್ಥ:—

ಲವಲೇಶ—ಸ್ವಲ್ಪವೂ. ಅನುದಾರತೆ—ಉದಾರತೆಯಿಲ್ಲದ್ದು. ಮಂಥನ—ಆಲೋಚನೆ. ಪ್ರಶಾಂತ—ಶಾಂತವಾದ. ಜನ್ಯ—ಹುಟ್ಟಿದ. ಸಾತ್ತ್ವಿಕ—ಶಾಂತ, ಶಾಂತ ಬುದ್ಧಿಯ ಮತ್ತು ನಿರ್ಮಲ ಮನಸ್ಸಿನ. ಉಚ್ಚಾಟ್ರಯ—ಮೇಲು, ಉತ್ತಮ. ಜಿಜ್ಞಾಸೆ—ವಿವೇಚನೆ, ಪರೀಕ್ಷೆ, ವಿಮರ್ಶೆ. ಪಚನ—ಜೀರ್ಣ, ಅರಗುವುದು. ಸ್ವಚ್ಛಂದ—ಮನಸ್ಸಿಗೆ ಬಂದಂತೆ ಮಾಡುವುದು. ಮಂಡಿಸು—ಕುಳಿತುಕೊ. ತೊತ್ತು—ಆಳು, ಸೇವಕ. ಸಮಷ್ಟಿ—ಸಮೂಹ. ವಿಭೂತಿ—ಮಹಾಪುರುಷ, ಶ್ರೇಷ್ಠವ್ಯಕ್ತಿ, ವಿಶೇಷವಾಗಿ ಆಗು. ಅರಣ್ಯ ರೋದನ—ಕಾಡಿನಲ್ಲಿ ಅಳುವುದು, ವ್ಯರ್ಥವಾಗಿ ಅಳುವುದು. ಸನಾತನ—ಪೂರ್ವಕಾಲದ, ಪ್ರಾಚೀನ. ಚಿರಂತನ—ಶಾಶ್ವತವಾದ, ಪ್ರಾಚೀನವಾದ. ಚಿರನವೀನ—ಎಂದೆಂದಿಗೂ ಹೊಸದಾದ. ಮನುಸ್ಮೃತಿ—ಮನುಷ್ಯರ ಮೂಲಪುರುಷನಾದ, ಮನು ಎಂಬ ಬ್ರಹ್ಮನ ಮಗ ಮಾಡಿದ ನ್ಯಾಯ ಸೂತ್ರ. ಪಾಷಂಡಿ—ಸಂಪ್ರದಾಯ ಬಾಹಿರ. ಸಲಿಲ ಸ್ರೋತ—ನೀರಿನ ಪ್ರವಾಹ. ಪರ್ಜನ್ಯ ಜಪ—ಮಳೆ ಬರಲೆಂದು ಮಾಡುವ ಜಪ. ಕೃತವಿದ್ಯ—ವಿದ್ಯಾವಂತ, ವಿದ್ಯೆಯಲ್ಲಿ ಯಶಸ್ವಿಯಾದವನು. ಜೀವನ—ನೀರು, ಬದುಕು. ಸಂಪ್ರೋಕ್ಷಣೆ—ತೀರ್ಥ ತೆಗೆದುಕೊಳ್ಳುವುದು. ಸ್ಪೃಶ್ಯ—ಮುಟ್ಟುವುದಕ್ಕೆ ಯೋಗ್ಯವಾದ, ಮೇಲು ಜಾತಿಯ. ದರ್ಶನ—ತತ್ತ್ವ, ದೃಷ್ಟಿ, ನೋಟ. ಪ್ರತಿಭಾ—ಅತಿಶಯಬುದ್ಧಿ, ಶಕ್ತಿ, ಸಾಮರ್ಥ್ಯ. ಇತಿ ವಿಧಿ—ಇಂಥ ವಿಧಿ. ಉತ್ಪತ್ತಿಕಾರಕ—ಹೊಸದಾಗಿ ಹುಟ್ಟಿಸುವಂಥದು. ಮಾಯಾಸ್ಮಿತರುಚಿ—ಮರುಳುಗೊಳಿಸುವ ಮುಗುಳುನಗು. ಆಧಿಭೌತಿಕ—ಅಧಿಭೂತವಾದ, ಭೂತದಿಂದ ಹುಟ್ಟಿದ. ದುರ್ವ್ಯಯ—ವ್ಯರ್ಥವಾಗಿ ಹಾಳಾಗುವುದು. ಚತುಷ್ಪಾದಿ—ನಾಲ್ಕು ಕಾಲಿನ ಪ್ರಾಣಿ. ಓಲಗಿಸು—ಸೇವಿಸು. • ಮೂಲಗಿಸಿ—ಶುಶ್ರೂಷೆಮಾಡಿ. ವಲಯ—ಪ್ರದೇಶ. ಯಾತನೆ—ನೋವು. ನಾಯಮಾತ್ಮಾ ಬಲಹೀನೇನ ಲಭ್ಯಃ—ಆತ್ಮ ಬಲಹೀನನಿಗೆ ಲಭಿಸಲಾರದು. ಸದ್ಯಃಫಲಾಕಾಂಕ್ಷಿ—ಕೂಡಲೇ ಫಲಕ್ಕೆ ಆಶಿಸುವವನು. ಯಶೋಲೋಭ—ಕೀರ್ತಿಗಾಗಿ ಆಶೆ. ಕರ್ಮಯೋಗಿ—ಕೆಲಸದಲ್ಲಿ ಮಾತ್ರ ಸದಾ ನಿರತನಾದವನು. ಕರತಾಡನ—ಕೈಚಪ್ಪಾಳೆ. ಸ್ತೂಪ—ಗೋಪುರ. ಯಶೋದುಂದುಭಿ—ಕೀರ್ತಿಯ ಭೇರಿ. ಲೋಕಲೋಚನ ವಲಯ—ಪ್ರಪಂಚದ ದೃಷ್ಟಿಗೆ ಗೋಚರವಾದ, ಸರ್ವ ಜನರ ದೃಷ್ಟಿಗೆ ಕೇಂದ್ರವಾದ. ಹೊಂಗನಸು—ಚಿನ್ನದ ಕನಸು. ತೂರ್ಯಧ್ವನಿ—ವಾದ್ಯಧ್ವನಿ. ಕೃತ್ತಿಕಾ ದೀಪೋತ್ಸವ—ಕಾರ್ತೀಕ ಮಾಸದಲ್ಲಿ ನಡೆಯುವ ಹಬ್ಬ. 'ದರ್ಶನ' ದ್ರಷ್ಟೃ—ತತ್ತ್ವವನ್ನು ಕಾಣುವುದು. ಓಜಸ್ಸು—ಕಾಂತಿ, ಶಕ್ತಿ. ಅಳುಪು—ಆಶಿಸು. ನೋಬೆಲ್ ಬಹುಮಾನ—ನೋಬೆಲ್ ಆಲ್‌ಫ್ರೆಡ್ ಬರ್ನ್‌ಹಾರ್ಡ್ (೧೮೩೩–೧೮೯೬) ಎಂಬ ಸ್ವೀಡನ್ ದೇಶದ ವಿಜ್ಞಾನಿಯ ಹೆಸರಿನ ಮೇಲೆ ಕೊಡುವ ಬಹುಮಾನ. ನೋಬಲ್ ಎಂಬಾತನು ಒಂದು ಸಂಸ್ಥೆಯನ್ನು ಸ್ಥಾಪಿಸಿ ತನ್ನ ಅಪಾರವಾದ ಆಸ್ತಿಯನ್ನು ಅದಕ್ಕೆ ಕೊಟ್ಟು ತೀರಿಕೊಂಡ. ಅನಂತರ ನೋಬಲ್ ಸಂಸ್ಥೆಯವರು ಅವನ ಹೆಸರಿನ ಮೇಲೆ ಪ್ರತಿ ವರ್ಷವೂ ಭೌತಶಾಸ್ತ್ರ,

ರಸಾಯನಶಾಸ್ತ್ರ, ಪ್ರಾಣಿದೇಹವಿಜ್ಞಾನ ಅಥವಾ ಔಷಧಿ, ಸಾಹಿತ್ಯ ಮತ್ತು ಶಾಂತಿ— ಈ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಮಹಾಪುರುಷರಿಗೆ ನೋಬಲ್ ಬಹುಮಾನವನ್ನು ಕೊಡುತ್ತಾರೆ. ೧೯೦೧ ರಿಂದ ಈ ಬಹುಮಾನ ಕೊಡುವುದು ಪ್ರಾರಂಭವಾಯಿತು. ಈ ಬಹುಮಾನಕ್ಕೆ ಎಲ್ಲ ದೇಶ ಮತ್ತು ಎಲ್ಲ ಜನಾಂಗದವರೂ ಅರ್ಹರು ಮತ್ತು ಲಿಂಗ ಭೇದವಿಲ್ಲ. ಸರ್ ಸಿ. ವಿ. ರಾಮನ್ನರಿಗೆ ಈ ಬಹುಮಾನ ಬಂದಿದೆ.

**೨. ಇವುಗಳಿಗೆ ಸಂದರ್ಭೋಚಿತವಾದ ಟಿಪ್ಪಣಿ ಬರೆಯಿರಿ :—**

೧. ಮತಿ ಮಾನವನ ಸರ್ವೋತ್ಕೃಷ್ಟವಾದ ಆಯುಧ.

೨. ಮೌಢ್ಯವೇ ಈಶ್ವರ ನಿಂದೆ.

೩. ನಾನು ನೋವಿಗೆ ಹೆದರಿ ವಾಪಸು ತೆಗೆದುಕೊಂಡರೇನಾಯಿತು ?

೪. ಗುಡಿಯ ಕಲ್ಲಿನಲ್ಲಿ ದೇವರಿದ್ದಾನೆಂಬ ಭ್ರಾಂತಿ ನಿಮಗೇಕೆ ?

೫. ನಿರಂಕುಶಮತಿಗಳಾಗಬೇಕಾದರೆ ದಾಸ್ಯಬುದ್ಧಿ ತೊಲಗಬೇಕು.

೬. ನಮ್ಮ ಉತ್ಸಾಹ ಹುಲ್ಲಿನ ಬೆಂಕಿಯಾಗಬಾರದು; ಕಲ್ಲಿದ್ದಲ ಕಾವಾಗ ಬೇಕು.

೭. ಜನಜೀವನವನ್ನು ಎಚ್ಚರಿಸುವ ತೂರ್ಯಧ್ವನಿ ಸಾಹಿತ್ಯದಿಂದ ಬರುತ್ತದೆ.

೮. ಪುಣ್ಯ ಜೀವನವೇ ಪಾವನ ತಪಸ್ಸು.

೯. ಮತಿಯನ್ನು ತಿರಸ್ಕರಿಸಿದರೆ ಈಶ್ವರನ ಜ್ಯೋತಿಯನ್ನು ತಿರಸ್ಕರಿಸಿದಂತಾ ಗುತ್ತದೆ.

೧೦. ಆಗಿನ ಮನು ಪವಿತ್ರನಾದರೆ ಈಗಿನ ಮಹಾತ್ಮ ಗಾಂಧಿ ಪವಿತ್ರನಲ್ಲವೆ ?

೧೧. ಉದ್ದೇಶ ಎಷ್ಟೇ ಶ್ಲಾಘ್ಯವಾಗಲಿ, ಅದು ತಿಳಿವಳಿಕೆಯಿಂದ ಕೂಡಿರದಿದ್ದರೆ ಅಪಾಯವಾಗುತ್ತದೆ.

೧೨. ಸಾಹಿತ್ಯ ಜನಜೀವನದ ಇಂದಿನ ಸ್ಥಿತಿಯನ್ನು ವರ್ಣಿಸಿ ಮುಂದಿನ ಗತಿ ಯನ್ನು ನಿರ್ಣಯಿಸುತ್ತದೆ.

**೩. ಪ್ರಶ್ನೆಗಳು :—**

೧. ಮತಿಯನ್ನು ನಿಸ್ತೇಜಗೈದಿರುವ ಅಂಕುಶಗಳು ಯಾವುವು ?

೨. ಮತ ಮತ್ತು ಮೂಢನಂಬಿಕೆಗಳ ವಿಷಯವಾಗಿ ಲೇಖಕರ ಅಭಿಪ್ರಾಯ ವೇನು ?

೩. ನಿರಂಕುಶಮತಿ ಎಂದರೆ ಏನು ? ನಿರಂಕುಶಮತಿಯಾಗುವುದು ಹೇಗೆಂಬು ದನ್ನು ವಿವರಿಸಿ.

೪. ಯುವಕರು ನಿರಂಕುಶಮತಿಯಿಂದ ಆತ್ಮಶ್ರೀಯನ್ನು ಹೇಗೆ ಸಾಧಿಸ ಬಹುದು ?

# ತಾರೆಗಳು

## ತೀ. ನಂ. ಶ್ರೀಕಂಠಯ್ಯ

ತೀ. ನಂ. ಶ್ರೀಕಂಠಯ್ಯನವರು ೨೬–೧೧–೧೯೦೬ರಲ್ಲಿ ಚಿಕ್ಕನಾಯಕನ ಹಳ್ಳಿ ತಾಲ್ಲೂಕು ತೀರ್ಥಪುರದಲ್ಲಿ ಹುಟ್ಟಿದರು. ಕನ್ನಡ, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಅಪಾರವಾದ ಪಾಂಡಿತ್ಯವನ್ನು ಸಂಪಾದಿಸಿರುವುದರ ಜೊತೆಗೆ, ಭಾಷಾಶಾಸ್ತ್ರದಲ್ಲಿ ಪೂರ್ಣ ವಿದ್ವತ್ತನ್ನು ಗಳಿಸಿದ್ದಾರೆ. ಅವರ ಜ್ಞಾನ ಸಂಪತ್ತನ್ನೂ ಲೋಕಾನುಭವವನ್ನೂ ಮೆಚ್ಚಿ ಮೈಸೂರು ಸರ್ಕಾರ ಹಿಂದೆಯೇ ಅವರನ್ನು ಸಿವಿಲ್ ಸರ್ವಿಸ್ಸಿಗೆ ನೇಮಕಮಾಡಿತು. ಆದರೆ ತೀ. ನಂ. ಶ್ರೀ ಯವರು ಅದನ್ನು ತ್ಯಜಿಸಿ, ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿ ನಿಂತರು. ಅವರ ವಿದ್ವತ್ತಿನಂತೆ ಅವರ ವಾಗ್ಮಿತೆಯೂ ಸ್ತುತ್ಯರ್ಹವಾದುದು.

ಅವರ ಕವನಸಂಗ್ರಹವಾದ ‘ಒಲುಮೆ’ ಅವರ ಕವಿತಾಶಕ್ತಿಗೂ, ‘ಕಾವ್ಯ ಸಮೀಕ್ಷೆ’ ಅವರ ರಸಪೂರ್ಣವಾದ ವಿಮರ್ಶನ ಸಾಮರ್ಥ್ಯಕ್ಕೂ, ‘ಭಾರತೀಯ ಕಾವ್ಯಮೀಮಾಂಸೆ’ ಅವರ ಅಪಾರವೂ ಆಳವೂ ಆದ ವಿದ್ವತ್ತಿಗೂ, ‘ಗದಾ ಯುದ್ಧಸಂಗ್ರಹ’ ಮತ್ತು ‘ನಂಬಿಯಣ್ಣನ ರಗಳೆ’ ಅವರ ಪಾಂಡಿತ್ಯಕ್ಕೂ ಪ್ರತಿಭೆಗೂ ಸಾಕ್ಷಿಯಾಗಿವೆ. ಭಾಷಾಸಂಬಂಧವಾದ ಅವರ ಹಲವಾರು ಲೇಖನ ಗಳು ಅವರ ವಿಚಾರ ಪ್ರಖರತೆಗೆ ನಿದರ್ಶನವಾಗಿವೆ.

ತೀ. ನಂ. ಶ್ರೀಯವರು ಇದೇ ತಾನೆ ವಿದೇಶಯಾತ್ರೆಯಿಂದ ಹಿಂದಿರುಗಿ ದ್ದಾರೆ. ಭಾಷಾಶಾಸ್ತ್ರವನ್ನು ಅಧ್ಯಯನಮಾಡಿ ಬಂದಿದ್ದಾರೆ. ಅವರು ಕರ್ಣಾಟಕ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದು ಈಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ.

‘ತಾರೆಗಳು’ ಎಂಬ ಈ ಪ್ರಬಂಧವನ್ನು ‘ಸುಳವು–ಹೊಳವು’ ಎಂಬ ಪ್ರಬಂಧ ಸಂಗ್ರಹದಿಂದ ಆರಿಸಿಕೊಂಡಿದೆ.

‘ತಟಿದ್ವಾ ತಾರಾ ವಾ ಕನಕಲತಿಕಾ ವಾ ಕಿಮಬಲಾ’ ಎಂದು ಮುಗಿಯುವ ಪದ್ಯವೊಂದು ಸಂಸ್ಕೃತದಲ್ಲಿದೆ. ಅಬಲೆಯರನ್ನು ವರ್ಣಿಸುವ ಪದ್ಯಗಳು, ಕಾವ್ಯಗಳು ಸಂಸ್ಕೃತದಲ್ಲೂ ಅದರಿಂದ ಪುಷ್ಟವಾದ ದೇಶಭಾಷೆ ಗಳಲ್ಲೂ ಹೇರಳವಾಗಿ ಉಂಟು; ಈ ವಿಷಯವನ್ನು ಬಿಟ್ಟರೆ ಕವಿತೆಗೆ ಜೀವನವೇ ಸಾಗುವುದಿಲ್ಲವೋ ಎಂದು ಕೇಳುವಷ್ಟು ಮಟ್ಟಿಗೆ ಉಂಟು. ಆದರೆ ಅವುಗಳಲ್ಲಿ ಸಾಮಾನ್ಯವಾಗಿ ಕಾಣದಿರುವ ಒಂದು ಸೌಂದರ್ಯವು ಈ ಪದ್ಯದಲ್ಲಿರುವಂತೆ ತೋರುತ್ತದೆ. ಪದ್ಯದ ವಿಷಯವಾಗಲಿ ಅದನ್ನು ನಿರೂಪಿ

ಸುವ ರೀತಿಯಾಗಲಿ ಹೊಸದೇನೂ ಅಲ್ಲ. ತನ್ನ ಕಣ್ಣ ಮುಂದೆ ಸುಂದರಿಯೊಬ್ಬಳು ಹೊಳೆದಾಗ 'ಇದು ಇಂದುವೋ ಪದ್ಮವೋ ಕನ್ನಡಿಯೋ ಅಥವಾ ಮುಖವೋ? ಇವು ಕಮಲಗಳೋ ಮೀನುಗಳೋ ಮದನ ಬಾಣಗಳೋ ಅಥವಾ ಕಣ್ಣುಗಳೋ?' ಎಂದು ಮೊದಲಾಗಿ ಕೇಳುವ ಭ್ರಾಂತಿ ಹಿಂದೆ ಅನೇಕರಿಗೆ ಹುಟ್ಟಿದೆ; ಮುಂದೆಯೂ ಹುಟ್ಟತಕ್ಕದ್ದೇ. ಅದರಲ್ಲೇನೂ ಅತಿಶಯವಿಲ್ಲ. ಈ ಪದ್ಯದ ಅತಿಶಯವೆಲ್ಲಾ ಅದರ ಕೊನೆಯ ಪಾದದಲ್ಲಿ ಅಡಗಿದೆ: 'ಇದು ಮಿಂಚೋ ತಾರೆಯೋ ಕನಕಲತೆಯೋ ಅಥವಾ ಅಬಲೆಯೋ?'—ಅಬಲೆಯನ್ನು ತಾರೆಯೆಂದು ಭ್ರಮಿಸಿದವನು ಈ ಕವಿಯೊಬ್ಬನೇ. ಏನು ಸುಂದರವಾದ ಕಲ್ಪನೆ! ಎಷ್ಟು ಗಂಭೀರವಾದ ಹೋಲಿಕೆ!

ಪಶ್ಚಿಮಗಗನದಲ್ಲಿ ಸಂಜೆಗೆಂಪು ಒಂದೊಂದು ಸಲ ಬಲು ಬೇಗ ಆರಿ ಹೋಗುತ್ತದೆ. ಮೇಘಗಳು ಯಾವಾಗಲೋ ಮರೆಯಾಗಿರುತ್ತವೆ. ಆಕಾಶದಲ್ಲೆಲ್ಲಾ ಶುಭ್ರ ನೀಲ; ಮುಳುಗಿದ ಸೂರ್ಯನ ಕಿರಣಶೇಷದ ಬೆಳಕು ಪೂರ್ಣವಾಗಿ ಅಳಿಯದ ಅಗಾಧವಾದ ನೀಲ. ಅದರಲ್ಲಿ, ಕುದುರೆಯ ಮುಖದ ಮೇಲಿನ ಬಿಳಿಯ ಬಟ್ಟನಂತೆ ಒಂದೇ ಒಂದು ತಾರೆ ಮೂಡುತ್ತದೆ. ಆ ತಾರೆಯ ಮೇಲೆ ನೆಡುವ ನೋಟವನ್ನು ಸೆಳೆಯತಕ್ಕ ಬೇರೆ ಯಾವ ವಸ್ತು ಶಕಲವೂ ಆ ಅನಂತಾಕಾಶದಲ್ಲಿ ಸುಳಿಯುವುದಿಲ್ಲ. ಹೊರಗೆ ಬರಲು ಹಿಂಜರಿಯುವ, ಗುಂಪಿನೊಳಗೆ ಮರೆಯಾಗುವ ಆ ಕಿರಿಯ ತಾರೆಯನ್ನು ಒಮ್ಮೆಯಾದರೂ ಲೋಕದ ಗಮನಕ್ಕೆ ತರಬೇಕೆಂದೇ ಮಿಕ್ಕೆಲ್ಲ ವಸ್ತುಗಳೂ ಆಕಾಶರಂಗದಿಂದ ಜಾರಿಬಿಟ್ಟಿರುವಂತೆ ತೋರುತ್ತದೆ. ನೀಲಿಯ ತೆರೆಯ ಮೇಲಿನ ಈ ಬಿಳಿಯ ಚುಕ್ಕೆ ಆಕಾರದಲ್ಲಿ ಕಿರಿದಾಗಿದ್ದರೂ ನಮ್ಮ ಅಂತಃಕರಣವನ್ನೆಲ್ಲಾ ತುಂಬಿಕೊಳ್ಳುತ್ತದೆ. ಇಂಥ ತಾರೆಗೆ ನಲ್ಲೆಯನ್ನು ಹೋಲಿಸುವುದು ಎಷ್ಟು ಮರ್ಮಜ್ಞವಾದ ಉಪಮಾನ!

ಹೀಗಿದ್ದರೂ ನಮ್ಮ ಹಿಂದಿನ ಕವಿಗಳು ತಾರೆಗೆ ಅನ್ಯಾಯ ಮಾಡಿದ್ದಾರೆ. ಅದು ಅವರ ಎದುರಿಗೆ ಬಂದು ಚೀರಲಿಲ್ಲ; ಸಹಜ ಲಜ್ಜೆಯಿಂದ ಸ್ವಲ್ಪ ಹಿಂದೆ ನಿಂತಿತು. ಈ ಕಾರಣದಿಂದ ಅದನ್ನು ಅವರು ಉಪೇಕ್ಷಿಸಿ ಬಿಟ್ಟರು. ಎಲ್ಲೋ ಒಂದೊಂದು ಸಲ ರಮಣಿಯ ಕಣ್ಣುಗಳೊಂದಿಗೆ ಅದನ್ನು ತೂಗಿ ಅವರ ಕಣ್ಣೊರಸಿಬಿಟ್ಟರು. ಸಾಮಾನ್ಯವಾಗಿ, ತೋರಿದಕೂಡಲೆ ಬಯಲಾಗುವ ಮಿಂಚಿನ ಕ್ಷಣಿಕ ಸೌಂದರ್ಯದ ಮೇಲೆಯೇ ಅವರ ದೃಷ್ಟಿ; ಲೋಕದಲ್ಲೆಲ್ಲೂ ಇಲ್ಲದ ಚಿನ್ನದ ಬಳ್ಳಿಯ ಮೇಲೆಯೇ ಅವರ ಮೋಹ. ಸ್ಥಿರವಾದ ವಿಮಲ

ವಾವ ದಿವ್ಯವಾದ ತಾರೆಯ ಹೋಲಿಕೆಯನ್ನು ಸ್ತ್ರೀದೇಹಕ್ಕೆ ಕೊಟ್ಟು ಅದನ್ನು ಪವಿತ್ರಗೊಳಿಸುವ ಬಗೆ ಅವರಿಗೆ ಹೊಳೆಯಲಿಲ್ಲ. ಅವರಲ್ಲಿ ಒಬ್ಬನಿಗಾದರೂ ಅದು ಸ್ಫುರಿಸಿತಲ್ಲ!—ಇದಕ್ಕಾಗಿ ಸಂತೋಷಿಸೋಣ.

ಹೋಲಿಕೆಯ ಮಾತು ಹೋಗಲಿ; ತಾರೆಯ, ತಾರೆಗಳ ಸೌಂದರ್ಯ ವನ್ನಾದರೂ ನಮ್ಮವರು ಗಮನಿಸಿದ್ದಾರೆಯೆ? ಇಲ್ಲ, ಇಲ್ಲ; 'ಕಾ ನಿಶಾ ಶಶಿನಾ ವಿನಾ' (ಚಂದ್ರನಿಲ್ಲದೆ ಎಂಥ ರಾತ್ರಿ?)—ಬೆಳದಿಂಗಳೇನೋ ಸೊಗಸಾದದ್ದು. ಆದರೆ ಅದೇ ಜೀವನದ ಸುಖಸರ್ವಸ್ವವೆ? ಚಂದ್ರನಿಗೆ ನಮ್ಮವರು ಅತಿಪ್ರಾಶಸ್ತ್ಯವನ್ನು ಕೊಟ್ಟು ಅದನ್ನು ಕೊಬ್ಬಿಸಿಬಿಟ್ಟಿದ್ದಾರೆ. ಕಾವ್ಯಗಳಲ್ಲೆಲ್ಲಾ ಅವನ ಪ್ರತಾಪವೇ. ತಾರೆಯ ಮಾತನ್ನು ಒಂದು ವೇಳೆ ಎತ್ತಿದರೆ,—ಚಂದ್ರನೊಡನೆ ಹೋಲಿಸಿ ಅದನ್ನು ಹೀಯಾಳಿಸುವುದಕ್ಕೆ. ಚಂದ್ರನು ತಾರಾಮಂಡಲಕ್ಕೆಲ್ಲಾ ಒಡೆಯನೆಂದು ಸಾರುವುದಕ್ಕೆ. ಅದರಿಂದಲೇ ಅವನಿಗೆ ಅಷ್ಟು ಅಹಂಕಾರ! ವಿರಹಿಗಳನ್ನು ಕರುಣೆಯಿಲ್ಲದೆ ಉರಿಸುತ್ತಾನೆ. ಅಂತೂ, ಚಂದ್ರನ ಮೇಲಿನ ದುರಭಿಮಾನದಲ್ಲಿ ನಮ್ಮ ಕವಿಗಳ ಪ್ರಜ್ಞೆ ಮಂಕಾಗಿ ಹೋಗಿದೆ. ಇಲ್ಲದಿದ್ದರೆ, ಅಮಾವಾಸ್ಯೆಯ ರಾತ್ರಿಯಲ್ಲಿ ಅವರು ಆಕಾಶವನ್ನು ನಿರೀಕ್ಷಿಸಿ ಅದರ ಸೌಂದರ್ಯವನ್ನು ಸವಿಯದೆ, ಹೊಗಳದೆ ಬಿಡುತ್ತಿದ್ದರೆ?

ರಾತ್ರಿಯಲ್ಲಿ ಆಕಾಶವನ್ನು ನಿರೀಕ್ಷಿಸುವುದು ಈಚೀಚೆಗೆ ಒಂದು ಅಪೂರ್ವ ಭೋಗವಾಗಿ ಪರಿಣಮಿಸುತ್ತಿದೆ. ವಿದ್ಯುದ್ದೀಪಗಳು ಬೆಳಗುವ ಪಟ್ಟಣಗಳಂತೂ ಬೆಳದಿಂಗಳ ಸುಖವನ್ನು ಅನುಭವಿಸುವುದೇ ಅಸಾಧ್ಯ. (ಒಂದೊಂದು ಸಲ ದೀಪಗಳು ಥಟ್ಟನೆ ಆರಿಹೋದಾಗ ಹೊಸ ನಿಧಿ ಸಿಕ್ಕಿದಂತೆ ಮನಸ್ಸಿಗೆ ಅನ್ನಿಸುತ್ತದೆ.) ಇನ್ನು ತಾರೆಗಳ ಮಾತೇಕೆ? ಅನೇಕರು ಅವುಗಳನ್ನು ಚೆನ್ನಾಗಿ ನೋಡಿದ್ದಾರೆಯೋ ಇಲ್ಲವೋ, ಅದೂ ಸಂದೇಹವೇ. ಅವುಗಳನ್ನು ಮನದಣಿಯ ನೋಡಬೇಕಾದರೆ ಈಗ ಹಳ್ಳಿಗಳಿಗೆ ಹೋಗಬೇಕು; ಅದರಲ್ಲೂ ಮಾಳಿಗೆಮನೆಗಳಿರುವ ಹಳ್ಳಿಗಳಿಗೆ ಹೋಗಬೇಕು. ಬೇಸಗೆಯಲ್ಲಿ ಹಾಯಾಗಿ ಮನೆಯ ಮಾಳಿಗೆಯ ಮೇಲೆ ಅಂಗತ್ತನಾಗಿ ಮಲಗಿ ಅಮಾವಾಸ್ಯೆಯ ಆಕಾಶವನ್ನೆಲ್ಲಾ ಒಂದೇ ನೋಟದಲ್ಲಿ ನುಂಗಿಬಿಡುವ ಅದೃಷ್ಟವು ಎಲ್ಲರಿಗೂ ಲಭಿಸುವುದಿಲ್ಲ. ಆ ನೋಟದಲ್ಲಿ ಏನು ವೈವಿಧ್ಯ, ಏನು ಸ್ವಾರಸ್ಯ, ಏನು ಅದ್ಭುತ, ಏನು ವಿಭ್ರಮೆ! ಲೆಕ್ಕವಿಲ್ಲದಷ್ಟು ಬೆಳಕಿನ ಕಿಡಿಗಳು ಮಿನುಗಿ ಮಿನುಗಿ ಮಿನುಗುವುದನ್ನು ಎಷ್ಟು ಹೊತ್ತು ನೋಡಿದರೂ ತೃಪ್ತಿಯುಂಟಾದೀತೆ? ರಾತ್ರಿಯ ಬಹು ಭಾಗವು ಕಣ್ಣು ಮುಚ್ಚದೆಯೆ ಕಳೆದುಹೋಗುತ್ತದೆ. ಉತ್ತರದಲ್ಲಿ

ಸಪ್ತರ್ಷಿ ಮಂಡಲದ 'ಸ' ವೊತ್ತು ಗಡಿಯಾರದ ಘಂಟೆಯ ಮುಳ್ಳಿನಂತೆ ನಿಶ್ಚಲವಾಗಿ ತೋರಿ ಪರಿಭ್ರಮಿಸುತ್ತಿರುತ್ತದೆ. ಇತ್ತ ಪಶ್ಚಿಮದಲ್ಲಿ ಮೃಗಶಿರೆಯ ಮಂಡಲವು ಮೆಲ್ಲಮೆಲ್ಲಗೆ ಬೆಟ್ಟಗಳ ತುದಿಗೆ ಇಳಿಯುತ್ತಿರುತ್ತದೆ. ನೆತ್ತಿಯ ಕಡೆ ತೇಜಸ್ಸಿನ ಪುಂಜ: ಬಿಳಿಮುರಳ ದಿಣ್ಣೆಯಂತೆ ಗೋಚರಿಸುವ ಛಾಯಾ ಪಥ. ಎಲ್ಲೆಲ್ಲಿಯೂ ಹೂವೆರಚಿದಂತೆ ತಾರೆಗಳು; ಇಲ್ಲಿ ದಟ್ಟವಾಗಿ, ಅಲ್ಲಿ ವಿರಳ ವಾಗಿ, ಒಂದು ಕಣ್ಣು ಕುಕ್ಕುವಂತೆ ಮಿರುಗಿ, ಮತ್ತೊಂದು ಆಕಾಶದ ನೀಲದಲ್ಲಿ ಮಬ್ಬಾಗಿ ಕರಗಿ, ನೋಡುವವನ ಮುಗ್ಧಹೃದಯವನ್ನು ತಮ್ಮಲ್ಲಿಯೇ ಲಯ ಗೊಳಿಸುತ್ತವೆ. ವಿಶ್ವತೇಜಸ್ಸೇ ಅನಂತಾಕೃತಿಯನ್ನು ತಳೆದು ಪ್ರತ್ಯಕ್ಷವಾಗಿರು ತ್ತದೆ. ಈ ದಿವ್ಯದರ್ಶನದ ಎದುರಿಗೆ ಮನುಷ್ಯನ ಕ್ಷುದ್ರಭಾವಗಳು ದಹಿಸಿ ಹೋಗುವುದರಲ್ಲಿ ಏನಾಶ್ಚರ್ಯ!

## ಅ ಭ್ಯಾ ಸ

**೧. ಕಠಿಣ ಶಬ್ದಗಳ ಅರ್ಥ:—**

ಇಂದು—ಚಂದ್ರ. ನಲ್ಲೆ—ಪ್ರಿಯೆ. ಅಗಾಧ—ವಿಶಾಲವಾದ, ಆಳವಾದ. ಶಕಲ—ಚೂರು, ಭಾಗ. ಕನಕಲತೆ—ಚಿನ್ನದ ಬಳ್ಳಿ. ಅನಂತ—ಅಂತ್ಯವಿಲ್ಲದ. ಗಗನ—ಆಕಾಶ. ಅಬಲೆ—ಹೆಂಗಸು. ಮದನ—ಮನ್ಮಥ. ವಿಭ್ರಮ—ಸೌಂದರ್ಯ, ತಬ್ಬಿಬ್ಬಾಗುವುದು, ಕಕ್ಕಾಬಿಕ್ಕಿ. ಸಪ್ತರ್ಷಿ—ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಎಂಬ ಏಳು ಜನ ಋಷಿಗಳು. ಸ್ಫುರಿಸು—ಹೊಳೆ, ಭಾಸ ವಾಗು. ಪರಿಭ್ರಮಿಸು—ಸುತ್ತು. ಪುಂಜ—ಸಮೂಹ, ಗುಂಪು. ಛಾಯಾಪಥ—ಬೆಳಕಿನ ಮಾರ್ಗ. ಮೃಗಶಿರೆ—ಒಂದು ನಕ್ಷತ್ರ. ಲಯ—ನಾಶ. ತಳೆ—ಧರಿಸು. ಕ್ಷುದ್ರಭಾವ—ನೀಚಭಾವ. ದಹಿಸು—ಸುಡು.

**೨. ಇವುಗಳಿಗೆ ಸಂದರ್ಭೋಚಿತವಾದ ಟಿಪ್ಪಣಿ ಬರೆಯಿರಿ:—**

೧. ಲೋಕದಲ್ಲೆಲ್ಲೂ ಇಲ್ಲದ ಚಿನ್ನದ ಬಳ್ಳಿಯ ಮೇಲೆಯೇ ಅವರ ದೃಷ್ಟಿ.

೨. ಅವರಲ್ಲಿ ಒಬ್ಬನಿಗಾದರೂ ಸ್ಫುರಿಸಿತಲ್ಲ!

೩. ವಿರಹಿಗಳನ್ನು ಕರುಣೆಯಿಲ್ಲದೆ ಉರಿಸುತ್ತಾನೆ.

೪. ಇಂಥ ತಾರೆಗೆ ನಲ್ಲೆಯನ್ನು ಹೋಲಿಸುವುದು ಎಷ್ಟು ಮರ್ಮಜ್ಞವಾದ ಉಪಮಾನ!

೩. **ಪ್ರಶ್ನೆಗಳು :—**

೧. ತಾರೆಗಳನ್ನು ಕುರಿತ ಲೇಖಕರ ಭಾವವನ್ನು ವಿವರಿಸಿ.

೨. ನೀವು ತಾರೆಗಳನ್ನು ಮೆಚ್ಚುವಿರೊ ಅಥವಾ ಚಂದ್ರನನ್ನು ಮೆಚ್ಚುವಿರೊ ಎಂಬುದನ್ನು ಸಕಾರಣವಾಗಿ ಬರೆಯಿರಿ.

೩. 'ಈ ದಿವ್ಯದರ್ಶನದ ಎದುರಿಗೆ ಮನುಷ್ಯನ ಕ್ಷುದ್ರಭಾವಗಳು ದಹಿಸಿ ಹೋಗುವುದರಲ್ಲಿ ಏನಾಶ್ಚರ್ಯ'—ಈ ಹೇಳಿಕೆಯನ್ನು ಸಮರ್ಥಿಸಿ.

K. Shanthaveerappa.
III 'B'

# ಬಳ್ಳಿಗಾವಿ

ಎಸ್. ಎಸ್. ಮಾಳವಾಡ

ಎಸ್. ಎಸ್. ಮಾಳವಾಡರು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ. ಕನ್ನಡ ಭಾಷಾಸಾಹಿತ್ಯ ಸಂಸ್ಕೃತಿಗಳನ್ನು ಆಳವಾಗಿ ಅಭ್ಯಸಿಸಿ ಅಪಾರ ಪಾಂಡಿತ್ಯವನ್ನು ಸಂಪಾದಿಸಿದ್ದಾರೆ. ಕನ್ನಡಸಾಹಿತ್ಯ ಚರಿತ್ರೆಯ ಮೇಲೆ ತುಂಬ ಕೆಲಸಮಾಡಿದ್ದಾರೆ.

ಪ್ರಾಧ್ಯಾಪಕ ವೃತ್ತಿಯ ಜೊತೆಗೆ ಧಾರವಾಡದ ಕರ್ನಾಟಕ ಸಂಶೋಧನಾ ಸಂಸ್ಥೆಯ ಡೈರೆಕ್ಟರ್ ಪದವಿಯನ್ನೂ ವಹಿಸಿಕೊಂಡು ಕನ್ನಡ ಭಾಷಾಸಾಹಿತ್ಯ ಸಂಸ್ಕೃತಿಗಳ ಸಂಶೋಧನೆಯಲ್ಲಿ ನಿರತರಾಗಿದ್ದಾರೆ.

'ಬಳ್ಳಿಗಾವಿ' ಎಂಬ ಈ ಪ್ರಬಂಧವನ್ನು ಅವರ 'ಕರ್ನಾಟಕ ಸಾಹಿತ್ಯ-ಸಂಸ್ಕೃತಿ ದರ್ಶನ' ಎಂಬ ಗ್ರಂಥದಿಂದ ಆರಿಸಿಕೊಂಡಿದೆ.

ಬನವಾಸೆ ನಾಡು ಪ್ರಾಚೀನ ಕರ್ನಾಟಕದ ಉದ್ಯಾನವಾಗಿತ್ತು. ಬನವಾಸೆ ನಾಡಿನ ರಾಜಧಾನಿಯಾದ ಬಳ್ಳಿಗಾವಿಯು ಕನ್ನಡ ನಾಡದೇವಿಯ ಕುಂಕುಮ ತಿಲಕದಂತಿತ್ತು. ಬಳ್ಳಿಗಾವಿಯು ಈಗ ಮೈಸೂರು ಸಂಸ್ಥಾನದ ಶಿವಮೊಗ್ಗೆ ಜಿಲ್ಲೆಯ ಶಿಕಾರಿಪುರ ತಾಲೂಕಿನಲ್ಲಿ ಒಂದು ಹಳ್ಳಿಯಾಗಿದೆ. ಅದು ಶಾಸನಗಳಲ್ಲಿ ಬಲಿಪುರ, ಬಳ್ಳಿಪುರ, ಬಳ್ಳಿಗ್ರಾಮ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿದೆ. ಬಲಿರಾಕ್ಷಸನ ಸಂಬಂಧದಿಂದ ಬಲಿಪುರವೆಂಬ ಹೆಸರು ಬಂದಿದೆಯೆಂದು ಹೇಳಲಾಗುತ್ತಿದೆ. ಆದರೆ ಉದ್ಯಾನಗಳ ತವರೂರಾದ ಬನವಾಸೆಯ ರಾಜಧಾನಿಯಾಗಿ, ಬಳ್ಳಿಗಳಿಂದ ತುಂಬಿದ್ದರಿಂದ ಅದನ್ನು ಬಳ್ಳಿಗಳ ಗ್ರಾಮವೆಂದೂ ಕರೆಯಬಹುದಾಗಿದೆ. ಇದು ಪ್ರಾಚೀನ ಕನ್ನಡ ನಾಡಿನ ಕೈಪಿಡಿಯಂತಿದ್ದು ಕನ್ನಡರ ಸಂಸ್ಕೃತಿಯ ವೈಶಿಷ್ಟ್ಯದ ಗುರುತುಗಳಾದ ಗುಡಿ, ಕೆರೆ, ಉದ್ಯಾನಗಳಿಂದ ಈ ರಾಜಧಾನಿಯು ಸಮೃದ್ಧಿಯಾಗಿತ್ತು. ಈಗಲೂ ಕೂಡ ನಾವು ಇಲ್ಲಿ ಆ ಅವಶೇಷಗಳನ್ನು ಕಾಣುತ್ತೇವೆ. ಬನವಾಸೆ ನಾಡು ಶಾಸನಗಳಲ್ಲಿ ಬಹುವಿಧವಾಗಿ ವರ್ಣಿಸಲ್ಪಟ್ಟಿದೆ. ಅವುಗಳಲ್ಲಿ ಒಂದೆರಡು ಅವತರಣಿಕೆಗಳನ್ನು ಉದ್ಧರಿಸದೆ ಮುಂದೆ ಸಾಗಲಾರೆ.

ಇದು ಸುಖದಾಗರಂ ಸಿರಿಯ ಪುಟ್ಟಿದ ಸಾಗರಮಾರಯ್ಯಲ್ ಸಮು ।
ಭ್ಯುದಯದ ಗೊತ್ತು ಸತ್ಯದ ತವರ್ಮನೆ ಚಿತ್ತಜನಿರ್ಕೆದಾಣಮು ॥
ನ್ನದ ಯುವತೀ ಜನಂಗಳೆಜೀವಟ್ಟು ಬುಧಾಳಿಯ ಜನ್ಮ ಭೂಮಿಯೆಂ ।
ಬುದನೆನೆ ಶೋಭೆಯಂ ತಳೆದುದಿಂತನಿಶಂ ಬನವಾಸಿ ಮಂಡಲಂ ॥

(ದಾವಣಗೆರೆ ಶಾಸನ ೩೫)

ಫಲಭರದಿಂ ಮನಂಗೊಳಿಪ ಪೂಗವನಂ ವನದೊಳ್ ಸರೋಜಲಂ ।
ಜಲದ ಪೊನಲ್ಗಳಿಂ ಬೆಳೆದು ಕತ್ತಲಿಸಿರ್ಪೆಲೆವಳ್ಳಿ ಬಳ್ಳಿಗೊಂ ॥
ಡುಲಿವ ಪಿಕಂ ಪಿಕಧ್ವನಿಗಳಿಂ ನಲಿದಾಡುವನಂಗನಂಗನಾ ।
ಕುಲಮುದೆ ಲಕ್ಷ್ಮಿ ಲಕ್ಷ್ಮಿಗೆ ಸಮೃದ್ಧಿಕರಂ ಬನವಾಸೆ ದೇಶದೊಳ್ ॥

(ಸೊರಬದ ಶಾಸನ ೨೬೬)

ಇಂತಹ ನಾಡಿನ ರಾಜಧಾನಿಯು ರಸಿಕತೆಯ, ಸಂಪತ್ತಿನ, ವೈದುಷ್ಯದ, ಸದ್ಗುಣಗಳ ತವರೂರಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ.

ಬಳ್ಳಿಗಾವಿಯು ಅತಿ ಪ್ರಾಚೀನ ರಾಜಧಾನಿಯಾಗಿದೆ. ಇಲ್ಲಿ ಪಾಂಡವರಿಂದ ಪಂಚಲಿಂಗಗಳು ಸ್ಥಾಪಿಸಲ್ಪಟ್ಟವೆಂದು ಶಿಕಾರಿಪುರದ ೧೨೩ ನೆಯ ಶಾಸನದಲ್ಲಿ ಉಕ್ತವಾಗಿದೆ. ಹನ್ನೆರಡನೆಯ ಶತಮಾನದಲ್ಲಿಯಂತೂ ಈ ಪಟ್ಟಣವು ವಿಶೇಷವಾದ ಘನತೆಯನ್ನು ಪಡೆಯಿತು. ಆದರೆ ಅದಕ್ಕೆ ಮೊದಲು ಬಹುಕಾಲದಿಂದ ಸುಪ್ರಸಿದ್ಧ ರಾಜಧಾನಿಯಾಗಿರಬೇಕು. ಏಕೆಂದರೆ ಅದು ಹನ್ನೆರಡನೆಯ ಶತಮಾನದಲ್ಲಿ ಕೂಡ ಅನಾದಿ ರಾಜಧಾನಿಯೆಂದು ವರ್ಣಿಸಲ್ಪಟ್ಟಿದೆ. ಅಲ್ಲದೆ ಅದು ಪಟ್ಟಣಗಳ ತವರುಮನೆಯೆಂದೂ ಕರೆಯಲ್ಪಟ್ಟಿದೆ. ಇದು ರಾಜಧಾನಿಯಾಗಿರುವಂತೆ ಪ್ರಸಿದ್ಧ ಕ್ಷೇತ್ರವೂ ಅಹುದು. ಇದು ಪುರಿ, ಬ್ರಹ್ಮಪುರಿ ಮಠಗಳಿಂದ ತುಂಬಿಕೊಂಡು ಒಂದು ಪ್ರಸಿದ್ಧ ಧಾರ್ಮಿಕ ಕೇಂದ್ರವಾಗಿತ್ತೆಂದು ಶಿಲಾಶಾಸನಗಳಲ್ಲಿ ಉಕ್ತವಾಗಿದೆ. ಅತಿ ಪ್ರಾಚೀನವಾದ ರಾಜಧಾನಿ, ಧಾರ್ಮಿಕ ಕೇಂದ್ರ, ಕೆರೆ, ಉದ್ಯಾನಗಳ ನಿಸರ್ಗ ರಮಣೀಯತೆ ಇವುಗಳ ಮೂಲಕ ಬಳ್ಳಿಗಾವಿಯು ಕನ್ನಡಿಗರ ಅಭಿಮಾನದ ಸೊತ್ತಾಗಿದೆಯೆಂದು ಹೇಳಬಹುದು.

ಹನ್ನೆರಡನೆಯ ಶತಮಾನವು ಕರ್ನಾಟಕದ ಚರಿತ್ರೆಯಲ್ಲಿ ಒಂದು ವಿಪ್ಲವದ ಕಾಲ. ಧಾರ್ಮಿಕ, ರಾಜಕೀಯ ಚಟುವಟಿಕೆಗಳ ಕಾಲ. ಅಂತಹ ಕಾಲಕ್ಕೆ ಬಳ್ಳಿಗಾವಿಯು ಒಂದು ಪ್ರಸಿದ್ಧ ಕೇಂದ್ರವಾಗಿತ್ತು. ಆಗ ನಡೆದ ವೀರಶೈವ ಧಾರ್ಮಿಕ ಕ್ರಾಂತಿಯಲ್ಲಿ ಮೂರು ಕೇಂದ್ರಗಳು ಜನತೆಯನ್ನು ಆಕರ್ಷಿಸಿದವು. ಕರ್ಮಯೋಗಿಯಾದ ಸಿದ್ಧರಾಮನ ಸೊನ್ನಲಿಗೆ, ಭಕ್ತಿಯೋಗಿ ಬಸವಣ್ಣನ ಕಲ್ಯಾಣ, ಜ್ಞಾನಯೋಗಿ ಪ್ರಭುದೇವರ ಬಳ್ಳಿಗಾವಿ

ಇವೇ ಆ ಮೂರು ಕೇಂದ್ರಗಳು. ವೀರಶೈವ ವಿಭೂತಿಗಳಲ್ಲಿ ಮಹಾತೇಜಸ್ವಿಯಾದ ಪ್ರಭುದೇವನು ಬಳ್ಳಿಗಾವಿಯವನೆಂದು ಹೇಳಲಾಗುತ್ತದೆ. ಈ ಮಾತಿಗೆ ಪುಷ್ಟಿ ದೊರೆಯುವಂತೆ ಈಗ ಬಳ್ಳಿಗಾವಿಯಲ್ಲಿ ಪ್ರಭುದೇವರ ಗುಡಿಯೊಂದು ತೋರಿಸಲ್ಪಡುತ್ತದೆ. ಇಲ್ಲಿಂದ ಸ್ವಲ್ಪ ಅಂತರದಲ್ಲಿ ಅನಿಮಿಷಯ್ಯನ ಕೊಪ್ಪಳು ಇದೆ. (ಈ ಅನಿಮಿಷಯ್ಯನು ಪ್ರಭುದೇವನ ಗುರುವೆಂದು ನಂಬಲಾಗುತ್ತದೆ.) ಹಾಗೂ ಸಮೀಪದಲ್ಲಿಯೇ ಗೊಗ್ಗಯ್ಯನ ಚೌಕಿ, ಏಕಾಂತದ ರಾಮಯ್ಯನ ಗುಡ್ಡ ಇವುಗಳು ಇವೆ. ಇವೆಲ್ಲವುಗಳಿಂದ ಈ ಭಾಗವು ವೀರಶೈವ ಧಾರ್ಮಿಕ ಕ್ರಾಂತಿಯ ಕಾರ್ಯಕ್ಷೇತ್ರವಾಗಿತ್ತೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಈ ನಾಡಿನಲ್ಲಿ ಆಗ ವೀರಶೈವರ ಪ್ರಭಾವವು ಹೆಚ್ಚಾಗಿತ್ತೆಂದು ತಿಳಿಯಲಿಕ್ಕೆ ಅಡ್ಡಿ ಇಲ್ಲ. ಹದಿನಾಲ್ಕನೆಯ ಶತಮಾನದಲ್ಲಿ ಒಬ್ಬ ವೀರಶೈವನು ಲಿಂಗವಂತ ಧರ್ಮ ಪ್ರಸಾರಕ್ಕಾಗಿ ಮಕ್ಕಾದವರೆಗೆ ಹೋಗಿದ್ದನೆಂದೂ ಅವನ ಹೆಸರಿನಿಂದಲೇ ಇಲ್ಲಿ ಮಲೆಯ ಮಲ್ಲೇಶ್ವರಲಿಂಗ ಸ್ಥಾಪನೆಯಾಗಿದೆಯೆಂದೂ ಒಂದು ಆಖ್ಯಾಯಿಕೆ ಇದೆ. ಈ ಮಾತನ್ನು ಮ| ರಾ| ಶ್ರೀ ಸಿ. ಹಯವದನರಾಯರು ತಮ್ಮ ಮೈಸೂರ ಗ್ಯಾಜಿಟೀಯರದಲ್ಲಿ ಹೇಳಿದ್ದಾರೆ. ಮಹಾತೇಜಸ್ವಿ ವಿಭೂತಿಯಾದ ಪ್ರಭುದೇವನ ಸಂಬಂಧದಿಂದ ಈ ಪಟ್ಟಣವು ಕೀರ್ತಿಶಾಲಿಯಾಗಿದೆ. ಅಲ್ಲದೆ ವೀರ ವಿರಕ್ತೆಯೂ, ಮಹಿಳಾಪ್ರಪಂಚದ ಆದರ್ಶಳೂ ಆದ ಅಕ್ಕಮಹಾದೇವಿಯ ಸಂಬಂಧವೂ ಕೂಡ ಈ ಊರಿಗೆ ಇದೆ. ಈಗ ಬಳ್ಳಿಗಾವಿಯ ದೊಡ್ಡದಾರಿಯ ಮೇಲೆ ಕಮಲಗಂಗವ್ವನ ಗುಡಿಯೊಂದು ತೋರಿಸಲ್ಪಡುತ್ತದೆ. ಅಕ್ಕ ಮಹಾದೇವಿಯ ನಾಮಾಂತರವೇ ಕಮಲಗಂಗವ್ವನೆಂದು ಹೇಳುತ್ತಾರೆ. ಹಾಗೂ ಅಕ್ಕ ಮಹಾದೇವಿಯ ಊರೆಂದು ನಂಬಲಾದ ಉಡುತಡಿ ಗ್ರಾಮವಾದರೂ ಇಲ್ಲಿಗೆ ಸಮೀಪದಲ್ಲಿ ಇದೆ. ಹೀಗೆ ವೀರಶೈವ ಶರಣ-ಶರಣೆಯರ ಸ್ಥಳಗಳು ಈ ಬಳ್ಳಿಗಾವಿಯ ನೆರೆಯಲ್ಲಿಯೇ ಇರುವುದರಿಂದ ಈ ಊರಿನ ಮಹತ್ವವು ಇನ್ನೂ ಹೆಚ್ಚುತ್ತದೆ. ಬಳ್ಳಿಗಾವಿ ಹಾಗೂ ಅದರಿಂದ ಸ್ವಲ್ಪ ಅಂತರದ ಮೇಲೆ ಇರುವ ಸ್ಥಳಗಳು ಅಲ್ಲಮಪ್ರಭು, ಅನಿಮಿಷಯ್ಯ, ಗೊಗ್ಗಯ್ಯ, ಏಕಾಂತ ರಾಮಯ್ಯ ಹಾಗೂ ಅಕ್ಕ ಮಹಾದೇವಿ ಈ ಉದಾತ್ತ ಜೀವಿಗಳ ಕಾರ್ಯ ರಂಗಗಳಾಗಿವೆ.

ಈ ಬಳ್ಳಿಗಾವಿಯು ಚಾರಿತ್ರ ದೃಷ್ಟಿಯಿಂದಲೂ ಮಹತ್ವದ್ದಾಗಿದೆ. ಈ ಊರು ಶಿಲಾಶಾಸನ, ಮಾಸ್ತಿಕಲ್ಲು, ವೀರಗಲ್ಲು, ನಿಸದಿಗೆ ಕಲ್ಲು ಇವುಗಳ ಭಾಂಡಾರವಾಗಿದ್ದು ಚರಿತ್ರ ಸಂಶೋಧಕರಿಗೆ ವಿಪುಲ ಕ್ಷೇತ್ರವನ್ನು ಒದವಿಸಿ ಕೊಡುತ್ತದೆ. ಶಿಕಾರಿಪುರದ ೯೨, ೯೬, ೯೮, ೧೦೨, ೧೦೬, ೧೧೭ ಮತ್ತು

೧೨೩ ನೆಯ ಶಿಲಾಶಾಸನಗಳಲ್ಲಿಯೂ ಸೊರಬದ ೧೭೯, ೨೭೭ ನೆಯ ಶಾಸನ ಮುಂತಾದವುಗಳಲ್ಲಿಯೂ ಈ ಪಟ್ಟಣದ ಘನತೆಯು ಸುಂದರವಾಗಿ ವರ್ಣಿಸಲ್ಪಟ್ಟಿದೆ. ಶಾಸನಗಳ ವರ್ಣನೆಗಳಿಂದ ಇದು ಬಹು ಮುಂದುವರಿದ ಪಟ್ಟಣವಾಗಿತ್ತೆಂದು ಕಂಡುಬರುತ್ತದೆ. ಶಿಕಾರಿಪುರದ ೧೨೩ ನೆಯ ಶಾಸನದಲ್ಲಿಯ ವರ್ಣನಾ ಭಾಗವು ಗಮನಾರ್ಹವಾಗಿರುವುದರಿಂದ ಅದನ್ನು ಕೆಳಗೆ ಸಂಗ್ರಹಿಸಿದೆ —"ಬಲಿಪುರವು ಬನವಾಸೆ ಪ್ರಾಂತದ ರಾಜಧಾನಿಯಾಗಿತ್ತು. ಪೂರ್ವದ ದಂಡನಾಯಕರು ಅಲ್ಲಿ ಸತ್ರ, ವಿಹಾರೋದ್ಯಾನ, ಗುಡಿ, ಕೆರೆ, ಕಾಲುವೆಗಳನ್ನು ನಿರ್ಮಿಸಿದ್ದರು. ಅದು ಜಗತ್ತಿನಲ್ಲಿ ಪ್ರಸಿದ್ಧವಾದ ಪಟ್ಟಣವಾಗಿತ್ತು. ಅಲ್ಲದೆ ಅದು ಪ್ರಾಚೀನ ಕಾಲದಿಂದ ಪ್ರಗತಿಪರವಾಗಿತ್ತು. ಪಾಂಡವರು ಇಲ್ಲಿ ಪಂಚಲಿಂಗಗಳನ್ನು ಸ್ಥಾಪಿಸಿದರು. ಈ ಪಟ್ಟಣವು ಪ್ರತಿಷ್ಠನಾಗರಿಕರಿಂದಲೂ ಸೆಟ್ಟಿ–ಸಾಹುಕಾರರಿಂದಲೂ ತುಂಬಿತ್ತು. ಇಲ್ಲಿಯ ಹಿರಿಯಮಠ, ಪಂಚಲಿಂಗಮಠ, ತ್ರಿಪುರಾಂತಕಮಠ, ಕೋಡಿಯ ಮಠಗಳಲ್ಲಿ ನಿಷ್ಠಾವಂತರಾದ ಆಚಾರ್ಯರು ಇದ್ದರು. ಅವರು ರಾಜರಿಂದ ಗೌರವಿಸಲ್ಪಡುತ್ತಿದ್ದರು." ಸೊರಬದ ೨೭೭ ನೆಯ ಶಾಸನದಿಂದ ಇಲ್ಲಿಯ ಪಂಚಮಠಗಳಿಂದ ಸ್ವಧರ್ಮರಕ್ಷಣೆಯು ಸರಿಯಾಗಿ ನಡೆಯುತ್ತಿತ್ತೆಂದೂ ಇಲ್ಲಿ ಮೂರು ಔಷಧಾಲಯಗಳಿದ್ದವೆಂದೂ ತಿಳಿಯುತ್ತದೆ. ಬಳ್ಳಿಗಾವಿಯಲ್ಲಿ ಆಗ ಇದ್ದ ಕೋಡಿಯ ಮಠದ ಘನತೆಯಂತೂ ಯಾರನ್ನಾದರೂ ಬೆರಗುಗೊಳಿಸದೆ ಬಿಡದು. ಕರ್ನಾಟಕದಲ್ಲಿ ಅದೊಂದು ವಿಶ್ವವಿದ್ಯಾಲಯವಾಗಿತ್ತು. ಅದು ಮಠವೆಂದು ಕರೆಯಲ್ಪಟ್ಟಿದ್ದರೂ ಕೂಡ ಮಾನವನ ಬಹುಮುಖ ಬೆಳವಣಿಗೆಗೆ ಅವಕಾಶವನ್ನೀಯುವ ಸಂಸ್ಥೆಯಾಗಿತ್ತು. ಘನಪಂಡಿತರೂ, ಉಜ್ವಲ ಧಾರ್ಮಿಕರೂ, ರಾಜಪೂಜಿತರೂ ಆದ ಮಠದ ಆಚಾರ್ಯರು ಅಲ್ಲಿದ್ದರೆಂದು ಅನೇಕ ಶಾಸನಗಳು ಹೇಳುತ್ತವೆ. ವೀರಶೈವ ಧರ್ಮದ ಇತಿಹಾಸದಲ್ಲಿ ಇನ್ನೂ ಒಂದು ಒಗಟವೇ ಆಗಿ ಉಳಿದಿರುವ ಕಾಳಾಮುಖರ ಒಂದು ಶಾಖೆಯವರು ಅಲ್ಲಿಯ ಮಠದಾಚಾರ್ಯರಾಗಿದ್ದರು. ಶಿಕಾರಿಪುರದ ಅನೇಕ ಶಾಸನಗಳಲ್ಲಿ ಈ ಮಠದ ಘನತೆಯು ಉಕ್ತವಾಗಿದೆ. ಅದು ಸಕಲ ವಿದ್ಯೆಗಳ ತವರುಮನೆಯಾಗಿತ್ತೆಂದು ತಿಳಿದು ಬರುತ್ತದೆ. ಅದು ನಿರ್ಗತಿಕರ ಊಟದ ಮನೆಯಾಗಿ, ರೋಗಿಗಳ ಆರೈಕೆಯ ಮನೆಯಾಗಿ, ಭಿಕ್ಷುಕರಿಗೆ ಸಹಾಯವನ್ನು ನೀಡುವ ನಿವಾಸವಾಗಿ, ವಿವಿಧ ಕಲೆಗಾರರ ಬೀಡಾಗಿ, ಧಾರ್ಮಿಕ ಕ್ರಿಯೆಗಳ ಕೇಂದ್ರವಾಗಿ ಶೋಭಿಸುತ್ತಿತ್ತೆಂದು ತಿಳಿಯುತ್ತದೆ. ಇದರಿಂದ ಹಾಗೂ ಶಾಸನಗಳಲ್ಲಿ ಬರುವ ಇನ್ನುಳಿದ ವರ್ಣನೆಗಳಿಂದ ಈ ಮಠವು ಅದೆಷ್ಟು ಉಜ್ವಲವಾಗಿತ್ತೆಂಬುದನ್ನು ಊಹಿಸ

ಬಹುದು. ಈ ಉಜ್ವಲ ಸಂಸ್ಥೆಯನ್ನೊಳಗೊಂಡ ಬಳ್ಳಿಗಾವಿಯು ಕೂಡ ಉಜ್ವಲವೇ ಸರಿ.

ಕಲಚೂರ್ಯ ಬಿಜ್ಜಳನ ಕಾಲದ ಶಾಸನಗಳಲ್ಲಿ ಈ ಊರು ಅನೇಕ ಸಲ ಉಕ್ತವಾಗಿದೆ. ದಂಡಯಾತ್ರೆಯ ಕಾಲಕ್ಕೆ ರಾಜರು ಅಲ್ಲಿ ಬೀಡು ಬಿಡುತ್ತಿದ್ದರೆಂದು ಹೇಳಿದೆ. ಅದರಂತೆ ಇಲ್ಲಿ ಬಿಜ್ಜಳ ಅರಸನು ಬೀಡು ಬಿಟ್ಟಾಗ ತನ್ನ ಅಧಿಕಾರಿಯ ಪ್ರಾರ್ಥನೆಯ ಮೇರೆಗೆ ಇಲ್ಲಿ ಧರ್ಮಕಾರ್ಯ ನಡೆಯಿಸಿದನೆಂದೂ ಕೋಡಿಯ ಮಠಕ್ಕಾಗಿ ಕೆಲವು ಊರುಗಳನ್ನು ದಾನವಾಗಿ ಕೊಟ್ಟನೆಂದೂ ಒಂದು ಶಾಸನದಲ್ಲಿ ಉಕ್ತವಾಗಿದೆ. ಷಿಕಾರಿಪುರದ ೧೨೩ ನೆಯ ಶಾಸನದಲ್ಲಿ ಕೇಶವಪುರವು ಹೀಗೆ ವರ್ಣಿಸಲ್ಪಟ್ಟಿದೆ:—

ಇದು ಕೃತಕಲ್ಪ ಜನ್ಮನಿಲಯಂ ದಿಟವಿಂತಿದು ವಿಶ್ವವೇದದ।
ಭ್ಯುದಯನಿವಾಸವಿಂತಿದು ಪವಿತ್ರ ಚರಿತ್ರಗುಣಾಕರಂ ಸಮಂ।
ತಿದು ಘನ ಪುಣ್ಯಸಂಪದನಿಕೇತವೆಂಬಿನವೊಪ್ಪಿತೋ।
ರ್ಪುದು ಸಲೆ ವೀರಕೇಶವಪುರಂ ಧರಣೀನವರತ್ನನೂಪುರಂ॥

ಈ ಕೇಶವಪುರವು ಬಳ್ಳಿಗಾವಿಯ ಒಂದು ಭಾಗವೇ ಆಗಿರಬೇಕು.

ಬಳ್ಳಿಗಾವಿಯು ಶಾಸನಗಳಲ್ಲಿ ಅನಾದಿರಾಜಧಾನಿ, ಪಟ್ಟಣಗಳ ತವರುಮನೆ ಎಂದು ಉಕ್ತವಾಗಿದ್ದರೂ ಕೂಡ ಅದನ್ನು ನಾವು ಗುಡಿ-ಮಠಗಳ ಪಟ್ಟಣವೆಂದು ಯಥಾರ್ಥವಾಗಿ ಕರೆಯಬಹುದಾಗಿದೆ. ಈಗ ಈ ಹಳ್ಳಿಯಲ್ಲಿಯ ಜನರು ಪ್ರಾಚೀನ ಗುಡಿಗಳ ಕಲ್ಲುಗಳನ್ನೂ ಒಡೆದ ವಿಗ್ರಹಗಳನ್ನೂ ತಮ್ಮ ಮನೆಗಳಿಗಾಗಿ ಉಪಯೋಗಿಸಿಕೊಂಡಿದ್ದಾರೆ. ಈಗಲೂ ಕೂಡ ಬಳ್ಳಿಗಾವಿಯಲ್ಲಿ—

೧. ಕೇದಾರೇಶ್ವರ ಗುಡಿ
೨. ಪಂಚಲಿಂಗನ ಗುಡಿ
೩. ತ್ರಿಪುರಾಂತಕ ಗುಡಿ
೪. ಸೋಮೇಶ್ವರ ಗುಡಿ

ಎಂಬ ಮುಖ್ಯ ನಾಲ್ಕು ಗುಡಿಗಳೂ ಅವುಗಳಿಗೆ ಹೊಂದಿಕೊಂಡಿರುವ ಇನ್ನೂ ಎಷ್ಟೋ ಸಣ್ಣ ಗುಡಿಗಳೂ ಅಲ್ಲಲ್ಲಿ ಬಿದ್ದ ವಿಗ್ರಹಗಳೂ ಇವೆ. ಈ ಪಟ್ಟಣವು ವೀರಶೈವ ಧರ್ಮ ಜಾಗ್ರುತಿಯ ಕೇಂದ್ರವಾಗಿತ್ತೆಂದು ಹಿಂದೆ ಹೇಳಿದೆಯಷ್ಟೆ. ಆದರೆ ಇದು ಜೈನ, ಬೌದ್ಧ ಧರ್ಮಗಳಿಗೂ ಕಾರ್ಯರಂಗವಾಗಿರಬೇಕು. ಇಲ್ಲಿ ಒಂದು ದೊಡ್ಡದಾದ ಜೈನ ಮೂರ್ತಿಯೂ, ಅಲ್ಲಲ್ಲಿ ಸಣ್ಣ ಜೈನ ವಿಗ್ರಹಗಳೂ ಕಂಡುಬರುತ್ತವೆ. ಹಾಗೂ ಇಲ್ಲಿ ಒಂದು ಜೈನ ಬಸದಿ ಇತ್ತೆಂದು ತಿಳಿದು ಬರುತ್ತದೆ. ಇದರಿಂದ ಜೈನ ಧರ್ಮದವರಿಗೂ ಇದು ಆವಾಸವಾಗಿತ್ತೆಂದು ಹೇಳಬಹುದು. ಮತ್ತು ಬಳ್ಳಿಗಾವಿಯು ಬೌದ್ಧ ಧರ್ಮ

ಪ್ರಸಾರದ ಕೇಂದ್ರವು ಆಗಿತ್ತೆಂದು ಊಹಿಸಲಿಕ್ಕೆ ಆಸ್ಪದವಿದೆ. ನಾಗಿಯಕ್ಕನೆಂಬ ಬೌದ್ಧ ಭಿಕ್ಷುಕಳು ಇಲ್ಲಿ ತಾರಾದೇವಿಯ ಪ್ರತಿಷ್ಠಾಪನೆ ಮಾಡಿದಳೆಂದು ಶಾಸನಗಳಲ್ಲಿ ಉಕ್ತವಾಗಿದೆ. ಈಗ ಈ ಊರಿನ ಜಡ್ಡಿ ಕೆರೆಯ ಹತ್ತಿರ ತಾರಾಭಗವತಿಯ ಮೂರ್ತಿಯು ತೋರಿಸಲ್ಪಡುತ್ತದೆ. ಇಲ್ಲಿ ಒಂದು ಬೌದ್ಧಾಲಯವೂ ಇತ್ತೆಂದು ತಿಳಿಯುತ್ತಿದೆ.

ಬಳ್ಳಿಗಾವಿಯು ಕನ್ನಡಿಗರ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಅನೇಕ ದೃಷ್ಟಿಯಿಂದ ಸೂಚಿಸುವಂತಿದೆ. ಇಲ್ಲಿಯ ಶೈವ, ವೈಷ್ಣವ, ಜೈನ, ಬೌದ್ಧ ದೇವಸ್ಥಾನಗಳ ಮೂಲಕ ಕನ್ನಡಿಗರ ಧಾರ್ಮಿಕ ಸಹಿಷ್ಣುತೆಯ ಪರಿಚಯವಾಗುತ್ತದೆ. ಈ ಊರಿನಲ್ಲಿ ಈಗಲೂ ನಯನಮನೋಹರವಾಗಿ, ವಿಸ್ತಾರವಾಗಿ, ತಾವರೆಗಳಿಂದ ತುಂಬಿ ಕಂಗೊಳಿಸುವ ತಾವರಗೆರೆಯು ಕನ್ನಡಿಗರ ರಸಿಕತೆಯ ಕೈಗನ್ನಡಿಯಂತಿದೆ. ಭೈರುಂಡೇಶ್ವರ ಸ್ತಂಭದ ಬಳಿಯಲ್ಲಿಯ ಶೂಲಬ್ರಹ್ಮದ ಕಲ್ಲು ತತ್ತ್ವಕ್ಕಾಗಿ, ಧ್ಯೇಯಕ್ಕಾಗಿ ಜೀವವನ್ನು ತೃಣೀಕರಿಸುವ ಕನ್ನಡಿಗರ ವೈಶಿಷ್ಟ್ಯದ ಗುರುತಾಗಿದೆ. ಕೋಡಿಯ ಮಠದಿಂದ ಧ್ವನಿತವಾಗುವ ಕನ್ನಡರ ವಿಶಾಲ ಹೃದಯ, ಅಪಾರ ಕರ್ತೃತ್ವ ಶಕ್ತಿ ಇವುಗಳ ನೆನಪೂ ಕೂಡ ರೋಮಾಂಚಕಾರಿಯಾಗಿದೆ. ಅಲ್ಲಿ ಇಂದು ಹಾಳು ಗೋಡೆಗಳಿಂದ ಕೂಡಿದ ಕೊಂಪೆಯನ್ನು ಕಂಡವರು ಕನ್ನಡನಾಡಿನ ಈಗಿನ ಹೀನಸ್ಥಿತಿಯ ಸ್ಮರಣದಿಂದ ಕಣ್ಣೀರು ಸುರಿಸದೆ ಇರಲಾರರು. ಭೈರವೇಶ್ವರ ಗರುಡ ಸ್ತಂಭದ ಮೊದಲಿನ ಮೂರ್ತಿ ಅಳಿದು ಹೋಗಿರಲು ಆಧುನಿಕರಾದ ಸಿದ್ಧಲಿಂಗ ಶಿಲ್ಪಿಗಳಿಂದ ರಚಿತವಾದ ಕಲಾಪೂರ್ಣ ಹೊಸ ಮೂರ್ತಿಯು ಕನ್ನಡಿಗರ ಪುನರುಜ್ಜೀವನದ ಪ್ರಭಾತ ಕಾಲವನ್ನು ಸೂಚಿಸುವಂತೆ ಇದೆ. ಇಲ್ಲಿಯ ಗುಡಿಗಳಲ್ಲಿಯ ಕೆತ್ತನೆಯ ಕೈವಾಡವು ಕನ್ನಡಿಗರ ಶಿಲ್ಪಕಲೆಯ ವೈಭವವನ್ನು ಸೂಚಿಸುತ್ತ ನಿಂತಿದೆ. ಬಳ್ಳಿಗಾವಿಯು ಇಂದು ಅಳಿದುಳಿದ ಊರಾದರೂ ಕೂಡ ಪ್ರಾಚೀನ ಕನ್ನಡನಾಡಿನ ಸಂಕ್ಷಿಪ್ತ ರೂಪದಂತಿದ್ದು ಕನ್ನಡಿಗರ ಸಂಸ್ಕೃತಿಯ ಕೈಗನ್ನಡಿಯಾಗಿ ಇಂದಿಗೂ ಉಳಿದು ನಿಂತಿದೆಯೆಂದು ಕಂಡುಬರುವಂತಿದೆ.

## ಅಭ್ಯಾಸ

೧. **ಕಠಿಣ ಶಬ್ದಗಳ ಅರ್ಥ :—**

ಕೈಪಿಡಿ—ಕನ್ನಡಿ. ಅವತರಣಿಕೆ—ಪೀಠಿಕೆ. ಆರಯ್ಯಲ್—ವಿಚಾರಿಸಲು. ಆಗರ—ನೆಲೆ, ಆಶ್ರಯ, ಸ್ಥಳ. ಇರ್ಕೆದಾಣ—ಇರುವ ಸ್ಥಳ. ಚಿತ್ತಜ—ಮನ್ಮಥ.

ಗೊತ್ತು—ನೆಲೆ, ಸ್ಥಳ. ಎರೆವಟ್ಟು—ಅಂತಃಪುರ, ಕನ್ನೆವಾಡ. ಆಸಿಸ—ಯಾವಾಗಲೂ. ಮನಂಗೊಳಿಪ—ಮನೋಹರವಾದ. ಕೊಪ್ಪಳು—ಸಣ್ಣ ಹಳ್ಳಿ. ಪೂಗವನ—ಅಡಕೆಯ ತೋಟ. ಪೊನಲ್—ಹೊನಲು, ಪ್ರವಾಹ. ಪಿಕ—ಕೋಗಿಲೆ. ಸೊನ್ನಲಿಗೆ—ಈಗಿನ ಸೋಲಾಪುರ. ವೈದುಷ್ಯ—ಪಾಂಡಿತ್ಯ. ನಿಸರ್ಗ—ಪ್ರಕೃತಿ. ವಿಪ್ಲವ—ದಂಗೆ, ಕ್ರಾಂತಿ. ವಿಭೂತಿ—ಅದ್ಭುತ, ಮಹತ್ತಾದ. ಮಕ್ಕ—ಅರೇಬಿಯಾ ದೇಶದಲ್ಲಿರುವ ಮುಸಲ್ಮಾನರ ಯಾತ್ರಾಸ್ಥಳ. ಆಖ್ಯಾಯಿಕೆ—ಕಥೆ. ಮಾಸ್ತಿಕಲ್ಲು—ಯುದ್ಧದಲ್ಲಿ ಮಡಿದ ಮಹಾಸತಿಯರ ಜ್ಞಾಪಕಾರ್ಥವಾಗಿ ನೆಟ್ಟ ಕಲ್ಲು. ನಿಸದಿಗೆ ಕಲ್ಲು—ಜೈನ ಗುರುಗಳು ಸತ್ತ ಸ್ಥಳದಲ್ಲಿ ನೆಟ್ಟ ಸ್ಮಾರಕ ಕಲ್ಲು. ಅದರಲ್ಲಿ ಅವರ ಪಾದದ ಚಿಹ್ನೆ ಇರುತ್ತದೆ. ಸಮಂತು—ಚೆನ್ನಾಗಿ. ನಿಕೇತನ—ಮನೆ. ನೂಪುರ—ಕಾಲುಗೆಜ್ಜೆ. ಜೈನ ಬಸದಿ—ಜೈನರ ದೇವಾಲಯ.

ಕಾಳಾಮುಖರು—ಸುಮಾರು ಎಂಟರಿಂದ ಹದಿನಾಲ್ಕನೆಯ ಶತಮಾನದವರೆಗಿದ್ದ ಶೈವರ ಒಂದು ಭೇದ. ಇವರು ಬಹಳ ಪ್ರಭಾವಶಾಲಿಗಳಾಗಿದ್ದು ಅನೇಕ ಮಠ, ಆಸ್ಪತ್ರೆ, ವಿದ್ಯಾಲಯಗಳನ್ನು ನಡೆಸುತ್ತಿದ್ದರು. ಇವರಲ್ಲಿ ಕೆಲವರು ಕ್ರಮೇಣ ವೀರಶೈವರಾದರು.

ಕಲಚೂರ್ಯ ಬಿಜ್ಜಳ—ಸುಮಾರು ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದ ರಾಜ. ಇವನ ಆಸ್ಥಾನದಲ್ಲಿ ಬಸವೇಶ್ವರನಿದ್ದನು.

ಏಕಾಂತದ ರಾಮಯ್ಯ—ಹನ್ನೆರಡನೆಯ ಶತಮಾನದಲ್ಲಿದ್ದ ಶಿವಭಕ್ತ. ಒಮ್ಮೆ ಅಬ್ಬಲೂರಿಗೆ ಹೋಗಿ ಅಲ್ಲಿದ್ದ ಏಳು ನೂರು ಜೈನ ಬಸದಿಗಳನ್ನು ನೋಡಿ ಕೆರೆಯ ಏರಿಯಲ್ಲಿದ್ದ ಬ್ರಹ್ಮೇಶ ಲಿಂಗದ ಬಳಿ ತಂಗಲು ಹೋದ. ಅಲ್ಲೊಬ್ಬ ಜೈನ ಆ ಲಿಂಗಕ್ಕೆ ತನ್ನ ಕಾಲು ಸೋಕುವಂತೆ ಮಲಗಿದ್ದುದನ್ನು ಕಂಡು ಅವನನ್ನು ಗದರಿಸಿದನು. ಅದಕ್ಕೆ ಸವಣನು ತಲೆಯನ್ನು ಕತ್ತರಿಸಿ ಶಿವನಿಗೆ ಅರ್ಪಿಸಿ ಮರಳಿ ಪಡೆದರೆ ತಾನು ಹೋಗುವುದಾಗಿ ಹೇಳಿದನು. ಹಾಗೆಯೇ ರಾಮಯ್ಯ ಮಾಡಿದನು.

ಗೊಗ್ಗಯ್ಯ—ಅಲ್ಲಮ ಪ್ರಭುವಿನ ಸಮಕಾಲೀನ. ಗುರು ಲಿಂಗ ಜಂಗಮ ಸೇವೆಯನ್ನು ಮಾಡಿ ಮುಕ್ತಿಗಳಿಸಲು ಪ್ರಯತ್ನಿಸುತ್ತಿದ್ದ. ಅಲ್ಲಮ ಅವನನ್ನು ಸಂಧಿಸಿ ಅವನಿಗೆ ಪ್ರಾಣಲಿಂಗ ಜ್ಞಾನವನ್ನು ಬೋಧಿಸಿದನು.

ಅಲ್ಲಮ ಪ್ರಭು—ಹನ್ನೆರಡನೆಯ ಶತಮಾನದಲ್ಲಿದ್ದ ಮಹಾ ಶಿವಯೋಗಿ. ಬಾಲ್ಯದಲ್ಲಿಯೇ ವೈರಾಗ್ಯಪರನಾಗಿ ಲೋಕ ಕಲ್ಯಾಣಕ್ಕಾಗಿ ದುಡಿದನು. ಗೊಗ್ಗಯ್ಯ, ಮುಕ್ತಾಯಕ್ಕ, ಸಿದ್ಧರಾಮ, ಬಸವೇಶ್ವರ ಮೊದಲಾದ ಭಕ್ತರನ್ನು ಕಂಡು ಅವರಿಗೆ ತತ್ತ್ವೋಪದೇಶ ಮಾಡಿದನು. ಅನೇಕ ವಚನಗಳನ್ನು ಹಾಡಿದ್ದಾನೆ.

ಬಸವೇಶ್ವರ—ಬಾಲ್ಯದಲ್ಲಿಯೇ ವಿರಕ್ತನಾಗಿ ಕಪ್ಪಡಿ ಸಂಗಮೇಶ್ವರನ ಸೇವೆಯಲ್ಲಿದ್ದು ಅಲ್ಲಿಂದ ಬಿಜ್ಜಳನ ಆಸ್ಥಾನಕ್ಕೆ ಹೋಗಿ ಇದ್ದನು. ಜಂಗಮ ಪ್ರಾಣನಾಗಿ ದಾನ ಧರ್ಮದಲ್ಲಿ ಕಾಲಕಳೆಯುತ್ತಿದ್ದು ಅನೇಕ ಪವಾಡಗಳನ್ನು ಮೆರೆದನು. ಕಲ್ಯಾಣ ಪಟ್ಟಣದಲ್ಲಿ ಶೂನ್ಯ ಸಿಂಹಾಸನವನ್ನು ಸ್ಥಾಪಿಸಿ ಅಲ್ಲಮ ಪ್ರಭುವಿನಿಂದ ಉಪದೇಶ ಪಡೆದು ಸಂಗಮದಲ್ಲಿ ಸಮಾಧಿಸ್ಥನಾದನು. ಅನೇಕ ವಚನಗಳನ್ನು ರಚಿಸಿದ್ದಾನೆ.

ಸಿದ್ಧರಾಮ—ಒಬ್ಬ ಮಹಾ ಕರ್ಮಯೋಗಿ. ಜನರ ಅನುಕೂಲಕ್ಕಾಗಿ ಸೊನ್ನಲಿಗೆಯಲ್ಲಿ ಕೆರೆ ತೋಡಿಸಿ ಅನೇಕ ಪವಾಡಗಳನ್ನು ಮೆರೆದನು. ಅಲ್ಲಮ ಪ್ರಭುವಿನಿಂದ ಉಪದೇಶ ಪಡೆದು ಸೊನ್ನಲಿಗೆಯಲ್ಲಿ ಐಕ್ಯವಾದನು.

ಅಕ್ಕಮಹಾದೇವಿ—ಉಡುತಡಿಯಲ್ಲಿ ಜನಿಸಿ ಅಲ್ಲಿಯ ರಾಜನಾದ ಕೌಶಿಕನನ್ನು ಪತಿಯೆಂದು ಸ್ವೀಕರಿಸಿದರೂ ವಿರಕ್ತಳಾಗಿ ಕಲ್ಯಾಣಪಟ್ಟಣಕ್ಕೆ ಹೋದಳು. ಅನೇಕ ವಚನಗಳನ್ನು ಹಾಡಿದ್ದಾಳೆ.

೩. ಪ್ರಶ್ನೆಗಳು :—

೧. ಬಳ್ಳಿಗಾವಿ ಚರಿತ್ರೆಯ ದೃಷ್ಟಿಯಿಂದ ಹೇಗೆ ಮಹತ್ವಪೂರ್ಣವಾಗಿದೆ?

೨. ಬಳ್ಳಿಗಾವಿ ಧಾರ್ಮಿಕ ಕ್ಷೇತ್ರವಾಗಿತ್ತೆಂಬುದನ್ನು ಉದಾಹರಣೆಗಳೊಡನೆ ವಿವರಿಸಿ.

೩. ಬಳ್ಳಿಗಾವಿ ಕನ್ನಡಿಗರ ಸಂಸ್ಕೃತಿಯ ವೈಶಿಷ್ಟ್ಯವನ್ನು ಹೇಗೆ ಸೂಚಿಸುತ್ತದೆ?

# ಮುದ್ದಣ ಮನೋರಮೆಯರ ಸಂಭಾಷಣೆ

## ಮುದ್ದಣ

ಉಡುಪಿಯ ಬಳಿಯಿರುವ ನಂದಳಿಕೆ ಎಂಬ ಹಳ್ಳಿಯಲ್ಲಿ ಮುದ್ದಣ ಕ್ರಿ.ಶ. ೧೮೭೦ರಲ್ಲಿ ಜನಿಸಿದ. ಮುದ್ದಣ ಎಂಬುದು ಕಾವ್ಯನಾಮ. ಅವನ ನಿಜವಾದ ಹೆಸರು ಲಕ್ಷ್ಮೀನಾರಣಪ್ಪ ಎಂದು. ಉಡುಪಿಯ ಕನ್ನಡ ಟ್ರೈನಿಂಗ್ ಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡಿದ. ಟ್ರೈನಿಂಗ್ ಮುಗಿದ ಮೇಲೆ ಮದ್ರಾಸಿಗೆ ಹೋಗಿ ಅಂಗಸಾಧನೆಯ ಶಿಕ್ಷಣವನ್ನು ಕಲಿತು ಉಡುಪಿಯ ಹೈಸ್ಕೂಲಿನಲ್ಲಿ ವ್ಯಾಯಾಮ ಶಿಕ್ಷಕನಾಗಿ ಸೇರಿಕೊಂಡ. ಬಾಲ್ಯದಿಂದಲೂ ಮುದ್ದಣ ರಸಿಕನೂ ಸಾಹಿತ್ಯಪ್ರಿಯನೂ ಆಗಿದ್ದ.

ಮುದ್ದಣ ರಚಿಸಿದ ಕೃತಿಗಳಲ್ಲಿ ಅದ್ಭುತ ರಾಮಾಯಣ, ಶ್ರೀರಾಮ ಪಟ್ಟಾಭಿಷೇಕ ಮತ್ತು ಶ್ರೀರಾಮಾಶ್ವಮೇಧ ಮುಖ್ಯವಾದುವು. ಇವುಗಳಲ್ಲಿ ಶ್ರೀರಾಮಾಶ್ವಮೇಧವೇ ಶ್ರೇಷ್ಠ ಕೃತಿ. ಗದ್ಯಪ್ರಕಾರದಲ್ಲಿ ಶ್ರೀರಾಮಾಶ್ವಮೇಧ ಹೊಸದೊಂದು ಹೆದ್ದಾರಿಯನ್ನು ಹಾಕಿದೆ. ಇಲ್ಲಿಯ 'ಮುದ್ದಣ ಮನೋರಮೆಯರ ಸಂಭಾಷಣೆ'ಯ ಭಾಗವನ್ನು ಶ್ರೀರಾಮಾಶ್ವಮೇಧದ ಮೊದಲನೆಯ ಅಧ್ಯಾಯವಾದ ಕಥಾಮುಖದಿಂದ ಆರಿಸಲಾಗಿದೆ.

ಈತೆಱದೆ ಕಾಡುಂ ನಾಡುಂ ಮನೋಜ್ಞಮಾಗೆ ಸಂಪ್ರಾಪ್ತವಾದ ವರ್ಷಾಕಾಲದೊಳೊಂದು ದೆವಸಂ ಬೈಗುಂಬೊೞ್ತು ನೊಳ್ಂದಿನಂತಿರೋಲಗಂ ಪರಿಯೆ ಕಬ್ಬಿಗರ ಬಲ್ಲಹಂ ಮುದ್ದಣನರಮನೆಯಿಂ ಪೊಱಮಟ್ಟು ಸೆರೆವೀದಿ ವಿಡಿದು ಪೊರೆವೀಡಿಂಗೈತರ್ಪುದುಮಾತನ ಮಡದಿ ಮನೋರಮೆ ದೂರದೆ ಕಂಡೆೞ್ದು ಇದಿರ್ವಂದು ಕಾಲ್ಗೆ ನೀರಂ ನೀಡಿ ಮತ್ತಂ ಕೈವಿಡಿದೊಳಚೌಕಿಗೆ ಗುಯ್ದು ಮಣೆಯಿತ್ತು ಕುಳ್ಳಿರಿಸಿ ಒಡನೆಯೆ ತನಿವಣ್ಣಂ ತಿನಲಿತ್ತು ಕೆನೆವಾಲಂ ಕುಡಿವೊಡಿತ್ತು ಉಪಚರಿಸುತಿರ್ದಳ್. ಈವುಪಚಾರದಿನಾತನ ಪಸಿವುಂ ಬಳಲ್ಕೆಯುಂ ಮುಡಿಯೆ ಕೆಳದಿ ನಱುದಂಬುಲಮುಂ ಸವಿಯಲ್ಕೆಂದು ಮಡಿದೀಯುತ್ತುಮಿರೆ ಇಂತು ಸುಖಸಲ್ಲಾಪಂಗೊಳುತಿರ್ದರ್. ಅದೆಂತೆನೆ:—

ಮನೋರಮೆ—(ಮೆಲ್ನುಡಿಯಿಂ) ನೋಟ್ಪುದೀಪಗಲ್ಗಳಿಂತೊ ಪಿರಿಯುವು. ಪಗಲುಮಿರುಳುಂ ಸುರಿವ ಬಲ್ಸೋನೆಯು ಜಿನುಂಗಿಸತ್ತಣಿಸೆನ್ನ ಬಗೆ

ಯುಂ ಬೇಸತ್ತುದು. ಅಂತವಱಿನೇನಾನುಮೊಂದು ನಲ್ಗತೆಯುಂ ಪೇೞ !

ಮುದ್ದಣಂ—ಪ್ರಾಣೇಶ್ವರೀ! ತಡೆಯೇಂ! ಇನಿತೊಂದು ಬಯಕೆ ತಲೆದೋಱಿ ಆವ ಗಹನಂ ? ಆದೊಡಮಾವ ನಲ್ಗತೆಯುಂ ಪೇೞ್ವೆಂ ? ಏಂ ಭೋಜಪ್ರಬಂಧಂ ? ವಿಕ್ರಮ ವಿಜಯಂ ? ಮಹಾವೀರಚರಿತಂ ?

ಮನೋರಮೆ—ಇಸ್ಸಿ! ಇವರೊಳೆನಗಬ್ಕಱಿಲ್ಲಂ; ಉೞಿದೊಡಮುೞಿದೊಡಂ ಬಟ್ಟಿದೋಱಿಪ ರಸಭರಿತಂ ಚರಿತಮೈಸೆ.

ಮುದ್ದಣಂ—ನಿನಗಾವ ರಸದೊಳಿಷ್ಟಂ ? ಶೃಂಗಾರರಸದೊಳೇ? ವೀರರಸದೊಳೇ? ಹಾಸ್ಯರಸದೊಳೇ?

ಮನೋರಮೆ—ಆವ ರಸದೊಳೆಂದೊಡೇಂ ! ನವರಸದೊಳಂ.

ಮುದ್ದಣಂ—ಅಂತಿರೆ ಮತ್ತಮಾಕತೆ ಯಾವುದು ?

ಮನೋರಮೆ—ರಾಮಾಯಣದೊಳೇನಾನುಮೊಂದು.

ಮುದ್ದಣಂ—ಅಂತೆಯೆ ಆಕ್ಕೆ. ಸೀತಾಸ್ವಯಂವರಮಂ ಪೇೞ್ವೆಂ.

ಮನೋರಮೆ—ಆಂ ಮುನ್ನಮೇ ಕೇಳ್ದಿರ್ಪೆನಲ್ತೆ

ಮುದ್ದಣಂ—ಏಂ ಸೀತಾಪಹರಣಕಥನದೊಳ್ ಬಯಕೆಯೆ?

ಮನೋರಮೆ—ಉಃ ! ಆನೊಲ್ಲೆಂ

ಮುದ್ದಣಂ—ಮೇಣಾವ ನಲ್ಗತೆಯುಂ ಪೇೞ್ವೆನೋ.

ಮನೋರಮೆ—ಇಂತೇಕುಸಿರ್ವಯ್, ನಾಡೊಳೆನಿತ್ತೊ ರಾಮಾಯಣಂಗಳೊಳವು. ನೀಂ ಕೇಳ್ದುದಱೊಳೊಂದಂ ನಲ್ಮೆದೋಱಿ ಕಂಡು. ಪೇೞ್ವುದು.

ಮುದ್ದಣಂ—ನೀನೇ ಒಂದನಾಯ್ದು ಕೊಳ್ವುದು.

ಮನೋರಮೆ—ಶ್ರೀರಾಮಂ ಅಶ್ವಮೇಧಮಂ ಕೈಕೊಂಡನೆಂಬರಲ್ತೆ; ಆಕತೆಯೆ ಅಕ್ಕುಂ.

ಮುದ್ದಣಂ-ಈಗಳಱಿತೆಂ; ಶೇಷರಾಮಾಯಣಮಂ ಪೇೞ್ವುದೆಂಬೆಯ ?

ಮನೋರಮೆ—ಅಪ್ಪುದಪ್ಪುದು. ಆದೊಡೆ ಮುನ್ನಮಾರಾರ್ಗಿದನೊರೆದರ್ ?

ಮುದ್ದಣಂ—ಮುನ್ನಂ ಶೇಷಂ ವಾತ್ಸ್ಯಾಯನಂಗೆ ಪೇೞ್ದನದನೆಯೆ ನಿನಗೆ ಬಿತ್ತರಿಪೆಂ. ಆದೊಡೆ ಬಲ್ಗತೆ ಕಣಾ ! ಒಂದೆರಡು ದಿವಸಕ್ಕೆ ಮುಡಿಯದು.

ಮನೋರಮೆ-ಇರ್ಕೆ. ಓರೊಂದು ದಿವಸಮಿನಿಸಿನಿಸ್ಸು ಪೇೞ್ದೊಡೇಂ?

ಮುದ್ದಣಂ—ಅಕ್ಕುಂ. ಆವ ಧಾಟಿಯೊಳ್ ಪೇೞ್ವೆಂ; ಪದ್ಯದೊಳ್ ಪೇೞ್ವೆನೊ ? ಗದ್ಯದೊಳ್ ಪೇೞ್ವೆನೊ ?

ಮನೋರಮೆ—ಪದ್ಯಂ ವಧ್ಯಂ ; ಗದ್ಯಂ ಹೃದ್ಯಂ. ಹೃದ್ಯಮಪ್ಪ ಗದ್ಯದೊಳೆ ಪೇೞ್ವುದು.

ಮುದ್ದಣಂ—(ನಸುನಗೆಯಿಂ) ಅದಂತಿರ್ಕೆ. ಇಂತಪ್ಪ ನಲ್ಗತೆಯುಂ ಬಿತ್ತರಿಸಿದೊಡೆ ಅರಮನೆಯೊಳ್ ರನ್ನಗಡಗಮುಂ ಪೊನ್ನ ಕಂಠಿಕೆಯುಂ ಮೆಚ್ಚನೀವರ್. ನೀನೀವುದೇಂ ?

ಮನೋರಮೆ—ಪೆಱತೇಂ ? ಎನ್ನನೆ ನಾನೀವೆಂ.

ಮುದ್ದಣಂ—ಬಲ್ಗಡುಸುಗಾರ್ತಿಯ್ಯೆಸೆ! ಅಱಿಯಾ ಮುನ್ನಮೆ ನಿನ್ನ ತಾಯ್ತಂದೆವಿರೆನಗಿತ್ತರೆಂಬುದಂ ?

ಮನೋರಮೆ—ಇದೇತಱ ನುಡಿ! ಪೆರ್ಂಕೆ. ಆಂ ಪರಾಧೀನೆ ಗಡ! ಪುರಾಣಮನೋದಿದಿಂ ಬೞಿಯಮಲ್ತೆ ದಕ್ಷಿಣೆಯನೀವುದು. ಅರಮನೆಯವರುಂ ಕಬ್ಬಮುಂ ಕಂಡಲ್ತೆ ಕಚಱಿಯನಿತ್ತರ್. ಆನುಂ ಕತೆಯುಂ ಕೇಳ್ದು ಸೊಗಸಾಗೆ ಬಲ್ಲಂತೆ ಸನ್ಮಾನಿಸುವೆಂ.

ಮುದ್ದಣಂ—ಒಳ್ಳಿತೊಳ್ಳಿತು! ಕತೆಯನಾಲಿಸಿ ಬೞಿಕ್ಕಮೀಯೆನೆಂದೊಡೆಬಿಡೆಂ ನೋೞ್ಪೆಂ.

ಮನೋರಮೆ—ಆನುಂ ನೋೞ್ಪೆಂ ಕತೆಯ ಪುರುಳೆಂತಿರ್ಕುಮೆಂದು.

ಮುದ್ದಣಂ-ಆದೊಡಾಲಿಸು. ಸ್ವಸ್ತಿಶ್ರೀಮತ್ಸುರಾಸುರೇಂದ್ರ ನರೇಂದ್ರ ಮುನೀಂದ್ರ ಫಣೀಂದ್ರಮಣಿಮಕುಟತಟಘಟಿತ—

ಮನೋರಮೆ—ಓಓ! ತಡೆ! ತಡೆ! ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯುಂ ಪೇೞೆನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯುಂ ಪೇೞ್ವುದೇಂ? ಸಾಲ್ಗುಂ ಸಾಲ್ಗುಂ. ಇಂತೆರ್ದೆಗೊಳ್ಪ ಕತೆಗೆಂತುಡುಗೊಱೆಯುಂ ಗೆಯ್ವೆನೋ !

ಮುದ್ದಣಂ—ನಲ್ನುಡಿಯಿದು ರಮಣಿ ! ಕಚಂಗಳಾಣೆ. ಅಲ್ತು ಬಸದಿಯಿಂದ್ರರ ಕತೆಯಲ್ತು ; ರಾಮಚಂದ್ರನ ಕತೆಯನೆ ಪೊಗೞ್ದು ಪೇೞ್ದಿದು ಸಕ್ಕದದೊಂದು ಚೆಲ್ವು.

ಮನೋರಮೆ-ಲೇಸು, ಲೇಸು ! ನೀರಿೞಿಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು ; ಕನ್ನಡದ ಸೊಗಸನಱಿಯಲಾರ್ತೆನಿಲ್ಲೆನಗೆ ಸಕ್ಕದದ ಸೊಗಸಂ ಪೇೞ್ವುದು ಗಡ!

ಮುದ್ದಣಂ—ಅಪ್ಪೊಡಿನ್ನೆಂತೊ ಒರೆವೆಂ ?

ಮನೋರಮೆ— ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇೞ್ವುದು. " ಕನ್ನಡಂ ಕತ್ತುರಿ "ಯಲ್ತೆ.

ಮುದ್ದಣಂ—ಅಪ್ಪುದಪ್ಪುದು. ಆದೊಡಂ ಸಕ್ಕದಪೊಂದೆ ರನ್ನವಣಿಯುಂ ಪೊನ್ನಿಂ ಬಿಗಿಪಂತೆಸೆಗುಂ; ಅದಱಿಂ ಕರ್ಮಣಿಸರದೊಳ್ ಚೆಂಬವಳಮಂ ಕೋದಂತಿರೆ, ರಸಮೊಸರೆ, ಲಕ್ಕಣಂ ಮಿಕ್ಕಿರೆ, ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ, ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ.

## ಅಭ್ಯಾಸ

**೧. ಕಠಿಣ ಶಬ್ದಗಳ ಅರ್ಥ :—**

ಮನೋಜ್ಞ—ಮನೋಹರ. ವರ್ಷಾಕಾಲ—ಮಳೆಗಾಲ. ದೆವಸ—ದಿವಸ. ಬೈಗುಂಬೊೞ್ತು—ಸಂಜೆಯ ಹೊತ್ತು. ಕಬ್ಬಿಗ—ಕವಿ. ಬಲ್ಲಹ—ವಲ್ಲಭ. ಪೊಱಮಡು—ಹೊರಡು. ಎೞ್ದು—ಎದ್ದು. ಮುಗಿ—ತೀರು, ಹಿಂಗು. ನಱುವಂಬುಲ—ಸುವಾಸನೆಯಿಂದ ಕೂಡಿದ ತಾಂಬೂಲ. ಸಲ್ಗತೆ—ಒಳ್ಳೆಯ ಕಥೆ. ಅೞ್ಕಱು—ಪ್ರೀತಿ. ಅೞಿ—ನಾಶ, ಸಾಯಿ. ಬಟ್ಟೆ—ದಾರಿ. ನವರಸ—ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ ರಸಗಳು. ಒರೆ—ಹೇಳು. ಬಿತ್ತರಿಸು—ವಿಸ್ತರಿಸು, ವಿವರಿಸು. ಹೃದ್ಯ—ಹೃದಯಂಗಮ. ಪೊನ್ನಕಂಠಿಕೆ—ಚಿನ್ನದ ಹಾರ. ಪೆಱತು—ಬೇರೆಯದು. ಕಬ್ಬ—ಕಾವ್ಯ. ಕಜ್ಜೞಿ—ಬಹುಮಾನ. ಘಟಿತ—ತಾಗಿದ. ವಸುಧೆ—ಭೂಮಿ. ಎರ್ದೆಗೊಳ್ವ—ಹೃದಯವನ್ನು ಆಕರ್ಷಿಸುವ. ಕಱ—ತಲೆಗೂದಲು. ಬಸದಿ—ವಸತಿ. ಸಕ್ಕದ—ಸಂಸ್ಕೃತ. ಕರ್ಮಣಿಸರ—ಕರಿಮಣಿ ಸರ. ಚೆಂಬವಳ—ಕೆಂಪು ಹವಳ. ಕೋ—ಪೋಣಿಸು. ಒಸರು—ಸುರಿ, ಸ್ರವಿಸು. ಲಕ್ಕಣ—ಲಕ್ಷಣ.

**೨. ಇವುಗಳಿಗೆ ಸಂದರ್ಭೋಚಿತವಾದ ಟಿಪ್ಪಣಿ ಬರೆಯಿರಿ :—**

೧. ಇನಿತೊಂದು ಬಯಕೆ ತಲೆದೋಱೆ ಆವ ಗಹನಂ.
೨. ಉೞಿದೊಡಮುೞಿದೊಡಂ ಬಟ್ಟೆದೋಱುವ ರಸಭರಿತಂ ಚರಿತಮೈಸೆ.
೩. ಪದ್ಯಂ ವಧ್ಯಂ; ಗದ್ಯಂ ಹೃದ್ಯಂ.
೪. ಆನುಂ ಕತೆಯಂ ಕೇಳ್ದು ಸೊಗಸಾಗೆ ಬಲ್ಲಂತೆ ಸಮ್ಮಾನಿಸುವೆಂ.
೫. ಇಂತೆರ್ದೆಗೊಳ್ವ ಕತೆಗೆಂತುಡುಗೊಱೆಯಂ ಗೆಯ್ವೆನೋ.
೬. ನೀರಿೞಿಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು.

**೩. ಪ್ರಶ್ನೆಗಳು :—**

೧. ಮುದ್ದಣ ಮನೋರಮೆಯರ ಸಂಭಾಷಣೆಯನ್ನು ಅದರ ಸ್ವಾರಸ್ಯವನ್ನು ನಿಮ್ಮ ಮಾತಿನಲ್ಲಿ ಬರೆಯಿರಿ.

೨. ಶ್ರೀರಾಮಾಶ್ವಮೇಧದ ಪದ್ಯಭಾಗದಲ್ಲಿ ಪ್ರಕಟವಾಗಿರುವ ಕವಿಯ ಭಾಷಾಭಿಮಾನವನ್ನು ವಿವರಿಸಿ.

# ಚಾಣಕ್ಯನ ಶಪಥ

## ಕೆಂಪುನಾರಾಯಣ

ಕೆಂಪುನಾರಾಯಣನು ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಯದಲ್ಲಿ ಬಾಳಿದ ಕವಿ. ೧೮೨೩ರಲ್ಲಿ ಮುದ್ರಾಮಂಜೂಷವನ್ನು ಬರೆದಂತೆ ತಾನೇ ಹೇಳಿ ಕೊಂಡಿದ್ದಾನೆ.

ಆಧುನಿಕ ಕನ್ನಡ ಸಾಹಿತ್ಯದ ಮುಂಗುರುತುಗಳು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿಯೇ ಕಂಡುಬರುತ್ತವೆಂಬುದಕ್ಕೆ ಮುದ್ರಾಮಂಜೂಷವೇ ನಿದರ್ಶನ. ಹಿಂದಿನ ಸಂಸ್ಕೃತ ನಾಟಕ (ಮುದ್ರಾರಾಕ್ಷಸ) ವೊಂದು ಇದಕ್ಕೆ ಆಧಾರವಾದರೂ, ಕಥನ ಪದ್ಧತಿ, ಪಾತ್ರರಚನೆ, ಸಾಮಾಜಿಕ ವಿಷಯ ನಿರೂಪಣೆ ನವೀನವೆಂಬಂತೆ ಭಾಸವಾಗದಿರದು. ಹೊಸಗನ್ನಡ ಗದ್ಯ ಸಾಹಿತ್ಯದಲ್ಲಿ ಇದಕ್ಕೊಂದು ವಿಶಿಷ್ಟಸ್ಥಾನವಿದೆ.

ಚಾಣಕ್ಯನ ಸಹಾಯದಿಂದ ಚಂದ್ರಗುಪ್ತನಿಗೆ ನಂದರಾಜ್ಯ ಪ್ರಾಪ್ತವಾದ ಕಥೆ ಇದರ ವಸ್ತು. ಪ್ರಕೃತ ಭಾಗವನ್ನು 'ಮುದ್ರಾಮಂಜೂಷ' ಗ್ರಂಥದ ತೃತೀಯಾಶಯವಾದ 'ಚಂದ್ರಗುಪ್ತ ಚಾಣಕ್ಯರಿಗೆ ಪರ್ವತರಾಜ್ಯಪ್ರವೇಶವು' ಎಂಬ ಗ್ರಂಥಭಾಗದಿಂದ ಆರಿಸಿದೆ.

ಅನಂತರದೊಳ್ ಚಂದ್ರಗುಪ್ತನು ನಂದರ ಆಜ್ಞಾನುಸಾರವಾಗಿ ಅನ್ನ ಸತ್ರಾಧಿಕಾರವಂ ಮಾಡುತ್ತ ಭಕ್ತಿಯಿಂದ ಬ್ರಾಹ್ಮಣರನ್ನಾರಾಧಿಸುತ್ತ ಹೀಗೆ ಕೆಲವು ದಿನಗಳು ಕಳೆದ ಮೇಲೆ ಒಂದಾನೊಂದು ಸಮಯದಲ್ಲಿ ದಂಡಕೃಷ್ಣಾಜಿನಗಳಂ ಧರಿಸಿ ಉರಿಯುತ್ತಿರುವ ಅಗ್ನಿಯೋ ಎಂಬಂತೆ ಮಹಾತೇಜಸ್ವಿಯಾಗಿಯೂ ಆ ಅನ್ನಸತ್ರಮಾರ್ಗವಾಗಿ ನೈಮಿಶಾರಣ್ಯಮಾರ್ಗವಂ ಹಿಡಿದು ಹೋಗುತ್ತಿರುವವನಾಗಿಯೂ ಇರುವ ಚಾಣಕ್ಯನೆಂಬ ಬ್ರಾಹ್ಮಣೋತ್ತಮನ ಪಾದಕ್ಕೆ ಮಾರ್ಗದಲ್ಲಿರುವ ಗರಿಕೆಯ ಬಳ್ಳಿ ಸುತ್ತಿಕೊಳ್ಳಲು ಮುಂದೆ ನಡೆಯುವ ವೇಗದಿಂದ ಮುಗ್ಗರಿಸಿ ಭೂಮಿಯಂ ಹಿಡಿದ ಆತನು ಮಹಾಕ್ರುದ್ಧನಾಗಿ ಜಡವಾದ ಗರಿಕೆಯ ಹಂಬು ಮಾರ್ಗನಿರೋಧವಂ ಮಾಡಿದುದರಿಂದ ಇದರ ಮೂಲೋತ್ಪಾಟನವಂ ಮಾಡಬೇಕೆಂದು ಕಾರ್ಯಾಂತರವಂ ಬಿಟ್ಟು ತನ್ನ ದಂಡಾಗ್ರದಿಂದಲೇ ಆ ಗರಿಕೆಯ ಬಳ್ಳಿಯನ್ನು ಸಮೂಲವಾಗಿ ಅಗೆದು ಛೇದಿಸಿ ತನ್ನ ಮಾರ್ಗವನ್ನು ಹಿಡಿದು ಹೋಗುತ್ತಿರುವುದನ್ನು ದೂರದಲ್ಲಿಯೇ ಚಂದ್ರಗುಪ್ತನು ಕಂಡು—ಈತನಾರೋ ಮಹಾತೇಜಸ್ವಿಯಾದವನು. ಕೋಪಿಷ್ಠನು. ಇಂಥಾ ಕೋಪ

ವಿದ್ದವರಲ್ಲೇ ಆಶ್ರಿತಾಭಿಮಾನವು ದೃಢವಾಗಿರುವುದು ಎಂದು ನಿಶ್ಚಯಿಸಿ ತನ್ನ ಪುಣ್ಯದಿಂದ ಈತನು ಅನುಕೂಲನಾದರೆ ಕೇಳುವುದೇನು! ಆದುದರಿಂದ ಇವನನ್ನು ಸತ್ಕರಿಸಬೇಕೆಂದು ನೆನಸಿ ಆತನ ಸಮೀಪಕ್ಕೆ ಬಂದು ಸಾಷ್ಟಾಂಗ ವಾಗಿ ನಮಸ್ಕರಿಸಿ—ಸ್ವಾಮೀ, ಮಧ್ಯಾಹ್ನವು ಮೀರಿತು. ನನ್ನ ಗೃಹದಲ್ಲಿ ಮಧುಪರ್ಕಾದಿಗಳಂ ಸ್ವೀಕರಿಸಿ ವಿಶ್ರಾಂತರಾಗಿ ಮುಂದೆ ತೆರಳಬಹುದೆನಲು ಚಾಣಕ್ಯನು ಚಂದ್ರಗುಪ್ತನ ಪ್ರಾರ್ಥನೆಯಂ ಕೇಳಿ ಹಾಗಾಗಲೆಂದು ಆತನಿಳಿದಿದ್ದ ಗೃಹಕ್ಕೆ ಬಂದು ಅರ್ಘ್ಯಪಾದ್ಯಗಳಿಂದ ಪೂಜೆಯಂ ಪರಿಗ್ರಹಿಸಿ ಭಕ್ತಿಯಿಂದ ಅರ್ಪಿಸಿದ ಫಲಂಗಳಂ ಭಕ್ಷಿಸಿ ವಿಶ್ರಮಿಸಿಕೊಂಡು ಮುಂದೆ ತೆರಳುವುದಕ್ಕೆ ಯತ್ನವಂ ಮಾಡುವ ಆತನಂ ಕುರಿತು ಚಂದ್ರಗುಪ್ತನು :

ಸ್ವಾಮೀ, ಮಾರ್ಗಾಯಾಸದಿಂದ ಬಂದಿರಿ. ನನ್ನ ಮೇಲೆ ಕೃಪೆಮಾಡಿ ಈ ಗೃಹದಲ್ಲಿ ಮೂರು ನಾಲ್ಕು ದಿನಗಳವರೆಗೂ ವಿಶ್ರಮಿಸಿಕೊಂಡು ನಾನು ಮಾಡುವ ಸ್ವಲ್ಪ ಸೇವೆಯಂ ಪರಿಗ್ರಹಿಸಿ ಮುಂದೆ ತೆರಳಬೇಕು. ಸ್ವಾಮಿಯವರ ಆಗಮನ ದಿಂದ ನನ್ನ ಪಿತೃಗಳೆಲ್ಲರೂ ಸಂತುಷ್ಟರಾದರು. ನಾನೂ ಧನ್ಯನಾದೆನು. ನನ್ನ ಗೃಹವೂ ಪಾವನವಾಯಿತು ಎಂದು ಹೇಳಲು ಚಾಣಕ್ಯನು ಚಂದ್ರಗುಪ್ತನ ಭಕ್ತಿ ವಿಶ್ವಾಸವಂ ನೋಡಿ ಸಂತೋಷಿಸಿದವನಾಗಿ ಹಾಗೇ ಆಗಲಿ ಎಂದು ಅಲ್ಲಿಯೇ ಮೂರು ನಾಲ್ಕು ದಿವಸಗಳಿದ್ದು ಆತನ ಉಪಚಾರಂಗಳಂ ಅಂಗೀಕರಿಸಿ ಸುಪ್ರೀತನಾಗಿ ಚಂದ್ರಗುಪ್ತನಂ ಕುರಿತು:

ಅಯ್ಯಾ, ಗೃಹಸ್ಥನೇ, ನೀನು ಯಾರ ಪುತ್ರನು? ನಿನ್ನ ಹೆಸರೇನು? ನಿನಗೆ ಇಲ್ಲಿ ಜೀವನವೇನು? ಎನಲು–ಸ್ವಾಮೀ, ನಾನು ಈ ದೇಶಾಧಿಪತಿಯಾದ ಸರ್ವಾರ್ಥಸಿದ್ಧಿರಾಜನ ಪ್ರಿಯಪತ್ನೀಕುಮಾರನಾದ ಮೌರ್ಯನ ತನಯನು. ನನ್ನಂ ಚಂದ್ರಗುಪ್ತನೆಂದು ಕರೆಯುವರು. ನನಗೆ ಬಂದಿರುವ ದುರ್ದಶೆಯಂ ಎಷ್ಟೆಂದು ಹೇಳಲಿ! ಬಹುಜನ ಹುಟ್ಟಿದ್ದರೆ ಬಹುಕ್ಲೇಶವುಂಟೆಂಬ ಲೋಕವಾರ್ತೆಯು ನನ್ನಲ್ಲೇ ಅನುಭವಕ್ಕೆ ಬಂದಿತು. ನಾನು ನೂರು ಮಂದಿಗಳಾದ ಭ್ರಾತೃಗಳ ಸಂಗಡ ಹುಟ್ಟಿದವನಾದರೂ ನನ್ನ ಪಿತೃಸೋದರರಲ್ಲಿ ನಾನೊಬ್ಬನೇ ಉಳಿದು ಈ ಕ್ಲೇಶಕ್ಕೆ ಪಾತ್ರನಾದೆನು. ಅದು ಹೇಗೆಂದರೆ—ನನ್ನ ಪಿತಾಮಹನಾದ ವೃದ್ಧರಾಜನ ಪಟ್ಟಮಹಿಷಿಯಲ್ಲಿ ಜನಿಸಿದ ಕುಮಾರರುಗಳೇ ನವನಂದರು. ಆತನ ಪ್ರಿಯಪತ್ನಿಯಾದ ಮುರಾದೇವಿಯಲ್ಲಿ ಹುಟ್ಟಿದವನೇ ನಮ್ಮ ತಂದೆಯಾದ ಮೌರ್ಯನೆಂಬವನು. ಆತನಿಗೆ ಅಸಹಾಯಶೂರರಾದ ನೂರುಮಂದಿ ಮಕ್ಕಳು ಜನಿಸಿ ಪ್ರಸಿದ್ಧರಾದರು. ಅದಂ ನೋಡಿ ನಂದರು ಶೂರರೂ ತಮಗೆ ಜ್ಞಾತಿಗಳೂ ಆದುದರಿಂದ ಮುಂದೆ ಕಾಲಾಂತರದಲ್ಲಿ ಇವರು

ನಮಗೆ ಶತ್ರುಗಳಾದಾರೆಂಬ ಶಂಕೆಯಿಂದಲೋ ಏನೋ ಕಾಪಟ್ಯದಿಂದ ನೆಲಮಾಳಿಗೆಯೊಳಗೆ ನಮ್ಮ ಪಿತೃಸೋದರರೆಲ್ಲರಂ ಕೂಡಿ ಅನ್ನೋದಕವಂ ಕೊಡದೆ ಅವರಂ ಸಂಹರಿಸಿದರು. ನಾನು ಮಾತ್ರ ಮಹಾಕ್ಲೇಶಕ್ಕೆ ಗುರಿಯಾಗಿ ಜೀವಿಸಿದೆನು. ನಿಮಿತ್ತಾಂತರದಿಂದ ನನ್ನಂ ಹೊರಗೆ ತೆಗೆದು ಜೀವನಾರ್ಥವಾಗಿ ಅನ್ನಸತ್ರಾಧಿಕಾರವಂ ನೋಡುತ್ತಾ ಬಿದ್ದಿರಲ್ಲಿ ಎಂದು ನೇಮಿಸಿದುದರಿಂದ ಆಶ್ರಯಾಂತರ ದೊರಕದೆ ಈ ದುರ್ದೆಶೆಗೆ ತಗುಲಿ ಹೀನವೃತ್ತಿಯಿಂ ಜೀವಿಸುತ್ತ ಯಾವ ವೇಳೆಯಲ್ಲಿ ತನಗೂ ಶತ್ರುಗಳಿಂದ ಹಾನಿ ಬಂದೀತೋ ಎಂದು ನಿರಂತರವೂ ಶಂಕೆಪಡುತ್ತ ಇದ್ದೇನೆ. ನವಾರ್ಬುದಸಂಖ್ಯಾಧನವನ್ನಾರ್ಜಿಸಿ ಬಹು ದೇಶಾಧಿಪತಿಗಳ ಕೈಯಿಂ ಕಪ್ಪವಂ ಸ್ವೀಕರಿಸುವ ಮಹಾರಾಜನಿಗೆ ನಾನು ಪೌತ್ರನಾಗಿದ್ದರೂ ನಮ್ಮ ತಂದೆಯಾದ ಮೌರ್ಯನಿಂ ಪ್ರತಿಷ್ಠಿತವಾದ ವಿರೂಪಾಕ್ಷನಿಗೆ ನಿತ್ಯದಲ್ಲೂ ಆಗುವ ಆರಾಧನೆಗೆ ವಿಘ್ನ ತಟ್ಟಿ ನಿಂತುಹೋಗಿರುವಲ್ಲಿ ಅಷ್ಟುಮಾತ್ರ ನಿರ್ವಹಿಸಲಾರದೆ ಧನಹೀನನಾಗಿ ಈ ಶತ್ರುಮಧ್ಯದಲ್ಲಿ ಜೀವಿಸುವುದಕ್ಕಿಂತಲೂ ಮಹಾಪುಣ್ಯಕರವಾದ ಅರಣ್ಯದ ಕಂದಮೂಲಂಗಳಿಂ ಹೊಟ್ಟೆಯಂ ಹೊರೆಯುತ್ತಾ ನಿಮ್ಮಂಥಾ ಮಹಾನುಭಾವರ ಪಾದಸೇವೆಯಂ ಮಾಡಿದರೆ ಪರಲೋಕವಾದರೂ ಪ್ರಾಪ್ತವಾದೀತು. ಇಲ್ಲಿ ಏನು ಪ್ರಯೋಜನಕ್ಕಾಗಿ ಇರಬೇಕು? ಅಪ್ಪಣೆಯಾದರೆ ನಾನೂ ತಮ್ಮ ಸಂಗಡಲೇ ಬರುವೆನೆಂದು ಕಂಬನಿಗಳಂ ತುಂಬಿ ದುಃಖಪಡುತ್ತಿರುವ ಚಂದ್ರಗುಪ್ತನ ವ್ಯಸನವನ್ನೂ ಆತನ ಸೌಜನ್ಯವನ್ನೂ ಪ್ರಭುತ್ವಲಕ್ಷಣಯುಕ್ತವಾದ ಆತನ ಶರೀರವನ್ನೂ ನೋಡಿ ಈತನಂ ಪರೀಕ್ಷಿಸಿದರೆ ಮುಂದೆ ಪ್ರಭುಪದಕ್ಕೆ ಯೋಗ್ಯನಾಗುವಂತೆ ಕಾಣುತ್ತಿದೆ ಎಂದು ತಿಳಿದು ಮನಮರುಗಿ ಚಾಣಕ್ಯನು:

ಎಲೈ, ಚಂದ್ರಗುಪ್ತನೇ, ಕ್ಷತ್ರಿಯಬೀಜೋತ್ಪನ್ನನಾಗಿ ಯೌವನಶಾಲಿಯಾಗಿ ಪ್ರಭುತ್ವಕ್ಕೆ ಯೋಗ್ಯವಾದ ಲಕ್ಷಣಮುಂಟಾಗಿರುವ ನಿನಗೆ ವನವಾಸವೂ ಕಂದಮೂಲಾಹಾರವೂ ಯೋಗ್ಯವಲ್ಲ. ಅದು ಬ್ರಾಹ್ಮಣಜೀವನವು. ಕ್ಷತ್ರಿಯನು ಧನಹೀನನಾಗಿ ವಿಪತ್ತಿಗೆ ತಗುಲಿವರೆ ಧೈರ್ಯವನ್ನವಲಂಬಿಸಿ ತನ್ನ ಅಭ್ಯುದಯ ಕಾಲವಂ ನಿರೀಕ್ಷಿಸುತ್ತ ಸಮಯವರಿತು ತನ್ನ ಬುದ್ಧಿಪೌರುಷಗಳ ಬಲದಿಂದ ಶತ್ರುಗಳಂ ನಿಗ್ರಹಿಸಿ ಸುಖಿಯಾಗಬೇಕಲ್ಲದೆ ನೀನು ಹೀಗೆ ಧೈರ್ಯಹೀನನಾಗಿ ಹೀನಜನರಂತೆ ಹೇಳುವುದು ಸರಿಯೇ? ಎನಲು ಆ ಮಾತಿಗೆ ಚಂದ್ರಗುಪ್ತನು:

ಸ್ವಾಮೀ, ಮಹಾನುಭಾವರೇ ಅಕ್ಷಯಕಾಳಿನಷ್ಟು ಬೆಂಕಿಯ ಕಿಡಿಯು

ಗಾಳಿಯ ಸಹಾಯದಿಂದ ವನವೆಲ್ಲವಂ ದಹಿಸುವಂತೆ ನನ್ನ ಅದೃಷ್ಟವು ನಿಮ್ಮ ಕೃಪಾಕಟಾಕ್ಷದಿಂದ ನನ್ನ ಶತ್ರುಗಳೆಲ್ಲರನ್ನೂ ನಾಶಪಡಿಸಿ ಪ್ರಕಾಶಿಸಬೇಕಲ್ಲದೆ ನನ್ನ ಪೌರುಷಬಲದಿಂದ ಶತ್ರುನಿಗ್ರಹವಾಗುವುದೆಂಬುವುದು ಬೇರೆ. ತೋರುವುದಿಲ್ಲ. ನಿಮ್ಮಂ ಶರಣಂ ಹೊಕ್ಕೆನು. ನಿಮ್ಮ ತೇಜೋಬಲದಿಂದ ಈ ಕ್ರೂರಕರ್ಮಿಗಳಾದ ಶತ್ರುಗಳಂ ನಿಗ್ರಹಿಸಿ ನನ್ನನ್ನು ಉದ್ಧರಿಸಬೇಕೆಂದು ಪಾದಗಳಂ ಪಿಡಿದಿರಲು ಚಾಣಕ್ಯನು ಚಂದ್ರಗುಪ್ತನಂ ನೋಡಿ:

ಎಲೈ, ಚಂದ್ರಗುಪ್ತನೇ, ನಿನ್ನ ಶತ್ರುಗಳಂ ನಿಗ್ರಹಿಸಿ ನಿನಗೆ ರಾಜ್ಯಾಧಿಪತ್ಯವನ್ನುಂಟುಮಾಡುವುದಕ್ಕೆ ನಾನು ಸಮರ್ಥನಹುದು. ಆದರೂ ನಿನಗೆ ಮಾತ್ರವೇ ದ್ರೋಹಿಗಳಾಗಿ ಪ್ರಜಾರಕ್ಷಣೆಯಂ ಮಾಡುತ್ತಿರುವ ನಂದರಂ ಅಕಾರಣವಾಗಿ ನಾನು ನಿಗ್ರಹಿಸಿದರೆ ಪ್ರತ್ಯವಾಯವೂ ಅಪಕೀರ್ತಿಯೂ ಉಂಟಾಗುವುವು. ನಮಗೆ ಮಾಡಿದ ಅಪರಾಧವಂ ತಿಳಿದು ಅವರಂ ನಿಗ್ರಹಿಸಿದರೆ ಬಾಧಕವಿಲ್ಲ. ನೀನು ಸಜ್ಜನನಾಗಿ ತೋರುತ್ತಿರುವೆ. ಆದರಿಂ ದುಷ್ಟರಾದ ಈ ನಂದರಿಗೆ ನನ್ನಲ್ಲಿ ಕೋಪ ಹುಟ್ಟುವ ಹಾಗೆ ಧರ್ಮವಿರುದ್ಧವಲ್ಲದ ಒಂದು ಕುಚೇಷ್ಟೆಯನ್ನು ಆಚರಿಸುತ್ತೇನೆ. ಅದಕ್ಕೆ ನಂದರು ಕ್ಷಮಿಸದೆ ನಿರಾಕರಿಸಿ ನನಗೆ ಕೋಪವುಂಟಾಗುವಂತೆ ಮಾಡಿಕೊಂಡರೆ ಆಗ ನಿನ್ನ ಕಾರ್ಯಕ್ಕೆ ಅಭಯವಂ ಕೊಡುವೆನು ಎಂದು ಚಂದ್ರಗುಪ್ತನಿಗೆ ಹೇಳಿ ಮಧ್ಯಾಹ್ನಿಕಕ್ಕಾಗಿ ಗಂಗಾನದಿಗೆ ಹೋಗುತ್ತಿದ್ದನು. ಆ ಸಮಯದಲ್ಲಿ ದೈವಯೋಗದಿಂದ ನವನಂದರು ನೂತನವಾಗಿ ರಚಿಸಿದ್ದ ಉದ್ಯಾನದ ರಮಣೀಯತ್ವವಂ ನೋಡಿ ತಮ್ಮ ಮನೆಯಂ ಕುರಿತು ಬರುತ್ತ ಮಾರ್ಗಮಧ್ಯದಲ್ಲಿ ಅನ್ನಸತ್ರವಂ ಕಂಡು ಬ್ರಾಹ್ಮಣರ ಭೋಜನಪಙ್ಕ್ತಿಯಂ ನೋಡಬೇಕೆಂದು ತಮ್ಮ ತಮ್ಮ ವಾಹನಂಗಳನ್ನಿಳಿದು ಒಳಪುಗಲು ಚಾಣಕ್ಯನು ಇದೇ ಸಮಯವೆಂದು ಹರಕುದೋತ್ರವನ್ನುಂಟುಕೊಂಡು ಪಂಜೆಬ್ರಾಹ್ಮಣನಂತೆ ಆ ಸತ್ರವಂ ಹೊಕ್ಕು ಅಲ್ಲಿದ್ದ ರಾಜಾರ್ಹವಾದ ಸುವರ್ಣ ಪೀಠವನ್ನು ಅಗ್ರಭಾಗದಲ್ಲಿ ಹಾಕಿಕೊಂಡು ಅದರಲ್ಲಿ ಕುಳಿತಿದ್ದನು.

ಆ ವೇಳೆಯೊಳ್ ನಂದರು ಪಙ್ಕ್ತಿಯಂ ನೋಡುತ್ತ ಬರುವಲ್ಲಿ ಆ ಬ್ರಾಹ್ಮಣನಂ ಕಂಡು ಮತ್ತರಾಗಿ ದೈವಸಂಕಲ್ಪದಿಂದ ವಿಮರ್ಶೆಯಂ ಮಾಡದೆ ಅಗ್ನಿಶಿಖೆಯಲ್ಲಿ ಆಹಾರಬುದ್ಧಿಯಿಂದ ಬೀಳಲೆಳಸುವ ಪತಂಗಗಳಂತೆ ಕ್ರುದ್ಧರಾಗಿ ಒಬ್ಬರ ಮುಖವನ್ನೊಬ್ಬರು ನೋಡುತ್ತ ತಮ್ಮ ದೂತರಂ ನಿರೀಕ್ಷಿಸಿ—ಇವನಾರೀ ಬ್ರಾಹ್ಮಣಾಧಮನು? ತುಚ್ಛನು! ಅಗ್ರಸ್ಥಾನಪೀಠದಲ್ಲಿ ಕಾಲ ಮೇಲೆ ಕಾಲನ್ನು ಹಾಕಿಕೊಂಡು ಎಲ್ಲರಿಗಿಂತಲೂ ತಾನೇ ಅಧಿಕನಾಗಿರುವಂತೆ

ಕುಳಿತಿದ್ದಾನೆ! ನೀವೆಲ್ಲರೂ ಯಾಕೆ ಸುಮ್ಮನೆ ಇದ್ದಿರೀ? ಎನಲು ಅದಂ ಕೇಳಿ ರಾಜಭಟರು—ಏಳು ಏಳು ಎಂದು ಚಾಣಕ್ಯನಂ ಬೆದರಿಸಲು ಆತನು ಅವರ ಮಾತುಗಳಂ ಲಕ್ಷೀಕರಿಸದೆ ಮೊದಲಿನಂತೆಯೇ ಕುಳಿತಿರಲಾಗಿ ಕ್ರುದ್ಧರಾದ ದೂತರು ಅವನ ಕೈಯಂ ಪಿಡಿದು ಈಚೆಗೆ ಎಳೆದರು. ಅವರು ಎಳೆದ ರಭಸಕ್ಕೆ ತನ್ನ ಜುಟ್ಟು ಬಿಚ್ಚಿ ಹೋಗಲು ಆಗ ಚಾಣಕ್ಯನು ಚಂದ್ರಗುಪ್ತನ ಅದೃಷ್ಟ ಒದಗಿತೆಂದು ತಿಳಿದು ಮಹಾಕೋಪದಿಂದೆದ್ದು ಕಣ್ಣುಗಳಂ ಕೆಂಪು ಮಾಡುತ್ತ ಹುಬ್ಬುಗಳಂ ಗಂಟಿಕ್ಕಿಕೊಂಡು ಪೀಠವನ್ನೊದೆದು ಕ್ರುದ್ಧನಾದ ಮೃತ್ಯುವಿನಂತೆ ಔಡುಗಳಂ ಕಚ್ಚುತ್ತ ಹಲ್ಲುಗಳಂ ಮಸೆಯುತ್ತ ಪಾದಗಳಂ ಸಡುಗಿಸುತ್ತ ಮೊರೆದು ಮುಸುಗುಟ್ಟುತ್ತ ಸ್ವಲ್ಪ ಹೊತ್ತಿನ ಮೇಲೆ ಕೆರಳಿದ ಕೋಪವಂ ಮನದಲ್ಲಿ ಅಡಗಿಸಿ ನಂದರಂ ಬಿರಬಿರನೆ ನೋಡುತ್ತ ಇಂತೆಂದನು :

ಎಲೈ ನಂದಾಧಮರುಗಳಿರಾ, ಅಶನಾರ್ಥಿಯಾಗಿ ಬಂದ ಅತಿಥಿಯಂ ನಿರಾಕರಿಸಿದ ಗೃಹಸ್ಥನ ಆಯುಷ್ಯಮಂ ಮೃತ್ಯುವು ಅಪಹರಿಸುವುದೆಂದು ಹೇಳುವ ಶಾಸ್ತ್ರಾರ್ಥವು ನಿಮ್ಮಲ್ಲೀ ಫಲಿಸುವಂತೆ ತೋರುತ್ತಿದೆ. ನಿರಪರಾಧಿಯಾಗಿ ಭೋಜನಪಜ್ತ್ತಿಯಲ್ಲಿ ಕುಳಿತಿದ್ದ ನನ್ನನ್ನು ಬ್ರಾಹ್ಮಣಾಧಮನೆಂದೂ ತುಚ್ಛನೆಂದೂ ಮಹಾಪರುಷವಾಕ್ಯದಿಂದ ಎಲ್ಲರೂ ನೋಡುವಂತೆ ಅಪಮಾನಪೂರ್ವಕವಾಗಿ ನನ್ನನ್ನು ಹೇಗೆ ಕೆಳಗೆ ಎಳಸಿದವರಾದಿರೋ ಮುಂದೆ ನಿಮ್ಮ ಪ್ರಾಣಾಪಹಾರವಂ ಮಾಡಿ ಕಾಲುಗಳಿಗೆ ಹಗ್ಗವಂ ಬೀರಿ ಹದ್ದು ನಾಯಿ ನರಿ ಪಿಶಾಚಿ ಇವುಗಳಿಗೆ ಗ್ರಾಸಾರ್ಥವಾಗಿ ಮಾರ್ಗವಂ ಬಿಟ್ಟು ಶವಗಳನ್ನು ಬೇಲಿಯ ಒಳಯಿಂಕೆ ಎಳಸಿಹಾಕುವದನ್ನು ಹಾಗೆಯೇ ಈ ಸಭಾ ಜನರು ನೋಡಿಯಾರು. ಭೃಗುವಂಶನಾದ ಓರ್ವ ಋಷಿಯು ತನಗೆ ಅಪರಾಧಿಗಳಾದ ಹೇಹಯರೆಂಬ ದುಷ್ಟಕ್ಷತ್ರಿಯರಂ ತನ್ನ ದೃಷ್ಟಿಯಿಂದಲೇ ನಾಶವಂ ಮಾಡಿದಂತೆ ನನ್ನ ತಪೋಲೇಶವ್ಯಯದಿಂದ ಈಗಲೇ ನಿಮ್ಮ ನಾಶವಂ ಮಾಡಿದರೆ ನನ್ನ ಪೌರುಷಕ್ಕೆ ಪ್ರಯೋಜನವಿಲ್ಲದೆ ಹೋಗುವುದು. ಭೃಗುನಂದನನಾದ ಶುಕ್ರಾಚಾರ್ಯನಿಂದ ಪ್ರಣೀತವಾದ ದಂಡನೀತಿಶಾಸ್ತ್ರಾಧ್ಯಯನದಿಂದ ನಾನು ಅವರಿಗೆ ಧರ್ಮಪುತ್ರನಾದುದು ಸತ್ಯವಾದರೆ ಭೃಗುಕುಲೋತ್ಪನ್ನನಾದ ಪರಶುರಾಮನು ದುಷ್ಟಕ್ಷತ್ರಿಯರಂ ಬಹುವಾಗಿ ಸಂಹರಿಸಿ ವಿಶ್ರಮಿಸಿಕೊಂಡಂತೆ ದುಷ್ಟಕ್ಷತ್ರಿಯರಾದ ನಿಮ್ಮಂ ಸಂಹರಿಸಿ ಕಾಲಸರ್ಪದಂತೆ ಬಿಟ್ಟಿರುವ ಈ ನನ್ನ ಜುಟ್ಟಂ ಕಟ್ಟುವೆನು. ಹಾಗೆ ಮಾಡದೆ ಕಟ್ಟಿದವನಾದರೆ ಸ್ವಧರ್ಮವಂ ಬಿಟ್ಟು ಡಾಂಭಿಕನಾಗಿ ಅನ್ಯಧರ್ಮವನ್ನಾಚರಿಸುವ ಮನುಷ್ಯಾಧಮನ ದುರ್ಗತಿಗೆ ನಾನು ಗುರಿ

ಯಾಗುವೆನು. ಹೀಗೆಂದು ಕ್ರೂರಪ್ರತಿಜ್ಞೆಯಂ ಮಾಡಿ ಎಲ್ಲರೂ ನೋಡು ವಂತೆ ಚಾಣಕ್ಯನು ಅಲ್ಲಿಂದ ಎದ್ದು ಹೋಗುತ್ತಿರಲು ಆಗ ಮಹೋತ್ಪಾತ ಗಳಾದ ಭೂಕಂಪವೂ ಧೂಮಕೇತುಗಳೂ ಉದ್ಭವಿಸುತ್ತಿರಲು ಅದಂ ನೋಡಿ ಸಭಾಜನರು ಮಹಾಭೀತರಾದರು.

## ಅಭ್ಯಾಸ

**೧. ಕಠಿಣ ಶಬ್ದಗಳ ಅರ್ಥ :—**

ನೈಮಿಶಾರಣ್ಯ—ಮಹಾಭಾರತಾದಿ ಗ್ರಂಥಗಳಲ್ಲಿ ಉಕ್ತವಾಗಿರುವ ಉತ್ತರ ಭಾರತದ ಒಂದು ಕಾಡು. ನಿರೋಧ—ಅಡ್ಡಿ. ಮೂಲೋತ್ಪಾಟನ—ಬೇರನ್ನು ಕೀಳು ವುದು. ಸಮೂಲವಾಗಿ—ಬೇರು ಸಹಿತವಾಗಿ. ಮಧುಪರ್ಕ—ಜೇನು ಬೆರಸಿದ ಹಾಲು. ಪರಿಗ್ರಹಿಸು—ಸ್ವೀಕರಿಸು. ಅರ್ಘ್ಯ ಪಾದ್ಯ—ಅತಿಥಿ ಮತ್ತು ಗುರು ಜನರಿಗೆ ಮುಖ ಕೈಕಾಲು ತೊಳೆಯಲು ಕೊಡುವ ನೀರು. ಜ್ಞಾತಿ—ನೆಂಟ. ಭ್ರಾತೃ— ಸಹೋದರ. ಅರ್ಬುದ—ನೂರು ಕೋಟಿ ದಶ ಲಕ್ಷಗಳು. ನಿಗ್ರಹಿಸು—ಸದೆಬಡೆ, ನಿವಾರಿಸು. ಪ್ರತ್ಯವಾಯ—ಅಪಜಯ. ಮಧ್ಯಾಹ್ನಿಕ—ಮಧ್ಯಾಹ್ನದಲ್ಲಿ ಮಾಡ ಬೇಕಾದ ವೈದಿಕ ಪೂಜೆ. ಪಂಜೆ ಬ್ರಾಹ್ಮಣ—ಬಡ ಬ್ರಾಹ್ಮಣ. ಸುವರ್ಣ—ಚಿನ್ನ. ಮತ್ತ—ಮದಿಸಿದ. ಕ್ರುದ್ಧ—ಕೋಪ. ಪರುಷವಾಕ್ಯ—ಒರಟು ಮಾತು. ಭೃಗು— ಬ್ರಹ್ಮನ ಹೃದಯದಿಂದ ಜನಿಸಿದ ಒಬ್ಬ ಬ್ರಹ್ಮರ್ಷಿ. ಮುಸುಗುಡು—ಕೋಪಿಸಿಕೊ. ಅಶನಾರ್ಥಿ—ಊಟಕ್ಕಾಗಿ ಬಂದವನು. ಗ್ರಾಸ—ಆಹಾರ. ಒಳಯಿಂಕೆ—ಒಳಕ್ಕೆ. ಪ್ರಣೀತ—ರಚಿತವಾದ. ಡಾಂಭಿಕ—ಕಪಟಿ.

**ಟಿಪ್ಪಣಿ :—**

ಚಂದ್ರಗುಪ್ತ—ಕ್ರಿ. ಪೂ. ೩೨೭-೨೯೮ರ ವರೆಗೆ ಪಾಟಲಿ ಪುತ್ರದಲ್ಲಿ ಆಳುತ್ತಿದ್ದ ಮಗಧ ಸಾಮ್ರಾಜ್ಯದ ಚಕ್ರವರ್ತಿ.

ಚಾಣಕ್ಯ—ಸಂಸ್ಕೃತದಲ್ಲಿ ಅರ್ಥಶಾಸ್ತ್ರ ಬರೆದಿದ್ದಾನೆ. ಚಂದ್ರಗುಪ್ತನ ಪ್ರಧಾನಿ ಯಾಗಿದ್ದ.

ನಂದರು—ಮೌರ್ಯರಿಗಿಂತ ಹಿಂದೆ ಮಗಧ ರಾಜ್ಯವನ್ನು ಆಳುತ್ತಿದ್ದ ರಾಜರು.

**೨. ಇವುಗಳಿಗೆ ಸಂದರ್ಭೋಚಿತವಾದ ಟಿಪ್ಪಣಿ ಬರೆಯಿರಿ :—**

೧. ಬಹುಜನ ಹುಟ್ಟಿದರೆ ಬಹುಕ್ಲೇಶವುಂಟೆಂಬ ಲೋಕವಾರ್ತೆಯು ನನ್ನಲ್ಲೇ ಅನುಭವಕ್ಕೆ ಬಂದಿತು.

೨. ನನಗೆ ಮಾಡಿದ ಅಪರಾಧಮಂ ತಿಳಿದು ಅವಳಂ ನಿಗ್ರಹಿಸಿದರೆ ಬಾಧಕ ವಿಲ್ಲ.

೩. ಕಾಲಸರ್ಪದಂತೆ ಬಿಚ್ಚಿರುವ ಈ ನನ್ನ ಜುಟ್ಟಂ ಕಟ್ಟುವೆನು.
೪. ಅಗ್ನಿಶಿಖೆಯಲ್ಲಿ ಆಹಾರ ಬುದ್ಧಿಯಿಂದ ಬೀಳಲೆಳಸುವ ಪತಂಗಗಳಂತೆ.

೩. ಪ್ರಶ್ನೆಗಳು :—

೧. ಚಂದ್ರಗುಪ್ತ ಯಾರು ? ಅವನಿಗೆ ಚಾಣಕ್ಯ ಸಹಾಯ ಮಾಡಲು ಕಾರಣವೇನು ?

೨. ಚಾಣಕ್ಯನ ಶಪಥಕ್ಕೆ ಕಾರಣವೇನು ?

೩. ಚಂದ್ರಗುಪ್ತ ಚಾಣಕ್ಯನನ್ನು ಸತ್ಕರಿಸಿ ತನ್ನ ಕಾರ್ಯಸಾಧನೆಗೆ ಹೇಗೆ ತಳಹದಿ ಹಾಕಿದನು?

# ಬಸವಣ್ಣನ ಪ್ರಲಾಪ

## ಹರಿಹರ

ಹರಿಹರ ಹದಿಮೂರನೆಯ ಶತಮಾನದಲ್ಲಿದ್ದ ಶ್ರೇಷ್ಠಕವಿ. ೧೨೨೦ರಲ್ಲಿ ಜನ್ಮವೆತ್ತಿ ೧೨೮೫ರ ಸುಮಾರಿನವರೆಗೂ ಬದುಕಿದ್ದಿರಬಹುದೆಂದು ವಿದ್ವಾಂಸರ ಅಭಿಪ್ರಾಯ. ಪಂಪಾ ಕ್ಷೇತ್ರದಲ್ಲಿ ಜನಿಸಿ, ಹಳೆಯ ಬೀಡಿನಲ್ಲಿ ಹೊಯ್ಸಳ ದೊರೆಗಳ ಆಶ್ರಯದಲ್ಲಿ ಉನ್ನತಾಧಿಕಾರಿಯಾಗಿದ್ದು "ಈಶಸೇವೆಯಲ್ಲದೆ ಮನುಜಸೇವೆ ಅಗ್ರಾಹ್ಯ" ವೆಂದು ನಿಶ್ಚಯಿಸಿ, ವೈರಾಗ್ಯಪರನಾಗಿ ಪಂಪಾ ಕ್ಷೇತ್ರಕ್ಕೆ ಹಿಂದಿರುಗಿ, ಅಂದಿನಿಂದ ಶಿವಪೂಜೆ, ಶಿವಕೀರ್ತನೆ ಮತ್ತು ಶಿವ ಗೋತ್ರ ಸಂಕೀರ್ತನೆಗಳಲ್ಲಿ ತಲ್ಲೀನನಾದಂತೆ ಕಾಣುತ್ತದೆ.

ಹರಿಹರ ಕ್ರಾಂತಿಕವಿ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವನಿಗೊಂದು ವಿಶಿಷ್ಟವಾದ ಸ್ಥಾನವಿದೆ. ಹೊಸದೊಂದು ಸಂಪ್ರದಾಯವನ್ನಾರಂಭಿಸಿ ಯುಗ ನಿರ್ಮಾಪಕನೆಂಬ ಹೆಸರಿಗೆ ಪಾತ್ರನಾದನು. ಸವೆದ ಜಾಡನ್ನು ಬಿಟ್ಟು ಹೊಸ ಜಾಡನ್ನು ಹಿಡಿದನು. ರೂಢಿಯ ಕೃತಕ ಛಂದಸ್ಸನ್ನು ತೊರೆದು ರಗಳೆಯ ಮಾರ್ಗವನ್ನು ಹಿಡಿದು, ಷಟ್ಪದೀಮಾರ್ಗಕ್ಕೆ ತೋರುಗೈಯಾದನು. ರಾಜ ಮಹಾರಾಜರ ಸಂಕೀರ್ತನೆಯನ್ನುಳಿದು, ಶಿವಶರಣರ ಸಾಮಾನ್ಯರ ಮಹಿಮಾ ವರ್ಣನೆಗೆ ಕೈಹಾಕಿದನು. ಆಂಗ್ಲ ಸಾಹಿತ್ಯದಲ್ಲಿ ಕಾಣುವ ಕಥನಕವನ ಪದ್ಧತಿ ಅಂದೇ ಕನ್ನಡದಲ್ಲಿ ಹರಿಹರನಿಂದ ಆರಂಭವಾಯಿತು.

ಅವನು ರಚಿಸಿರುವ ಗ್ರಂಥಗಳ ಸಂಖ್ಯೆ ಇನ್ನೂ ನಿಶ್ಚಿತವಾಗಿಲ್ಲ. ಗಿರಿಜಾ ಕಲ್ಯಾಣ (ಚಂಪೂಗ್ರಂಥ), ಪಂಪಾಶತಕ, ರಕ್ಷಾಶತಕ ಮುಡಿಗೆಯ ಅಷ್ಟ ಕಗಳ ಜೊತೆಗೆ ಅನೇಕ ಪುರಾತನರ ಮತ್ತು ನೂತನರ ಕತೆಗಳನ್ನು ರಗಳೆಯ ಮೂಲಕ ಹಾಡಿದ್ದಾನೆ. ಅವನು ಬರೆದಿರುವ ರಗಳೆಗಳ ಸಂಖ್ಯೆ ಸುಮಾರು ನೂರಿಪ್ಪತ್ತಿರಬಹುದೆಂದು ವಿದ್ವಾಂಸರು ಊಹಿಸುತ್ತಾರೆ. ಅವುಗಳಲ್ಲಿ ನಂಬಿ ಯಣ್ಣನ ರಗಳೆ ಮತ್ತು ಬಸವರಾಜದೇವರ ರಗಳೆಗಳು ದೊಡ್ಡವು ಮತ್ತು ಹೆಚ್ಚು ಪ್ರಸಿದ್ಧಿಯಾದುವು.

'ಬಸವಣ್ಣನ ಪ್ರಲಾಪ' ವನ್ನು 'ಬಸವರಾಜದೇವರ ರಗಳೆ' ಯಿಂದ ಆಯ್ದುಕೊಂಡಿದೆ.

ಇಂತು ಸಕಲದೇವವಲ್ಲಭನಪ್ಪ ಸರ್ಪಾಭರಣನಂ ದರ್ಪಕಧ್ವಂಸಿಯಂ ಕೂರ್ಪರ ಕುಲದೈವಮಂ ನೋಳ್ಪರ ಕಣ್ಣ ಮಣಿಯುಂ ಬೇಳ್ಪರ ಭಾಗ್ಯನಿಧಿ ಯಂ ಚಿಂತಿಸುವರ ಚಿಂತಾರತ್ನವೆನಿಪ ಸಂಗಮೇಶ್ವರನಂ ಕಪ್ಪಡಿಯ ಸಂಗಮ ದೊಳೊಪ್ಪದಿಂದರ್ಚಿಸುತ್ತಮಿಪ್ಪ ಸಮಯದೊಳು, ಒಂದು ದಿವಸಂ ಬಸವ

ರಾಜಂ ಸಂಧ್ಯಾಸಮಯದವಸರ ಸೌರಭ್ಯಸಂಯುಕ್ತ ಶೀತಳಸಲಿಲ ನೂತನ ಮಳಯಜ ನವ್ಯಪ್ರಸೂನ ನಾನಾವಿಧಪೂಜಾಸಮರ್ಪಿತ ಷಡುರಸಾಯನ ನೈವೇದಿತ ಸರ್ವಾಂಗಶರೀರ ಪ್ರಣತನಾಗಿ ಸಂಗಪ್ರಸಾದಮಂ ಸಾದರಂ ಕೈಕೊಂಡು ರಂಗಮಂಟಪದೊಳು ಸಂಗಮ ಧ್ಯಾನನಿದ್ರಾಮುದ್ರೆಯೊಳಿಪ್ಪಲ್ಲಿ ;

ಕನಸಿನೊಳು : ಬೆಳೆದು ಕವಲಿಱಿದು ನೀಳ್ದ ಪ್ರವಾಳಜಾಳದಂತೆ ಬೆಂಬಳಿವಿಡಿದಿಳಿದ ಕೆಂಜೆಡೆಗಳಿಂ, ಸುತ್ತಿದ ಜಟಾಬಂಧದೊಳಗಣ ಸುರನದಿಯೆಂಬ ಸರೋಜಿನೀ ತಟದೊಳಗಿರ್ದ ಬಿಸಕಂದದಂಕುರದಂತಿರ್ದ ಚಂದ್ರಕಳೆಯಿಂ, ವಿದ್ಯುಲ್ಲತಾಗರ್ಭೀಕೃತ ಶಾರದಾಭ್ರವಿಭ್ರಮದಂತೆ ಭಸಿತಂ ಮುಸುಂಕಿದ ಬಿಸುಗಣ್ಣಿಂ ಮೆಱೆವ ಲಲಾಟಪಟ್ಟದಿಂ, ಶೃಂಗಾರದ ತವರ್ಮನೆಯಂತಿರ್ದ ಮುಖಮಂಡಲದಿಂ, ನಯಮಂ ಕಱೆವ ನಾಗ ಕುಂಡಲದಿಂ, ಹರನೊಳ್ ನೆರೆಯಲ್ ಬಂದ ಕಾಳಿಂದೀನದಿ ಸುರನದಿಗೆ ಸೋಲ್ತಿಳಿದಂತಿರ್ದ ಕೊರಳಗರಳದಿಂ, ಕಲ್ಪಕುಜದ ಶಾಖೆಗಳಂತಿರ್ದ ದಶಭುಜಂಗಳ ತುಱುಗಲಿಂ, ವೇದಂಗಳ್ ತನ್ನ ಕಾಣದಂತೆ ಮುಸುಂಕಿದಮಾಯಾಪಟಲವೆನಿಪ ಗಜಚರ್ಮದಿಂ, ಎಳವಿಸಿಲ ಬೆಳಗಂ ತರುಣ ತರಣಿಗೆ ಕಡಂಗೊಡುವ ಪ್ರಭಾಮಕೂಲದಂತಿರ್ದ ಪುಲಿದೊಗಲಿಂದೊಪ್ಪಿ, ಪಶುಪತಿ ಬಸವನ ಮನದ ಮೊನೆಯೊಳೊಪ್ಪೆ ಮೂರ್ತಿಗೊಂಡು ;

ಎಲೆ ಮಗನೆ ಬಸವ ಬಸವಣ್ಣ ಬಸವಿದೇವ, ನಿನ್ನಂ ಮಹೀತಳದೊಳು ಮೆಱೆದಪೆನು. ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು—ಎಂಬ ನುಡಿಯೊಡನೆ ಕನಸಿನ ಮಾತು ಮನವನಿಮ್ಮೈಗಂಡು, ನಿದ್ರೆ ತಿಳಿದು ಕಣ್ದೆ ಱೆದು ಕೆಲಬಲನಂ ನೋಡಿ ಬೆಚ್ಚಿ ಬೆಗಡುಗೊಂಡು ಅನುತಾಪವೇಱೆ ವಿರಹಂ ಹೊಮ್ಮಿ ಕಣ್ಗೆಟ್ಟಗಲಲಾಱದೆ ರಂಗಮಂಟಪದ ಕಂಭಮಂ ಘಳಿಲನೆ ಹಾಯ್ದು. ದೇವದೇವ ಸಂಗ, ಕಂಡ್ಯೆ. ಕೆಟ್ಟೆಕೆಟ್ಟೆಂ. ತೊಟ್ಟನಿಂತು ಕಣ್ ನೋಡಪೆ ಹುಣ್ಣ ನೋಡದೆ ಹೋಗೆಂಬರೆ? ಗಗನದಿಂದಿಳಿವಂಗಾಧಾರವಾಗುತ್ತೆ ತಪ್ಪುವರೆ? ಕಾಳ್ಕಿಚ್ಚಿನಿಂ ಬೇವಂಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ? ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ? ನರಕದೊಳಾಳಲೀಯದೆ ಚಂಡಿಕೆವಿಡಿದುದ್ಧರಿಸಲೆಂದಾಳ್ಕೊಂಡ ಗುರುವೆ ಪರಮಬಂಧುವೆ ಪ್ರಾಣವೆ, ಬೆಳುದಿಂಗಳೇಕೆ ಬಿಸುಪೇಕೆ? ಅಮೃತವೇಕೆ ವಿಷವೇಕೆ? ಬೆಳಗೇಕೆ ತಮವೇಕೆ? ನೀನೇಕೆ ಈ ನುಡಿಯೇಕೆ? ಹೊದ್ದಿದರಂ ಹೋಗೆಂಬರೆ? ಸಾರ್ದರಂ ಸೈರಿಸೆಂಬರೆ? ನಂಬಿದವರ ಗೋಣಂ ಕೊಯ್ವರೆ? ಶಿಶುವನಿಱಿವರೆ? ಪಶುವಂ ಕೊಲುವರೆ? ಎನ್ನಂ ಬಿಡುವರೆ? ಕರುಣಿ ಕರುಣಿ, ಕರುಣಂ ಲೇಸಾಯ್ತು. ಅರ್ಜಿಸಿತಕ್ಕೆ ಫಲವಾಯ್ತು. ಇನ್ನೇನು ಇನ್ನೇನು ?—

ಎಂದೊಟ್ಟೆ ಒಜಿಲಿ ಪರಿತಂದು ಸಂಗನಂ ತಕ್ಕೈಸಿ ಪಳವಿಸಿ ಪಲುಂಬಿ ಗೋಳಿಟ್ಟು ಆಲಿಟ್ಟು ಸಿವದಿಟ್ಟು ಮೊಜೆಯಿಟ್ಟು ಮೂರ್ಛೆಸುತ್ತೆಂತಕ್ಕೆಚ್ಚತ್ತು ಮೆಲ್ಲಮೆಲ್ಲ ನಾಲಿಂಗನಮಂ ಸಡಿಲ್ಚಿ ನಡೆತಂದು;

ಮನವಲ್ಲದ ಮನದೊಳಗ್ಘವಣಿಹೂಗಳಂ ಬೇಗಂ ತಂದಂತಂತೆ ಪೂಜೆ ಗೆಯ್ದಾರೋಗಣೆಗಿತ್ತು, ಮೋಹದ ಮುನಿಸು ಮನದೊಳ್ ತೀವಿ ಪ್ರಣಯ ಕಲಹಂ ಬಲಿದು ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು ಪಶುಪತಿಯ ಪದದ ಕೆಳಗೆ ನಿರ್ವೇಗದಿಂ ಪಟ್ಟಿರ್ದಿರೆ; ರಾತ್ರಿಯೊಳು ನೇತ್ರತ್ರಯಂ ಭಕ್ತ ನಿರವಂ ನೋಡಿ ಕೊರಗಿ ಮೋಹದ ಮಹಿಮೆಗೆ ಮರವಟ್ಟು ಭಕ್ತಿಯ ಭರಕ್ಕೆ ಕೌತುಕಂಗೊಂಡಗಲಲಾಜಿದ ಮಗಂಗೆ ಮಿಗೆ ಕರುಣಿಸಿ, ಮತ್ತೆ ಕನಸಿ ನೊಳು ಬಂದು—ಎಲೆ ಮಗನೆ ಎಲೆ ಕಂದ ಎಲೆ ಬಸವ, ನಿನ್ನನಗಲಿ ನಾನಿರ ಲಾಜೆ. ನಿನಗಿನಿತು ನಿರೋಧವೇಕೆ? ಜೇಡಯ್ಯ ಜೇಡೆನ್ನರಸ, ಜೇಡೆನ್ನ ಭಕ್ತನಿಧಿಯೆ. ನಿನ್ನೊಡನೊಡನೆ ಬಿಡದೆ ಬಪ್ಪೆಂ. ನಾಳೆ ಮಧ್ಯಾಹ್ನದೊಳು ಶುದ್ಧಾಂಗನಾಗಿ ಬಂದು ನಂದಿಕೇಶ್ವರನ ಮುಂದೆನ್ನಂ ನೆನೆವುತ್ತಂ ಕುಳ್ಳಿರೆ, ವೃಷಭನ ಮುಖಾಂತರದಿಂದಾವೆ ಬಂದಪೆವು ಆತಂ ನಿನಗೆ ಸದ್ಗುರು. ಅಲ್ಲಿಂ ಬಳಿಕ್ಕಂ ಎಮ್ಮನರ್ಚಿಸುತ್ತೆ ಭಕ್ತರ ಬಂಧುವಾಗಿ ಶರಣರ ಪರುಷದ ಕಣಿಯಾಗಿ ನಿತ್ಯ ಸುಖಿಯಾಗಿ ಪರಸಮಯದ ಗರ್ವಮಂ ನಿಲಿಸಿ ಭಕ್ತರಂ ಗೆಲಿಸಿ ಪ್ರತ್ಯಕ್ಷಂಗಳಂ ತೋರಿ ಲೌಕಿಕಧರ್ಮಮಂ ಮೀಜಿ ಕಡುನಿಷ್ಠೆಯಂ ಹೇರಿ ಪರಮಸುಖದಿಂದಿರ್ಪುದು—ಎಂದು ಬೆಸಸಿ ಬಿಜಯಂಗೆಯ್ಯೆ;

ಹರಕರುಣೋದಯಮಾದಂತರುಣೋದಯಮಾಗೆ, ನಿದ್ರೆತಿಳಿದೆದ್ದು ಸಾಲ್ಗೊಂಡ ಪುಳಕಂಗಳಂ ಸಂತೈಸಿಕೊಂಡಾನಂದಾಶ್ರುಗಳಂ ಮುಂದು ಗೊಳಿಸಿ ಸಂತಸಮಂ ಸೈತಿಟ್ಟು ಪರಿಕಿಸಿ ನೋಡಿ, ಹರನ ಕರುಣಕ್ಕೆ ಹಾರೈಸಿ ಭಕ್ತಿಭರದಿಂ ಭಾರೈಸಿ ಮನದ ಮೊನೆಯಂ ಕೋರೈಸಿ ಬುದ್ಧಿಯೊಳಗಂ ಸಾರೈಸಿ ಅಹಂಕಾರಮಂ ತೇರೈಸಿ ಚಿತ್ತದೊಳು ಪೂರೈಸಿ, ಭೋಂಕನೆದ್ದು ಸಂಗಂಗೆ ಪೊಡಮಟ್ಟು ತದನುಜ್ಞೆಯಂ ಕೈಕೊಂಡು, ಪುಣ್ಯದ ಬಿತ್ತಂ ಬೆಳಗು ವಂತೆ ದಂತಪಂಕ್ತಿಯಂ ಕಾಂತಿಯಿಟ್ಟು, ಏಕನಿಷ್ಠೆಯ ವಜ್ರಾಂಗಿಯಂ ತೊಡು ವಂತೆ ಭಸಿತೋದ್ಧೂಳನಂ ಮಾಡಿ, ಸುಕೃತಮನಪ್ಪುವಂತೆ ಧವಳವಸ್ತ್ರ ಮನುಟ್ಟು ಹೊದೆದು, ಪುಣ್ಯದ ಫಲಂಗಳನಲಂಕರಿಸಿಕೊಂಬಂತೆ ರುದ್ರಾಕ್ಷೆ ಗಳಂ ತೊಟ್ಟು, ಸಂಗಮೇಶ್ವರಂಗೆ ಮಜ್ಜನ ಪೂಜೆ ಆರೋಗಣೆಗಳನೇಕಚಿತ್ತ ದೊಳು ಕೈಕೊಳಿಸಿ ಪೊಡಮಟ್ಟು ನಡೆತಂದು—

ರಂಗಮಂಟಪದೊಳು ಕುಳ್ಳಿರ್ದ ದೃಷ್ಟಿಮಾರಿಯ ದೃಢಚಿತ್ತಂಗೆ ಕರ್ಣ

ದ್ವಯದ ಕಮನೀಯಂಗೆ ಶೃಂಗಯುಗಳದಭಂಗಂಗೆ ಕಕುದ್ವಳಯದ ಪ್ರಕೃತಿ
ರಹಿತಂಗೆ ವಾಳದಂಡದ ಬೋಳೆಯಂಗೆ ಬಸವಣ್ಣಂ ವೈಯಿಕ್ಕಿ ಕುಳ್ಳಿರ್ದು,
ಸುಲಿಪಲ್ಲ ಬೆಳಗುಂ ಕಣ್ಗಳ ಕಾಂತಿಯುಂ ಮುಖದ ಶಾಂತಿಯ ಪೊಳಪುಂ
ದುಕೂಲದ ಧವಳಮರೀಚಿಯುಂ ಭಸಿತದ ಪ್ರಭೆಯುಂ ದಟ್ಟೈಸಿ ಮೆಱೆಯೆ
ಮುಸುಂಕಿ ಗಂಗೆಯೊಳವಗಾಹಮಿಪ್ಪ ಪುಣ್ಯಪುರುಷನಂತೊಪ್ಪಿ, ಹೃದಯ
ಕಮಳಮಧ್ಯಸ್ಥಿತ ಸಂಗಮೇಶ್ವರ ಧ್ಯಾನಾರೂಢನಾಗಿರ್ಪ ಸಮಯದೊಳು;
ಪಶುಪತಿ ವೃಷಭೇಂದ್ರಂಗೆ ಮನದೊಳು ಸೂಚಿಸೆ, ಹಸಾದವೆಂದು ನಂದಿಕೇ
ಶ್ವರಂ ಸಂಗಮೇಶ್ವರ ಲಿಂಗಮಂ ನೆನೆಯೆ ಧ್ಯಾನಂ ಬಲಿದು ಶಿವಲಿಂಗಂ
ಮೂರ್ತಿಗೊಂಡು ನಂದಿಯ ಹೃದಯಕಮಳಮನೊತ್ತರಿಸಿ ಪೊಱಮಟ್ಟು
ಸದ್ಯೋಜಾತಮುಖಮಂ ಮುಂತಿಟ್ಟೊಳಗೊಳಗೆ ಗಳಗಳನೆ ನಡೆದು ಬರೆ;
ಧರ್ಮಮುಖವರಳ್ವಂತೆ ಮುಕ್ತಿಯ ಸೆಜ್ಜೆ ತೆಗೆವಂತೆ ವೃಷಭನ ಮುಖಂ
ವಿಕಾಸಮನೆಯ್ದೆ, ಜಿಹ್ವೆ ಸಿಂಹಾಸನಂಗೊಂಡು ನಂದಿಯ ಮುಖದಿಂದೊಗೆತಪ್ಪ
ದಿವ್ಯಲಿಂಗಮಂ ಸಂಗನಬಸವಂ ಸ್ನೇಹರಸಭರಿತ ಸಾತ್ವಿಕದೃಷ್ಟಿಯಿಂದಾಲಿಂ
ಗಿಸುವಂತೆ ನೋಡಿ ನೋಡಿ ಮನದೊಳೋವಿ, ಹೃತ್ಕಮಳದೊಳು ಬೆಳೆದ
ಲಿಂಗಕ್ಕೆ ಕರಕಮಳಮನಾಂತು ನಂದಿಯ ನಾಲಗೆಯ ತುದಿಗಂ ತನ್ನ ಕರ
ಪಲ್ಲವಕಂ ಸಂದಿಲ್ಲದಂತೆ ಕೈಯೊಡ್ಡಿರೆ;

ವೃಷಭರಾಜಂ ಪತಿಯನುಜ್ಞೆಯೊಡನೆ ಬಸವಣ್ಣನ ಹಸ್ತದೊಳು ಸಂಗ
ಮೇಶ್ವರ ಲಿಂಗಮಂ ಭೋಂಕನೆ ಬಿಜಯಂಗೆಯ್ಸೆ, ಮೃದು ಮೃದಂಗಪಟಹ
ಕಹಳಾನಿನಾದ ಸುಮನಸವೃಷ್ಟಿಗಳ ನಡುವೆ ಸುಪುತ್ರನಂ ನಿಜಜನಕಂ
ಮೂರ್ಧ್ನಿಘ್ರಾಣಮಂ ಮಾಡುವಂತೆ ವೃಷಭರಾಜಂ ಮುಖಮಂಡಲಮಂ
ಬಸವನ ಮಸ್ತಕದೊಳಿಟ್ಟು, ಪಂಚಾಕ್ಷರಿಯ ಸಂಚಮನಱಿಪಿ ಅಮೃತಮಯ
ಲಾಲಾಜಳದೊಳಭಿಷೇಕಮನಲಂಕರಿಸಿ ಸತ್ಶಿಷ್ಯೋಪದೇಶಮಂ ಶಾಂತಮ
ಯಂಗೆ ಮಾಡಿ ಸ್ನೇಹದಿಂ ನೋಡಿ ಕಾರುಣ್ಯಮಂ ನೀಡಿ ಸಾಮರ್ಥ್ಯಮಂ
ಕೂಡಿ, ನಂದೀಶ್ವರಂ ಸಂಗಮೇಶ್ವರಂಗೆಱಗಿ ಮುನ್ನಿನಂತೆ ಶಿವಲಿಂಗ ಶ್ರೀಪಾದ
ನಿರಂತರಾವಲೋಕನಾಗಿರೆ;

ಸಂಗನಬಸವಂ ಬಸವಿದೇವಂ ಸದ್ಗುರೂಪದೇಶಲಭ್ಯಮಾನ ಕರಕಮ
ಳಸ್ಥಿತ ಶಿವಲಿಂಗೋತ್ಪನ್ನ ಪರುಷಪುಳಕಶರೀರ ಸುಖಜಳಬಿಂದು ಸಂದಷ್ಟ
ನಯನಪುಷ್ಪಸಂಯುತ ಶೈವಸಾಮ್ರಾಜ್ಯಪ್ರಾಜ್ಯನಾಗಿ, ರಂಗಮಂಟಪಂ
ವಿವಾಹಮಂಟಪವಾಗೆ ಪರಿವಾರದೇವರುಂ ನಿಬ್ಬಣಿಗರಾಗೆ ಕರಣಂಗಳೆ ಸುವಾ
ಸಿನಿಯರಾಗೆ ಸಕಲೇಂದ್ರಿಯಂಗಳಾರತಿಯನೆತ್ತೆ ಭಕ್ತಿರಸಂ ಕೈದಾರೆಯಾಗೆ

ಗುರುಕಾರುಣ್ಯಮುಹೂರ್ತಕ್ಕೆ ಜನನ ಮರಣಂಗಳೆಂಬ ತೆರೆಯರ್ ಪಿಡಿದ ಸಂಸಾರದ ತೆರೆ ಸರಿಯೆ, ನಂದಿಯ ಮುಖದ ಮದವಣಿಗನಂ ಕಂಡು ನಿಷ್ಠೆ ನೇಮಂಗಳ ಜೀರಗೆಬೆಲ್ಲಂಗಳಂ ತಳಿದು ಪ್ರಾಣೇಶ್ವರನಂ ಪರಮಪ್ರೀತಿಯೊಳಪ್ಪಿ ಕೊಂಡು, ಸಂಗಂ ಪತಿಯಾಗಿ ಬಸವಂ ಸತಿಯಾಗಿ ಪಂಚಾಕ್ಷರಿಯೆ ಗತಿಯಾಗಿ ಸದ್ಭಕ್ತಿಯೆ ಮತಿಯಾಗಿ, ಸಂಗನಬಸನಂ ಗುರುಲಿಂಗಶ್ರೀಚರಣನಖಮಯೂಖ ಚಂದ್ರಿಕಾಚಕೋರಾಯಮಾನಂಶೈವಾನುರಾಗಸಂಪತ್ಸುಖತರಂಗಿಣೀನಿಮಗ್ನ ಚಿತ್ತಂ ಮಾಯಾನಿರುಹರಣಂ ನಿರಾವರಣನಿರ್ಮಳನಿಜಾನಂದ ನಿರುಪಾಧಿಕ ಜ್ಯೋತಿರ್ಲಿಂಗಹರುಷಪುಳಕಿತಶರೀರನಾಗುತಂ ಕಪ್ಪಡಿಯ ಸಂಗಮದೊಳಿರೆ ಯಿರೆ ||

## ಅಭ್ಯಾಸ

### ೧. ಕಠಿಣ ಶಬ್ದಗಳ ಅರ್ಥ :—

ದರ್ಪಕಧ್ವಂಸಿ—ಮನ್ಮಥನನ್ನು ಕೊಂದವನು, ಶಿವ. ಕೂರ್ಪರ್—ಪ್ರೀತಿಸು ವವರು. ನೋಳ್ಪರ—ನೋಡುವವರ. ಬೇಳ್ಪರ—ಬೇಡುವವರ. ಅವಸರ—ಸಮಯ, ಸಂದರ್ಭ, ಆತುರ. ಸಲಿಲ—ನೀರು. ಮಳಯಜ—ಶ್ರೀಗಂಧ. ಪ್ರಸೂನ—ಹೂವು. ಕವಲಿರಿದು—ಕವಲು ಬಿಟ್ಟು. ಪ್ರವಾಳಜಾಳ—ಹವಳದ ಸಮೂಹ. ಬಿಸಕಂದ—ಕಮಲ. ಅಂಕುರ — ಮೊಳಕೆ. ವಿದ್ಯುಲ್ಲತಾಗರ್ಭೀಕೃತ—ಮಿಂಚನ್ನೊಳಗೊಂಡ. ಶಾರದಾಭ್ರ—ಶರತ್ಕಾಲದ ಮುಗಿಲು. ವಿಭ್ರಮ—ವೈಭವ. ಲಲಾಟ—ಹಣೆ. ಗರಳ—ವಿಷ. ಕಲ್ಪಕುಜ—ಕಲ್ಪವೃಕ್ಷ. ತುರುಗಲು—ಸಮೂಹ. ಪಟಲ—ತೆರೆ. ತರಣಿ—ಸೂರ್ಯ. ಕಡಂಗೊಡುವ—ಸಾಲಕೊಡುವ. ಪ್ರಭಾದುಕೂಲ—ಕಾಂತಿಯುಕ್ತವಾದ ರೇಷ್ಮೆಯ ಬಟ್ಟೆ. ಬೆಗಡು—ಆಶ್ಚರ್ಯ. ಅನುತಾಪ—ಸಂಕಟ. ಹೊಮ್ಮು—ಹಬ್ಬು, ಉಂಟಾಗು. ಮಾಣ್—ಬಿಡು. ಅಳ್—ಮುಳುಗು. ಪಿಂಗು—ಮರೆಯಾಗು. ಚಂಡಿಕೆ—ಜುಟ್ಟು. ತಮ—ಕತ್ತಲೆ. ಹೊದ್ದಿದರ್—ಕೂಡಿದವರು. ಸಾರ್ದರ್—ಹತ್ತಿರ ಬಂದವರು. ತಕ್ಕೈಸು—ಆಲಿಂಗಿಸು, ತಬ್ಬು. ಪಳವಿಸು—ಅಳು. ಪಲುಂಬು—ಹಲುಬು. ಆಲಿಡು—ಕೂಗು. ಸಿವದಿಡು—ಶಿವಘೋ ಎಂದು ಕೂಗು. ಅರ್ಘವಣೆ—ತೀರ್ಥ. ತೀವು—ತುಂಬು. ಆರೋಗಣೆ—ನೈವೇದ್ಯ, ಆಹಾರ. ನಿರ್ವೇದ—ಖೇದ, ಸಂಕಟ. ಪಟ್ಟಿರು—ಮಲಗಿರು. ನೇತ್ರತ್ರಯ—ಮುಕ್ಕಣ್ಣ, ಶಿವ. ಮರವಡು—ನಿಶ್ಚೇಷ್ಟಿತನಾಗು. ನಿರೋಧ—ವ್ಯಥೆ. ಆವೆ—ನಾವೆ. ಪ್ರತ್ಯಕ್ಷ—ಪವಾಡ, ಅದ್ಭುತ ಕಾರ್ಯ. ಸೈತಿಡು—ಸಂತೈಸು. ಭಾರೈಸು—ಭಾರವಾಗು. ತೇರೈಸು—ಹಿಮ್ಮೆಟ್ಟಿಸು. ದೃಷ್ಟಿವಾರಿ—ತನಗೂ ದೇವರಿಗೂ ನಡುವೆ ಬಂದವರನ್ನು ಕೊಲ್ಲುವೆನೆಂಬ ಪ್ರತಿಜ್ಞೆ. ಕಮನೀಯ—ಮನೋಹರ. ಶೃಂಗ—ಕೊಂಬು. ಅಭಂಗ—ಅಕ್ಷಯ. ಕಕುದ್ವಳಯ—ಗೂಳಿಯ ಬೆನ್ನ ಹಿಣಿಲಿನ ಪ್ರದೇಶ. ಬೋಳೆಯ—ದೇವತೆ. ನ್ಯೆಯಿಕ್ಕು—ನಮಸ್ಕರಿಸು.

ಸುಲಿಪಲ್ಲು—ಹೊಳೆಯುವ ಹಲ್ಲು. ಅವಗಾಹ—ಸ್ನಾನ. ಸದ್ಯೋಜಾತ—ಆಗ ತಾನೇ ಹುಟ್ಟಿದ. ಓವು—ಪ್ರೀತಿಸು. ಪಟಹ—ಭೇರಿ. ಸುಮನಸ ವೃಷ್ಟಿ—ಹೂ ಮಳೆ. ಮೂರ್ಧ್ನಿಘ್ರಾಣ—ಪ್ರೀತಿಯಿಂದ ತಲೆಯನ್ನು ಮೂಸಿನೋಡುವುದು. ಸಂಚು—ರಹಸ್ಯ. ಸುಖಜಳಬಿಂದು—ಆನಂದಾಶ್ರು. ತೆರೆಯರ್—ತೆರೆ ಹಿಡಿಯುವವರು. ಮಯೂಖ—ಕಾಂತಿ. ಚಂದ್ರಿಕಾ—ಬೆಳುದಿಂಗಳು. ಮಾಯಾನಿರುಹರಣ—ಮಾಯೆಯನ್ನು ನಿವಾರಿಸುವವನು. ನಿರಾವರಣ—ಮಾಯೆಯಿಲ್ಲದವನು. ನಿರುಪಾಧಿಕ—ಯಾವ ತೊಂದರೆಯೂ ಇಲ್ಲದ.

**೨. ಇವುಗಳಿಗೆ ಸಂದರ್ಭೋಚಿತವಾದ ಟಿಪ್ಪಣಿ ಬರೆಯಿರಿ :—**

೧. ತೊಟ್ಟನಿಂತು ಕಣ್ ನೋಡದೆ ಹುಣ್ಣ ನೋಡದೆ ಹೋಗೆಂಬರೆ.
೨. ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ.
೩. ಅರ್ಚಿಸಿತಕ್ಕೆ ಫಲವಾಯ್ತು.
೪. ವೃಷಭನ ಮುಖಾಂತರದಿಂದಾಪೆ ಬಂದಪೆವು.
೫. ನಂಬಿದವರ ಗೋಣಂ ಕೊಯ್ವರೆ.

**೩. ಪ್ರಶ್ನೆಗಳು :—**

೧. ಬಸವಣ್ಣನವರ ದುಃಖಕ್ಕೆ ಕಾರಣವನ್ನು ತಿಳಿಸಿ.
೨. ಬಸವಣ್ಣನವರ ಪ್ರಲಾಪದಲ್ಲಿ ವ್ಯಕ್ತವಾಗುವ ಭಕ್ತಿಮಹಿಮೆಯನ್ನು ವಿವರಿಸಿ.
೩. ಈಶ್ವರ ಬಸವಣ್ಣನವರನ್ನು ಹೇಗೆ ಸಮಾಧಾನಪಡಿಸಿದನು ?